# ಚೇಳಗುರಿಕೆ ಎರ್ರಿತಾತ: ಸಾಂಸ್ಕೃತಿಕ ಸಂಕಥನ

(ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ಹೆಚ್. ಮಲ್ಲಿಕಾರ್ಜುನ



ಮಾರ್ಗದರ್ಶಕರು
ಡಾ. ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ





ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೯

# ಚೋಳಗುರಿಕೆ ಎರ್ರಿತಾತ: ಸಾಂಸ್ಕೃತಿಕ ಸಂಕಥನ

(ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು
ಹೆಚ್. ಮಲ್ಲಿಕಾರ್ಜುನ

ಮಾರ್ಗದರ್ಶಕರು
ಡಾ.ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ





ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೯

## ದೃಢೀಕರಣ ಪತ್ರ

ಹೆಚ್.ಮಲ್ಲಿಕಾರ್ಜುನ ಅವರು ಚೀಳಗುರಿಕೆ ಎರ್ರಿತಾತ ಸಾಂಸ್ಕೃತಿಕ ಸಂಕಥನ ಎಂಬ ಶೀರ್ಷಿಕೆಯ ಪ್ರೌಢಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲೆಂದು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಈ ಪ್ರೌಢಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇತರ ಉದ್ದೇಶಗಳಿಗಾಗಲಿ ಇವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು
ಡಾ.ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ: ೧೮.೧೧.೨೦೦೯

## ಪ್ರಮಾಣ ಪತ್ರ

**ಚೀಳಗುರಿಕೆ ಎರ್‍ರಿತಾತ ಸಾಂಸ್ಕೃತಿಕ ಸಂಕಥನ ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ.ಮಂಜುನಾಥ ಬೇವಿನಕಟ್ಟಿ, ಪ್ರಾಧ್ಯಾಪಕರು. ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಸಂಶೋಧನ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಯಾವುದೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.**

**ಸಂಶೋಧಕ**

ಹೆಚ್.ಮಲ್ಲಿಕಾರ್ಜುನ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ: ೧೮.೧೧.೨೦೦೯

## ಅನಂತ ನೆನೆಕೆಗಳು

ಬಳ್ಳಾರಿ ಜಿಲ್ಲೆಯು ಪ್ರಾಚೀನ ಕಾಲದಿಂದಲೂ ಹಲವು ಮತ ಪಂಥಗಳಿಗೆ ಆಶ್ರಯ ನೀಡಿದ ಪ್ರಮುಖ ಕೇಂದ್ರ ಸ್ಥಳ. ಕರ್ನಾಟಕದ ಹಲವು ಆಧ್ಯಾತ್ಮಿಕ ಪಂಥಗಳಾದ ನಾಥ, ಸೂಫಿ, ಸಿದ್ಧ, ಶರಣರಂತೆ ಇಲ್ಲಿ ಅವಧೂತ ಪರಂಪರೆಯೊಂದು ಬೆಳೆದು ಬಂದಿದೆ. ಇಂಥಹ ಪರಂಪರೆಗೆ ತುಂಬಾ ಪ್ರಾಚೀನ ಇತಿಹಾಸವಿದ್ದರೂ, ಅದರ ಅಧ್ಯಯನ ಹೆಚ್ಚು ವ್ಯಾಪಕ ಪಡೆದಿದ್ದು ಹದಿನೇಳನೇಯ ಶತಮಾನದಿಂದೀಚೆಗೆ ಎನ್ನಬಹುದು. ಅವಧೂತ ಎಂದರೆ ಸಂಸಾರ ಬಂಧನದಿಂದ ಮುಕ್ತವಾಗಿ ಆತ್ಮನಲ್ಲಿಯೇ ವಿಹರಿಸುವ ಆಧ್ಯಾತ್ಮಿಕ ಜೀವಿಗಳೇ ಅವಧೂತರು. ಈ ಪರಿಸರದಲ್ಲಿ ಹಲವು ಮಂದಿ ಅವಧೂತರು ಅವತರಿಸಿ ತಮ್ಮ ಲೀಲೆಗಳಿಂದ ಜನಪ್ರಿಯರಾಗಿದ್ದಾರೆ. ಅವರಲ್ಲಿ ಒಬ್ಬರಾದ ಚೇಳಗುರಿಕೆ ಎರ್ರಿತಾತನವರ ಕುರಿತು ಸಂಶೋಧಿಸಿದ ಮಹಾಪ್ರಬಂಧ ಇದಾಗಿದೆ.

ಅಂಥಹ ಅಧ್ಯಯನಕ್ಕೆ ಅನುಕೂಲ ಮಾಡಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಮಾನ್ಯ ಡಾ.ಎ.ಮುರಿಗೆಪ್ಪ ಅವರಿಗೂ, ನನ್ನ ಅಧ್ಯಯನಕ್ಕೆ ಪೂರಕವಾದ ವಿಚಾರಗಳನ್ನು ಚರ್ಚಿಸುತ್ತಾ ಹತ್ತು ಹಲವು ಆಲೋಚನಾ ಕ್ರಮಗಳನ್ನು ತಿಳಿಸಿ ಸೈದ್ಧಾಂತಿಕ ನೆಲೆಗಟ್ಟಿನ ಮೂಲಕ ಮಹಾಪ್ರಬಂಧವನ್ನು ಕಟ್ಟಲು ಸಹೃದಯತೆಯಿಂದ ಉನ್ನತ ಮಾರ್ಗದರ್ಶನ ಮಾಡಿದ ವಿದ್ವಾಂಸರು, ನನ್ನ ಗುರುಗಳು ಹಾಗೂ ಕುಲಸಚಿವರಾದ ಪ್ರೊ.ಮಂಜುನಾಥ ಬೇವಿನಕಟ್ಟಿಯವರ ಅನಂತ ಪ್ರೀತಿಗೆ ನಾ ಚಿರಋಣಿ. ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಪ್ರೊ. ವೀರೇಶ ಬಡಿಗೇರ ಅವರನ್ನು ಸ್ಮರಿಸುತ್ತೇನೆ.

ಅಧ್ಯಯನಕ್ಕೆ ಪೂರಕವಾದ ವಿಷಯವನ್ನು ಚರ್ಚೆಯ ಮೂಲಕ ವಿಭಿನ್ನ ರೀತಿಯ ನಿಲುವುಗಳನ್ನು ತಿಳಿಸಿದ ವಿಭಾಗದ ವಿದ್ವಾಂಸರುಗಳಾದ ಡಾ.ಮೊಗಳ್ಳಿ ಗಣೇಶ, ಡಾ.ಸ.ಚಿ.ರಮೇಶ್, ಡಾ.ಹೆಬ್ಬಾಲೆ ಕೆ.ನಾಗೇಶ್, ಸಿ.ಟಿ.ಗುರುಪ್ರಸಾದ್ ಹಾಗೂ ವಿಭಾಗದ ಸಿಬ್ಬಂದಿಗಳಾದ ಶ್ರೀ ಅಜಿತ್ ಹಡಪದ ಮತ್ತು ಖಾಸಿಂಭಾಷ ಅವರಿಗೂ ನನ್ನ ನೆನೆಕೆಗಳು.

ಮಹಾಪ್ರಬಂಧದ ಹಲವು ತಾತ್ವಿಕ ವಿಚಾರಗಳನ್ನು ಕಲಿಸಿಕೊಟ್ಟ ಡಾ.ಮಲ್ಲಿಕಾರ್ಜುನ ವಣೇನೂರು, ಪ್ರೊ.ಲಕ್ಷ್ಮಣ್ ತೆಲಗಾವಿ, ಪ್ರೊ.ರಹಮತ್ ತರೀಕೆರೆ, ಡಾ.ಮಲ್ಲಿಕಾಘಂಟಿ, ಡಾ.ಅಮರೇಶ ನುಗಡೋಣಿ, ಡಾ.ಬಿ.ಎಂ.ಪುಟ್ಟಯ್ಯ, ಡಾ.ರವೀಂದ್ರನಾಥ, ಡಾ.ತಾರೀಹಳ್ಳಿ ಹನುಮಂತಪ್ಪ, ಡಾ.ಚಿನ್ನಸ್ವಾಮಿ ಸೋಸಲೆ, ಡಾ.ವಿಕ್ರಮ ವಿಸಾಜಿ, ಡಾ.ರಾಜಶೇಖರ ಹಳೇಮನೆ, ಡಾ.ನಾಗರಾಜ ಸಂಪಿಗೆ, ಡಾ.ಶಿವಾಜಿ ಕಾಂಬ್ಳೆ ಅವರನ್ನು ಪ್ರೀತಿಯಿಂದ ನೆನೆಯುವೆ.

ಅಧ್ಯಯನದ ಹಲವು ಸಂದರ್ಭಗಳಲ್ಲಿ ಸೂಕ್ತ ಸಲಹೆಗಳನ್ನು ನೀಡಿದ ಹಿರಿಯರುಗಳಾದ ಪ್ರತಾಪರೆಡ್ಡಿ ಜೆ.ಡಿ.ಎಸ್. ಜಿಲ್ಲಾಧ್ಯಕ್ಷರು, ಮುಂಡ್ರಿಗಿ ನಾಗರಾಜ್ ಜೆ.ಡಿ.ಎಸ್. ಯುವ ಮುಖಂಡರು, ಎ.ಮಾನಯ್ಯ. ದ.ಸಂ.ಸ, ದುರುಗಪ್ಪ ಟಿ, ಶ್ರೀ ಗೋವರ್ಧನ, ಸಣ್ಣ ನಾಗರಾಜ ಅವರನ್ನು ಸ್ಮರಿಸುವೆ.

ಹಿಂದಿನಿಂದಲೂ ಅಧ್ಯಯನಕ್ಕೆ ಪ್ರೇರಕರಾಗಿದ್ದ ಫಾದರ್ ಥಾಮಸ್ ಗುಣಾಳನ್ ಅವರ ಕುಟುಂಬ, ಫಾದರ್ ಜಾನ್‌ಮಾರ್ಕ್ ಅವರ ಕುಟುಂಬ, ಫಾದರ್ ಡೇವಿಡ್ ಗುಣಾಳನ್, ಹೆಚ್.ಸಿ.ಸ್ವಾಮಿ, ಬ್ರದರ್ ಎಜ್ರ, ಬ್ರದರ್ ರಮೇಶ್, ಬ್ರದರ್ ಶಿವರಾಮ್, ಬ್ರದರ್ ಡೇವಿಡ್ ಯರಗುಡಿ, ಬ್ರದರ್ ಆಡಾಮ್, ಬ್ರದರ್ ದೇವೇಂದ್ರ, ವಾಗೇಶ್ ಅವರ ಪ್ರೀತಿ ಸಹಕಾರವನ್ನು ಸ್ಮರಿಸುತ್ತಿರುವೆ.

ಸದಾ ನನ್ನ ಪ್ರಗತಿಗೆ ಬೆನ್ನೆಲುಬಾಗಿ ನಿಂತಿರುವ ನನ್ನಮ್ಮ ಈಶ್ವರಮ್ಮಗೆ, ಸಹೋದರರಾದ ವೀರೇಶ್, ಭೀಮ, ಮೇಘನಾಥ, ಗಂಗಾಧರ, ಬಾಮೈದ ಬಸವರಾಜ ಸಿರಿವಾರ, ತಂಗಿ ಲಕ್ಷ್ಮಿ, ಪುಟಾಣಿಗಳಾದ ವಿಠಲ್, ಶ್ರೀಶೈಲ, ವಿನೋದ, ವಿಜಯ್, ಮಲ್ಲಿ, ಶೈಲಜ, ಶೃತಿ, ಗೌತಮಿ ಅವರ ಸವಿ ನೆನಪುಗಳು.

ನಮ್ಮ ಮಹಾವಿದ್ಯಾಲಯದ ಸಹೃದಯ ಮನಸ್ಸಿನ ಪ್ರಾಂಶುಪಾಲರಾದ ಎ.ಹೇಮರೆಡ್ಡಿ ಹಾಗೂ ಹಿರಿಯ ಸಹದ್ಯೋಗಿಗಳಾದ ಮಂಜುನಾಥರಾವ್, ಹನುಮಂತ್ರಾಯ, ನರಸಿಂಹಮೂರ್ತಿ, ಪುಟ್ಟರಾಜ್, ಸತ್ಯವತಿ, ಶಿಲ್ಪಾಕುಲಕರ್ಣಿ, ರೇಖಾ, ಗಂಗಮ್ಮ, ವೀರಣ್ಣ ಹಾಗೂ ವಲಿಭಾಷಾ ಅವರ ಸಹಾಯ ಸಹಕಾರವನ್ನು ನೆನೆಯುತ್ತೇನೆ. ದುರುಗಪ್ಪ ಮೋಕ, ಶಾಂತಲಾಬಿಲ್ಲವ, ಡಾ.ಕಲಾವತಿ, ಪ್ರೇಮಲತ, ಈರಮ್ಮ, ಗ್ಯಾನಪ್ಪ ಬಡಿಗೇರ್, ಶಿವಪ್ಪ ಕೋಳೂರ್, ನಾರಾಯಣ ನಾಯ್ಕ್, ಗಿರ್‍ಯಾನಾಯ್ಕ್, ಬೊಮ್ಮಯ್ಯ ಅವರ ಆತ್ಮೀಯ ಮನಸ್ಸುಗಳನ್ನು ಸ್ಮರಿಸುತ್ತಿರುವೆ.

ಈ ಅಧ್ಯಯನ ಪೂರ್ಣಗೊಳ್ಳಲು ಪ್ರಮುಖ ಪ್ರೇರಕರು, ಹಿತೈಷಿಗಳಾದ ಪ್ರೀತಿಯ ಅಣ್ಣ ಸೋಮಶೇಖರ್ ಅವರು ಹುರಿದುಂಬಿಸಿದ ಬಗೆಯನ್ನು ನಾನೆಂದು ಮರೆಯಲಾರೆ.

ವಿದ್ಯಾರಣ್ಯ ಆವರಣದ ಹಿರಿಯ ಸಂಶೋಧನಾರ್ಥಿಗಳು ಹಾಗೂ ಸನ್ಮಿತ್ರರಾದ ಹೋಳಿಬಸಪ್ಪ, ರಾಮ್ ಕಲಾಲ್, ಜಗದೀಶಕುಮಾರ್, ಮಲ್ಲಿಕಾರ್ಜುನ ಮಾನ್ವಡೆ, ಅರುಣ್ ಜೋಳದ ಕೂಡ್ಲಿಗಿ, ಬಸವರಾಜ್ ಎ.ಡಿ, ಚಂದ್ರಪ್ಪ ಸೊಬಟಿ, ಲಿಂಗಣ್ಣ ಹೆಚ್, ನಾಗರಾಜ ಚಿಂತ್ರಪಳ್ಳಿ, ಹುಲುಗಪ್ಪ ನಾಯಕ, ನಿರಂಜನ ರಾಣಾ, ಗವಿಸಿದ್ದಪ್ಪ, ವೇದಾಂತ, ಮೇಘನಾಥ, ಧರ್ಮವೀರ, ಕಾಂತ್ರಾಜ್, ಮಾಣಿಕಪ್ಪ, ಮೋನಿ, ಯಲ್ಲಪ್ಪ, ಮಹಾಂತಗೌಡ, ರಂಗಸ್ವಾಮಿ, ಅಮರೇಶ್, ಪಂಪಾಪತಿ, ವಿಶ್ವನಾಥ, ರಮೇಶ್, ಹನುಮೇಶ್, ಯೋಗೀಶ್, ವೀರೇಶ್, ಮಲ್ಲಯ್ಯ, ಚೆನ್ನಪ್ಪ, ರಾಜಶೇಖರ್, ನಾಗಭೂಷಣ, ಸುದೀಪ್, ಶೇಖರಾಚಾರಿ, ವಿಮಲಾ ಬಿಲ್ಲವ, ವಿಜಯಲಕ್ಷ್ಮಿ, ವಿಪ್ಲವಿ, ಸುಮನಾ, ಸುಚಿತ್ರ, ಸುಕನ್ಯಾ, ಪ್ರಜ್ಞಾ, ಶಿಲ್ಪ, ರೇಖಾ, ಶಕೀಲಾ, ಸುಸನ್ನಕುಮಾರಿ, ನಿರ್ಮಲ, ಚೌರಮ್ಮ, ರೂಪ, ಕೋಮಲಾ, ತುಳಸಿ, ಗುಂಡಮ್ಮ, ಬಾನುಮತಿ ಅವರ ಸೂಕ್ತ ಸಲಹೆಗಳನ್ನು ಮರೆಯಲಾರೆ.

ವಿಶೇಷವಾಗಿ ಮಹಾಪ್ರಬಂಧದ ಕರಡನ್ನು ತಿದ್ದಿ, ಸೂಕ್ತ ಸಲಹೆಗಳನ್ನು ನೀಡಿದ ಹಿರಿಯರು ಹಾಗೂ ಸನ್ಮಿತ್ರರಾದ ಕುಮಾರ್ ಜೆ, ತುಕಾರಾಮ್, ಸುರೇಶ್ ಕೆ.ಸಿ, ಹನುಮಂತ್ರಾಯ ದೊಡ್ಡಮನಿ, ಶಂಕರಾನಂದ, ರಾಜಶೇಖರ್, ಬಸವರಾಜ್ ಬಿ.ಎಸ್, ಅವರನ್ನು ಪ್ರೀತಿಯಿಂದ ನೆನೆಯುವೆ.

ಕ್ಷೇತ್ರಕಾರ್ಯದಲ್ಲಿ ನನ್ನ ಜೊತೆಯಲ್ಲಿ ತಿರುಗಾಡಿ ಹಲವು ರೀತಿಯ ಆಲೋಚನಾ ಕ್ರಮಗಳನ್ನು ತಿಳಿಸಿದ ಹಿರಿಯ ಸಂಶೋಧನಾ ವಿದ್ಯಾರ್ಥಿ ಹಾಗೂ ಸಹೋದರ ಮನಸ್ಕರಾದ ಓಬಯ್ಯ ಡಿ, ಸುರೇಶ್ ಕುಮಾರ್, ಅನಿಲ್‌ಕುಮಾರ್, ರಂಜಿತ್‌ಕುಮಾರ್, ವಿರೂಪಾಕ್ಷಿ, ರಂಗನಾಥ, ಶ್ರೀಶೈಲ, ಕೆ.ರಾಮಾಂಜನೇಯ, ಜಾಷ್ವ, ಹನುಮಂತ, ನಾಗಪ್ಪ, ಬಸವರಾಜ್, ಎರ್‍ರಿಸ್ವಾಮಿ ಸಣ್ಣ ತಮ್ಮ ಅವರ ಸಹಾಯವನ್ನು ಸ್ಮರಿಸುವೆ.

ಸರಿಯಾದ ಸಮಯಕ್ಕೆ ಬಹುತಾಳ್ಮೆಯಿಂದ ಅಚ್ಚುಕಟ್ಟಾಗಿ ಅಕ್ಷರ ಸಂಯೋಜನೆ ಮಾಡಿದ ಮಿತ್ರ ಕೆ.ವೀರೇಶ ಅವರನ್ನು ನೆನೆಯದಿರಲಾರೆ.

ನಿಮ್ಮವ

**ಹೆಚ್. ಮಲ್ಲಿಕಾರ್ಜುನ, ಮೋಕ**

ಪರಿವಿಡಿ

## ಅಧ್ಯಾಯ - ೧

# ಅಧ್ಯಯನದ ಮಹತ್ವ, ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

೧.೧. ಪ್ರವೇಶ

೧.೨. ಅಧ್ಯಯನದ ಮಹತ್ವ

೧.೩. ಅಧ್ಯಯನದ ಉದ್ದೇಶ

೧.೪. ಅಧ್ಯಯನದ ವ್ಯಾಪ್ತಿ ಮತ್ತು ವೈಧಾನಿಕತೆ

೧.೫. ಅಧ್ಯಯನದ ಸ್ವರೂಪ

# ಅಧ್ಯಯನದ ಮಹತ್ವ, ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

## ೧.೧. ಪ್ರವೇಶ

ಆದಿಕಾಲದಿಂದ ಹಿಡಿದು ಅರ್ವಾಚೀನ ಬದುಕಿನೆಡೆಗೆ ಸಾಗಿಬಂದ ಹತ್ತು ಹಲವು ಪರಿಕರಗಳಲ್ಲಿ ಧಾರ್ಮಿಕ ಪಂಥಗಳು ಬಹುಮುಖ್ಯವಾದವು. ಅದರ ನೀತಿ ನಿಯಮಗಳು ದೇಶದಿಂದ ದೇಶಕ್ಕೆ ಕಾಲದಿಂದ ಕಾಲಕ್ಕೆ, ಧರ್ಮದಿಂದ ಧರ್ಮಕ್ಕೆ ವಿಭಿನ್ನ ರೀತಿಯ ದೈವೀಕತೆಯ ಸಂಚಯನ ಮೂಡಿಸಿದವು. ಅವುಗಳು ಹೇರಿರುವ ರೀತಿ ರಿವಾಜುಗಳಿಗೆ ಒಪ್ಪಿತವಾಗಿಯೇ ಇಂದು ವ್ಯವಸ್ಥಿತವಾದ ಸಾಂಪ್ರದಾಯಿಕ ಸನ್ನಿವೇಶಗಳು ಮನುಷ್ಯನನ್ನು ನಿರ್ಲಿಪ್ತಗೊಳಿಸಿ ಬಂಧಿಸಿಬಿಟ್ಟಿವೆ. "ಏನಾದರೂ ಮಾಡು, ಎಂತಾದರೂ ಮಾಡು ಮೊದಲು ದೈವಕ್ಕೆ ತಲೆಬಾಗು" ಎಂಬಂತಹ ಸಂದೇಶಗಳು ನೇರ ಮತ್ತು ಮಾಧ್ಯಮಗಳ ಮೂಲಕ ಗಟ್ಟಿಗೊಳಿಸುತ್ತಿರುವುದು ಬೇರೆ ಹೇಳಬೇಕಾಗಿಲ್ಲ. ಪ್ರತಿಯೊಂದು ವಸ್ತು ವಿಷಯವನ್ನು ಅನುಮಾನಿಸುವ ಮತ್ತು ತಾರ್ಕಿಕತೆಗೊಡ್ಡುವ ಮನುಷ್ಯ, ಅದರ ದಬ್ಬಾಳಿಕೆಯನ್ನು ನೇರವಾಗಿ ತನ್ನ ಹೆಗಲ ಮೇಲೆ ಹಾಕಿಕೊಳ್ಳುತ್ತಾ ಬಂದಿದ್ದಾನೆ. ಹಾಗೆಂದ ಮಾತ್ರಕ್ಕೆ ಎಲ್ಲವನ್ನು ಸ್ವೀಕರಿಸಿದ ಎನ್ನುವ ಅಭಿಪ್ರಾಯವಲ್ಲ. ಹಲವನ್ನು ಎದುರಿಸಲು ನಿಂತಿರುವುದಂತು ಅಲ್ಪಮಟ್ಟಿಗೇನೆ. ಹಾಗಾಗಿಯೇ ಮನುಷ್ಯನ ಜನನದಿಂದ ಮರಣದವರೆಗೂ ದಿನಂಪ್ರತಿ ದೈವೀಕರಣದ ಪರಿಕಲ್ಪನೆಯೊಡನೆ ನಿತ್ಯ ಹಾಗೂ ನಿಕಟ ಸಂಬಂಧ ಹೊಂದಿರುವುದು ಸುಳ್ಳಲ್ಲ. ನಾನು ನಾಸ್ತಿಕನು ಯಾವುದರ ಮೇಲೆ ನಂಬಿಕೆ ಹಾಗೂ ಭರವಸೆಯಿಡುವುದಿಲ್ಲ ವೆಂದು ಒಣ ಹೆಮ್ಮೆಗೆ ಹೇಳುತ್ತಾನೆಯೇ ಹೊರತು, ಆತನ ಅಂತರಂಗದ ತುಮುಲ ಯಾವಾಗಲೂ ಹಲವು ಧಾರ್ಮಿಕ ನಂಬಿಕೆಯ ಕಡೆಗೆ ವಾಲಿರುವುದಂತು ಸತ್ಯ. ಅದಿಲ್ಲದಿದ್ದರೆ ಬದುಕಿನ ಕುರಿತು ಅಷ್ಟೊಂದು ಕಾಳಜಿ ಮಾಡುವ ಗೋಜಿನಿಂದ ದೂರ ಉಳಿಯುತ್ತಿದ್ದ. ಅರಿವಿದ್ದೋ ಅರಿವಿಲ್ಲದೆಯೋ ಪ್ರಕೃತಿಯನ್ನೆಲ್ಲಾ ಅಗಾಧಶಕ್ತಿಯ ಮುನ್ನೋಟವೆಂಬಂತೆ ಮನಗಂಡು ಪ್ರಾಚೀನ ಕಾಲದಿಂದಲೂ ಪೂಜಿಸುತ್ತಾ ಹಂತ ಹಂತಗಳಲ್ಲಿ ಅದರ ನಿಗೂಢತೆ ಹಾಗೂ ಸತ್ಯಾನ್ವೇಷಣೆಯೆಡೆಗೆ ತನ್ನ ಮನಸ್ಸನ್ನು ಕೇಂದ್ರೀಕರಿಸಲು ಪ್ರಯತ್ನಿಸಿದ.

ಬದಲಾವಣೆಯ ನಾಗಾಲೋಟದಲ್ಲಿ ನಗರೀಕರಣ, ಸಂಪಾದೀಕರಣ, ಸ್ವಾರ್ಥೀಕರಣಗಳಲ್ಲಿ ಛಿದ್ರಗೊಂಡ ಮನಸ್ಸನ್ನು ಮನಸ್ಸಾಂತರದೊಳಗೆ ಪ್ರತ್ಯಕ್ಷವಲ್ಲದಿದ್ದರೂ ಪರೋಕ್ಷವಾಗಿ ಅದನ್ನು ಕಟ್ಟಿಸಿ, ಆ ಮೂಲಕ ಒಗ್ಗೂಡಿಸುವ ಚಿಂತನಾಕ್ರಮವನ್ನು ಅನುಸರಿಸಿರುವುದು ಕಂಡುಬರುತ್ತದೆ. ಕಠಿಣವಾದ ವೇದ ಆಗಮಗಳ

ಕಡೆಗೆ ವಾಲುವ ಮನಸ್ಥಿತಿಯಿಂದ ದೂರವಿದ್ದು, ಬದುಕಿನ ಮನಸ್ಸಿಗೆ ಹತ್ತಿರವಾಗುವ ಮಾರ್ಗವನ್ನು ಸರಳವಾದ ಅಲೌಕಿಕತೆಯೆಡೆಗೆ ನಡೆದುದರ ಪರಿಣಾಮವಾಗಿ ನಾವಿಂದು ಧಾರ್ಮಿಕತೆಯ ಸಡಿಲತೆಯನ್ನು ಕಾಣಬಹುದು. ಅದಿಲ್ಲದಿದ್ದರೆ ಕಬ್ಬಿಣದ ಕಡಲೆಯಂಥ ಆಚಾರ ವಿಚಾರಗಳು ತಲೆನೋವಾಗಿ ಪರಿಣಮಿಸುತ್ತಿದ್ದವು.

ಅಂತಹ ಸಂದಿಗ್ಧ ಮತ್ತು ಸಂಕೀರ್ಣದ ಸಂದರ್ಭದಲ್ಲಿ ಹನ್ನೆರಡನೆಯ ಶತಮಾನವು ಕರ್ನಾಟಕದ ದೃಷ್ಟಿಯಲ್ಲಿ ಒಂದು ಅದ್ವಿತೀಯ ಹಾಗೂ ಅನನ್ಯವಾದ ಕಾಲಘಟ್ಟವದು. ವಚನಕಾರರ ಲೋಕದೃಷ್ಟಿ ಜನ ಸಾಮಾನ್ಯರ ಬದುಕಿಗೆ ಒಂದು ಬಹುದೊಡ್ಡ ಆಸರೆಯನ್ನೇ ಒದಗಿಸಿಕೊಡುವುದರ ಸಲುವಾಗಿಯೇ ಅನುಕೂಲಕರವಾದ ಭಕ್ತಿಯ ಗಾಳಿ ನಾಡಿನಲ್ಲೆಲ್ಲಾ ಪಸರಿಸುವಂತೆ ಮಾಡಿತು. ಕೇವಲ ಮೇಲ್ವರ್ಗದವರ ಮೇಲ್‌ಪಂಥೀಯ ವಾದಗಳಿಂದ ಬೇಸತ್ತ ಸಮೂಹವೊಂದು ನಿಧಾನ ರೀತಿಯಲ್ಲಿ ಬಂಡೆದ್ದು ಆಚರಣೆಗಳನ್ನು ಅವರ ಕಪಿಮುಷ್ಟಿಯಿಂದ ಬೇರ್ಪಡಿಸಿ ತಳಸಮುದಾಯ ಹಾಗೂ ತಳ ದೈವಗಳೆಂದು ಕರೆಯಲ್ಪಡುವವರ ಪಾಲಾದವು. ಅಂದರೆ ಸಂಪೂರ್ಣವಾಗಿ ಪಂಡಿತವರ್ಗದಿಂದ ತೆಗೆಯಲ್ಪಟ್ಟವು ಎಂಬುದು ಪ್ರಸ್ತುತ ಅಧ್ಯಯನದ ವಾದವಲ್ಲದಿದ್ದರೂ ಅದರ ಒತ್ತಡವಂತೂ ಕಡಿಮೆಯಾಗಿದೆ ಎನ್ನುವುದರಲ್ಲಿ ಹುರುಳಿಲ್ಲ. ಬದುಕು ಮನುಷ್ಯನನ್ನೇ ಬಹುದೂರ ನಡೆಸಿಕೊಂಡು ಹೋದುದರ ಪರಿಣಾಮವೋ, ಆತನ ಬೌದ್ಧಿಕತೆಯಲ್ಲಿನ ತಾರ್ಕಿಕತೆಯ ಫಲವೋ ಇಂದು ಇದ್ದುದೆಲ್ಲವನ್ನು ಬಿಟ್ಟು ಇಲ್ಲದುದರ ಕಡೆಗೆ ಪಯಣಿಸಿದ ಅನೇಕ ಯೌಗಿಕ ಪಾರಮಾರ್ಥಿಕರ ಬದುಕು ಹಸನಾಗಿರುವುದು ಕಂಡುಬರುತ್ತದೆ. ಸಂಸಾರದ ಹಂದರದೊಳಗಿದ್ದು ಯಾವುದೋ ಒಂದು ಅಗೋಚರ ಪ್ರಭಾವಕ್ಕೆ ಒಳಗಾಗಿ ಎಲ್ಲವನ್ನು ಬಿಟ್ಟು ಮನಬಂದ ಕಡೆಗೆ ನಿಶ್ಚಿತಗುರಿಗಳಿಲ್ಲದೆ, ಸಿದ್ಧಾಂತ ತತ್ತ್ವಗಳಿಲ್ಲದೆ ಅಲೌಕಿಕತೆಯ ಪರಾಕಾಷ್ಠೆಯನ್ನು ಮೌನವಾಗಿಯೇ ಸಾರಿದ ಮಹಾತ್ಮರ ಬದುಕಿನ ನಿಲುವುಗಳು ಆದರ್ಶವಾಗಿವೆ.

ಸಿದ್ಧರು, ನಾಥರು, ಆರೂಢರು, ಸೂಫಿಗಳು, ಸಾಧು ಸಂತರು ಮುಂತಾದ ಅನುಭಾವಿಗಳು ಕೇವಲ ಕರ್ನಾಟಕದ ನೆಲದಲ್ಲಿ ಜನಿಸಿದವರಾಗಿದ್ದರೂ, ಅವರ ಚಿಂತನೆಗಳು, ವಿಚಾರಗಳು ಪ್ರಾದೇಶಿಕ ಎಲ್ಲೆಯನ್ನು ಮೀರಿ ವಿಶ್ವದೆಲ್ಲೆಡೆ ಮಾನವತೆಯ ಮೌಲ್ಯಗಳಾಗಿ ಪಸರಿಸಿದವು. ಅನುಭಾವಿ ಸಂತರು ಎಲ್ಲಾ ಪಂಥಗಳಲ್ಲಿರುವ ಸಾಮಾಜಿಕ ಸಮಾನತೆಯ ಆಶಯಗಳನ್ನು ವೈದಿಕಶಾಹಿಯ ಪ್ರಬೋಧನೆಗಳಿಗೆ ಪ್ರತಿರೋಧವನ್ನು ಒಡ್ಡುವುದು ಮತ್ತು ಜನಪದರ ನಿಲುವುಗಳಿಗೆ ಹೆಚ್ಚಿನ ಆದ್ಯತೆಯನ್ನು ಒದಗಿಸುವುದು ಅವರ ಮುಖ್ಯಗುರಿಯಾಗಿತ್ತು. ಕೆಲವರು ಮಾತಿನ ಮೂಲಕ ಸಮಾಜವನ್ನು ಎಚ್ಚರಿಸಿದರೆ, ಇನ್ನೂ ಕೆಲವರು ಮೌನದಲ್ಲಿಯೇ ಮಹತ್ತನ್ನು ಮಾಡಿದರು. ಅಂತಹವರ ಆಚಾರ ವಿಚಾರಗಳು, ಪುಣ್ಯ ಕ್ಷೇತ್ರಗಳ ಸ್ಮರಣೆಗಳು ಭಕ್ತ ಜನರ ಹೊರೆಯನ್ನು ಸಂಪೂರ್ಣವಾಗಿ ಇಳಿಸುವುದರ ಬದಲು ಹಗುರವಾಗಿ ಹೆಗಲ ಮೇಲೆ ಹೊತ್ತುಕೊಂಡು ಸಾಗಲು ಸಹಕಾರಿಯಾಗುತ್ತವೆ.

ಹತ್ತೊಂಬತ್ತನೇಯ ಶತಮಾನದ ಹಂಪಿ ಪರಿಸರವನ್ನು ಅವಲೋಕಿಸಿದಾಗ ಅನೇಕ ಅನುಭಾವಿಗಳ, ಸಾಧು ಸಂತರ, ಅಲೌಕಿಕ ಪುರುಷರ ಕಾರ್ಯಗಳಿಗೆ ಯೋಗ್ಯಕ್ಷೇತ್ರವಾಗಿರುವುದು ಕಂಡುಬರುತ್ತದೆ. ಅವರ

ಆಧ್ಯಾತ್ಮಿಕ ವಿಷಯಗಳನ್ನು ಸಾರುವ ವಿಧಾನಗಳು ಬೇರೆ ಬೇರೆಯಾದರೂ ಗುರಿಮಾತ್ರ ಒಂದೇಯಾಗಿರುತ್ತಿತ್ತು. ಬಹುಪಂಥೀಯ ಚಿಂತನೆಗಳು, ಬಹುಸಂಸ್ಕೃತಿಯ ಪಳೆಯುಳಿಕೆಗಳು ಇಂದಿನ ಸಮಾಜದ ಅನಾರೋಗ್ಯವನ್ನು ಸರಿಪಡಿಸುವ ಔಷಧಿಗಳಂತೆ ಸಮಾನತೆಯ ಸಾರವನ್ನು ಸಾರಿದವು. ಅಂತಹ ಅನುಭಾವಿಕ ಪಂಥಗಳಲ್ಲಿ ಅವಧೂತ ಪರಂಪರೆಯು ಒಂದು. ಇಂತಹ ಸಾಂಸ್ಕೃತಿಕ ನೆಲದಲ್ಲಿ ಎಲ್ಲಿಂದಲೋ ಬಂದು ಇಲ್ಲಿಯೇ ನೆಲೆಸಿ ಭಕ್ತರ ಹೃದಯದಲ್ಲಿ ಭಕ್ತಿಯ ಹಣತೆಯನ್ನು ಹಚ್ಚಿ ಉರಿಯುವಂತೆ ಮಾಡಿ, ಅವರ ಕಷ್ಟ ಕಾರ್ಪಣ್ಯಗಳನ್ನು ಪವಾಡ ಸಾದೃಶ್ಯಗಳ ಮೂಲಕ ಸರಿಪಡಿಸಲು ನೆರವಾದವರು ಎನ್ನಲಾದ ಬಳ್ಳಾರಿ ತಾಲೂಕಿನ ಚೇಳಗುರಿಕೆ ಎರ್ರಿತಾತನು ಒಬ್ಬನಾಗಿದ್ದಾನೆ. ಮನೆ, ಮಡದಿ, ಮಕ್ಕಳು, ಉದ್ಯೋಗವನ್ನು ತೊರೆದು ಬದುಕಿನ ಆಗುಹೋಗುಗಳಿಗೆ ತಿಲಾಂಜಲಿಯನ್ನು ಹೇಳುವ ಮೂಲಕ ಅಲ್ಲಲ್ಲಿ ಸಂಚರಿಸಿ ಚೇಳಗುರಿಕೆಯಲ್ಲಿ ಬಂದು ನೆಲೆಸಿದ್ದನ್ನು ಅಧ್ಯಯನದ ತೆಕ್ಕೆಯೊಳಗೆ ಒಳಹೊಕ್ಕು ನೋಡುವುದು ಸೂಕ್ತವೆನಿಸುತ್ತದೆ.

ನಮ್ಮ ಬಹುತೇಕ ಅಧ್ಯಯನಗಳು ಉಳ್ಳಸಂಸ್ಕೃತಿ ಮತ್ತು ಪ್ರಧಾನ ಸಂಸ್ಕೃತಿಗಳನ್ನೇ ಹೆಚ್ಚಾಗಿ ಅಭ್ಯಾಸಿಸುವ ಸಂಪ್ರದಾಯ ಬೇರೂರಿದೆ. ಈಗಾಗಲೇ ಸ್ಥಾಪಿತವಾದ ಎಲ್ಲರೂ ಗುರುತಿಸಿ ಮೇಲ್ಪಂಕ್ತಿಯಲ್ಲಿ ನಿಲ್ಲಿಸಿದ ವಸ್ತುವಿಷಯಗಳೇ ಅಧ್ಯಯನದ ಕೇಂದ್ರಗಳಾಗಿರುವುದು ಮತ್ತು ಅಂತಹ ಆಲೋಚನೆಗಳಿಗೆ ಇಂಬುಕೊಟ್ಟು ಪ್ರಶಂಸಿಸುವುದೇ ಸರಿಯಾದವಾದವೆಂಬಂತೆ ನಿರೂಪಿಸಲಾಗುತ್ತದೆ. ಆದರೆ ಅಲಕ್ಷಿತ ವ್ಯಕ್ತಿಗಳ, ಕ್ಷೇತ್ರಗಳನ್ನು ಅಭ್ಯಾಸಿಸುವುದಿರಲಿ, ಅದರ ಕಡೆ ಹೊರಳಿ ನೋಡಿದರೂ ಸಹ ತಪ್ಪಾಗುತ್ತದೆ ಎಂಬ ಪೂರ್ವಗ್ರಹಿಕೆಯ ಭ್ರಮೆ ಆವರಿಸಿದೆ. ಹಾಗಾಗಿಯೇ ನಿರ್ಲಕ್ಷಿತ ಸಮುದಾಯ ಮತ್ತು ಸಂಸ್ಕೃತಿಗಳ ಕುರುಹುಗಳು ಕೆಲವೊಮ್ಮೆ ನಮಗೆ ಸಿಗದೆ ನಾಶವಾಗಿ ಬಿಡುವ ಸಂಭವವೇ ಹೆಚ್ಚು. ಈ ರೀತಿಯಾಗಿ ಮೇಲೆ ತಿಳಿಸಿದಂತೆ ಕಡೆಗಣಿಸಲ್ಪಟ್ಟ ವಿಭಿನ್ನ ರೀತಿಯ ಸಂಸ್ಕೃತಿಯ ಚಿಂತನೆಗಳು ಏಕೆ ನಡೆಯುತ್ತಿಲ್ಲ? ನಡೆದರೂ ಅವುಗಳ ಪ್ರಮಾಣ ಪ್ರಧಾನ ಧಾರ್ಮಿಕ, ಸಾಂಸ್ಕೃತಿಕ ಧಾರೆಗಳಾಗಿ ಸಮಾನವಾಗಿವೆಯೇ? ಅವುಗಳ ಅಧ್ಯಯನಕ್ಕೆ ಮೇಲ್ಪಂಕ್ತಿಯ ಬಲವಾದ ಕಾರಣಗಳು ಒತ್ತಡ ಪೂರ್ವಕವಾಗಿ ಹೇಗೆ ಹೇರಲಾಗಿದೆ? ಎಂಬಂತಹ ಹತ್ತು ಹಲವು ಪ್ರಶ್ನೆಗಳಿಗೆ ಸಮಂಜಸ ಉತ್ತರವೇ ಅಸ್ಪಷ್ಟವಾಗಿ ಬಿಡುತ್ತದೆ. ಎಲ್ಲೋ ಅಳುವಿನ ಅಂಚಿನಲ್ಲಿದ್ದ ಧಾರ್ಮಿಕ ಪರಂಪರೆ, ಧಾರ್ಮಿಕ ಧಾರೆಗಳನ್ನು ಕುರಿತು ಶಂಭಾ ಜೋಷಿಯವರಿಂದ ಪ್ರಾರಂಭವಾದ ಅಲಕ್ಷಿತ ಧಾರ್ಮಿಕ ಧಾರೆಗಳ ಅಧ್ಯಯನ ಇದುವರೆಗೂ ನಡೆಯುತ್ತ ಬಂದಿರುವುದು ಅಲ್ಪಮಟ್ಟಿಗೇನೆ.

ಅಲಕ್ಷಿತ ಸಮುದಾಯಗಳಷ್ಟೇ ಅಲಕ್ಷಿತ ಸಂಸ್ಕೃತಿಯನ್ನು ನಿರೂಪಿಸುವುದು ಕಷ್ಟದ ಕೆಲಸವೇ ಸರಿ. ಏಕೆಂದರೆ ಅದನ್ನು ರೂಪಾಂತರಕ್ಕಾಗಲಿ ಸ್ಥಿತ್ಯಂತರಕ್ಕಾಗಲಿ ತರುವಾಗ ಎದುರಾಗುವ ತೊಡಕುಗಳು ಅಷ್ಟಿಷ್ಟಲ್ಲ. ಸಹಕಾರಿಯಾದ ವಿಷಯಗಳಿಗಿಂತ ಪ್ರತಿರೋಧವೇ ಅದರ ಆಭರಣವಾಗುವ ಸಂಭವವೇ ಹೆಚ್ಚು. ಅದಕ್ಕಾಗಿಯೇ ಎಲೆ ಮರೆಯ ಕಾಯಿಯಂತಿದ್ದ ಎರ್ರಿತಾತನ ಪವಾಡ ಸಾದೃಶ್ಯ ಬದುಕು ಕೇವಲ ಮೇಲ್‌ಪಂಕ್ತಿಯಲ್ಲಿ ನಿಲ್ಲದೆ ಜಾತಿ ಮತ ಪಂಥಗಳ ಎಲ್ಲೆಯನ್ನು ಮೀರಿ ಆ ಮೂಲಕ ಬಡಭಕ್ತ ಜನರ ಕುರಿತು ನೇರವಲ್ಲದಿದ್ದರೂ ಪರೋಕ್ಷವಾಗಿ ಹೇಗೆ ಸಮ್ಮಿಳಿತವಾಗಿವೆ ಎಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ಶಿಷ್ಟ, ಪರಿಶಿಷ್ಟ ನೆಲೆಯ ಬಿಕ್ಕಟ್ಟುಗಳ ಮೂಲಕ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

## ೧.೨. ಅಧ್ಯಯನದ ಮಹತ್ವ

ಮಧ್ಯಕಾಲೀನ ಸಂದರ್ಭದಲ್ಲಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೆಚ್ಚಾಗಿ ಸಂಚರಿಸುವ ಒಂದು ಅನುಭಾವಿ ಪರಂಪರೆಯೇ ಬೆಳೆದು ಬಂದಿರುವುದು ಕಂಡುಬರುತ್ತದೆ. ಅಂತಹ ಅನುಭಾವಿಗಳಲ್ಲಿ ಬಹುತೇಕರು ದಕ್ಷಿಣ ಕರ್ನಾಟಕದಿಂದ ಕತ್ತಲೆಯ ನಾಡು ಎಂದು ಕರೆಯಲ್ಪಡುವ ಉತ್ತರ ಕರ್ನಾಟಕದ ಕಡೆಗೆ ಪಯಣಿಸಿದ್ದೆ ಜಾಸ್ತಿ. "ಆಧ್ಯಾತ್ಮಕತೆಯ ಕತ್ತಲ" ಎಂಬ ಪರಿಭಾಷೆಯನ್ನು ಬಳಸಿರುವುದು ನೋಡಿದರೆ ಆಗ ವಚನಕಾರರ ಆಧ್ಯಾತ್ಮಿಕ ಸಂಚಲನ ಇಡೀ ಧರೆಯಲ್ಲೆಲ್ಲಾ ಪಸರಿಸಿತ್ತು. ಆದರೆ ಏಕೆ ಕತ್ತಲೆಯ ನಾಡು ಎಂದು ಕರೆದರೋ? ಅದರ ಪರಿಕಲ್ಪನೆಗೆ ಇದ್ದ ಇಂಬುಗಳೇನು? ಎಂಬುದು ಅಸ್ಪಷ್ಟವಾಗಿದೆ. ವಲಸೆ ಬಂದ ಸಾಧು ಸಂತರಲ್ಲಿ ತಮ್ಮ ದೈವಿಕ ಹಸಿವನ್ನು ನೀಗಿಸಿಕೊಂಡು ಹೋದವರಲ್ಲಿ ಮಂಟೇಸ್ವಾಮಿ, ಮಲೆಮಾದೇಶ್ವರರು ಸಹ ಸೇರುತ್ತಾರೆ. ಆದರೆ ಇನ್ನು ಕೆಲವರು ಇಲ್ಲಿಯೇ ನೆಲೆನಿಂತು ಕಾಲ ದೇಶ ಭಾಷೆಗಳ, ಸಂಸ್ಕೃತಿಯ ವಿಭಿನ್ನ ಆಯಾಮಗಳಿಗೆ ಬೆಲೆ ಕೊಡದೆ ತಾವು ನೆಲೆನಿಂತ ಕ್ಷೇತ್ರದ ಜನತೆಯ ಭಾಗಗಳಾಗಿ, ಅವರ ಮನಸ್ಸಿನಲ್ಲಿ ಪೂಜೆಗೊಳ್ಳುವ ದೈವಗಳಾಗಿ ಜನಮಾನಸದಲ್ಲಿ ಬೇರೂರಿ ನಿಂತರು.

ಬಳ್ಳಾರಿಯ ಸುತ್ತಮುತ್ತಣ ಪ್ರಾಂತಗಳಲ್ಲಿಯೂ ಇಂತಹ ಮಹಾಯೋಗಿಗಳು ಮಿಂಚಿ ಮರೆಯಾಗಿದ್ದಾರೆ. ಆದವಾನಿಯ ಲಕ್ಷ್ಮಮ್ಮ, ಗೂಳ್ಯದ ಗಾದಿಲಿಂಗಪ್ಪ, ಎಮ್ಮಿಗನೂರಿನ ಜಡೆಪ್ಪತಾತ, ಬಳಗಾನೂರು ಮರಿಸ್ವಾಮಿಗಳು, ಗುಡ್ಡದ ಗವಿಸಿದ್ದೇಶ್ವರ, ಚೇಳಗುರಿಕೆ ಎರ್ರಿತಾತ, ಹೇಮಕೂಟದ ಶಿವರಾಮಾವಧೂತರು, ಅಯೋಧ್ಯೆಯ ಚಿದಾನಂದಾವಧೂತರು, ವೆಂಕಾವಧೂತರು, ಅಲ್ಲೀಪುರ ಮಲ್ಲಪ್ಪ ತಾತನವರು ಮುಂತಾದವರು. ಅದರಲ್ಲಿ ಬೇರೆ ಬೇರೆ ಯೋಗ ವಿಧಾನದ ಮಾರ್ಗಗಳಿರಬಹುದು, ಪ್ರಾದೇಶಿಕವಾಗಿ ಭಿನ್ನವಾಗಿರಬಹುದು. ಆದರೆ ಅವರು ಜನರನ್ನೇ ಸಾಂಸ್ಕೃತಿಕವಾಗಿ ಒಂದೇ ಹಂದರದೊಳಗೆ ಸೇರಿಸಲು ಪಟ್ಟ ಪ್ರಯತ್ನದ ಹುನ್ನಾರ ಮಾತ್ರ ಒಂದೇಯಾಗಿತ್ತು.

ಆತ್ಮವಾದಿಗಳು ಪಾಮರರ ಬದುಕಿನ ಭಾಗಗಳಾಗಿ ನಿಂತವರು. ಅಂಥಹವರಲ್ಲಿ ಅವಧೂತರ ಸಿದ್ಧಿ ಮತ್ತು ಜನಮುಖಿಧೋರಣೆಗಳು ಬಹುಜನರನ್ನು ಭಕ್ತರನ್ನಾಗಿ ಮಾಡಿದವು. ಅಲೌಕಿಕ ಪರಂಪರೆ ಯೋಗಸಾಧನೆಯಲ್ಲಿದ್ದ ಎರ್ರಿತಾತನು ಒಬ್ಬನಾಗಿದ್ದರು. ಸಂಸಾರದಲ್ಲಿ ಮುಳುಗಿ ಯಾವುದೋ ಅಗಾಧ ಪ್ರಭೆಗೆ ಒಳಗಾಗಿ ಇಹದ ಮೋಹದಿಂದ ಜಾರಿದ ಎರ್ರಿತಾತನ ಮೊದಲ ಹೆಸರು ನಂಜುಂಡ-ನಂಜುಂಡಯ್ಯ-ನಂಜುಂಡಶಾಸ್ತ್ರಿ-ನಿರಂಜನ ಎಂದು. ದೈಹಿಕ ವ್ಯಾಮೋಹಗಳಿಂದ ಜಾರುತ್ತಾ ಮನಸ್ಸಿನ ಒತ್ತಡಗಳಿಂದ ತನ್ನನ್ನು ತಾನು ಬಿಡಿಸಿಕೊಳ್ಳುತ್ತಾ, ಮನಸ್ಸಿನೆಡೆಗೆ ಸಂಚರಿಸುತ್ತಾ ನಿರ್ಗತಿಕನಂತೆ ತಿರುಗಾಡಿದನು. ಮೈಸೂರು ಸೀಮೆಯ ದೊಡ್ಡ ಬಳ್ಳಾಪುರದ ಲಿಂಗದಹಳ್ಳಿಯಲ್ಲಿ ತಂದೆ ನೀಲಕಂಠರಾಧ್ಯ ಮತ್ತು ನಿರ್ಮಲಾಂಬಿಕೆಯ ಮಗನಾಗಿ ಹುಟ್ಟಿದನು.

ಎರ್ರಿತಾತನು ಕೆಲವು ಕಾಲ ಕಲ್ಯಾಣ ದುರ್ಗದಲ್ಲಿದ್ದಾಗ ತಾತನ ಹೆಂಡತಿ ಮತ್ತು ಇತರರು ಚಿಕ್ಕನಾಯಕನ ಹಳ್ಳಿಯಿಂದ ಬಂದು ಆತನನ್ನು ಕರೆದೊಯ್ಯಲು ಪ್ರಯತ್ನಿಸಿದರಂತೆ. ತಾತನ ಪೂರ್ಣಾವಧೂತ ಸ್ಥಿತಿಯನ್ನು

ಕಂಡ ಅವರು ಈತನನ್ನು ಕರೆದೊಯ್ಯುವುದು ಅಸಾಧ್ಯವೆಂದೂ, ಅಪ್ರಯೋಜಕವೆಂದೂ ತಿಳಿದು ಹಿಂದಿರುಗಿ ಹೋಗಿಬಿಟ್ಟಳಂತೆ. ಆ ರೀತಿಯಾಗಿ ತನಗೆ ತಾನು ಪರಿವಿಲ್ಲದ ಸ್ಥಿತಿಗೆ ತಲುಪಿದಾಗ ಕಲ್ಯಾಣದುರ್ಗ, ಮುಷ್ಟೂರು, ಬೆಳಗುಪ್ಪೆ, ಚೀಕಲಗುರಿಕೆ, ಉರವಕೊಂಡೆ ಮುಂತಾದ ಗ್ರಾಮಗಳಲ್ಲಿ ಜನರ ಅವಶ್ಯಕತೆಗೆ ಅನುಗುಣವಾದ ಕೆಲವು ಪವಾಡಗಳನ್ನು ಮಾಡುತ್ತಾ ಭಕ್ತರ ಸಂಖ್ಯೆ ಬೆಳೆದಂತೆಲ್ಲಾ ಅವರ ಕಿರಿಕಿರಿಯನ್ನು ತಾಳದೇ ಬೇಸತ್ತು ಅಲ್ಲಲ್ಲಿ ತಿರುಗಾಡುತ್ತಾ ಚೇಳಗುರಿಕೆಗೆ ಬಂದು ಇಲ್ಲಿಯೇ ನೆಲೆನಿಂತವನೆಂದು ಕೆಲವು ದಾಖಲೆಗಳು ಮತ್ತು ಕ್ಷೇತ್ರಕಾರ್ಯಕ್ಕೆ ಹೋದಾಗ ವಕ್ತೃಗಳು ನೀಡಿದ ಮಾಹಿತಿಯಿಂದ ತಿಳಿಯಲಾಗಿದೆ.

ಕ್ರಿ.ಶ.೧೮೫೩ ಹೇವಳಂಬಿ ಸಂವತ್ಸರ ದಿನದಂದು ಊರ ಹೊರಗೆ ಮಲ್ಲಪ್ಪನ ಮಟ್ಟಿಯಲ್ಲಿ ಬಂದು ನೆಲೆಸಿದ್ದನೆಂದು ಆಗ ಆತನು ಇದ್ದ ಸ್ಥಿತಿಯನ್ನು ಕೃತಿಯೊಂದು ಹೀಗೆ ತಿಳಿಸುತ್ತದೆ.

"ಪರವಶ ಸ್ಥಿತಿಯ ಎರ‍್ರಿತಾತನವರ ಗತಿಮತಿಗಳು
ವಿಚಿತ್ರವೂ, ಊಹಾತೀತವೂ, ಲೌಕಿಕಾನುಭಾವಕ್ಕೆ
ನಿಲುಕಲಾರದವುಗಳು ಆಗಿದ್ದವು"

ಆತನ ಮೇಲ್‌ನೋಟದ ಆಕಾರ ವಿಚಾರವನ್ನು ಗಮನಿಸಿದ ಜನರು ಸಹಜವಾಗಿ ಹುಚ್ಚನೆಂದೇ ತಿಳಿದಿದ್ದರು. ಕರ್ನಾಟಕ-ಆಂಧ್ರ ಗಡಿಭಾಗವಾಗಿದ್ದರಿಂದ ತೆಲುಗು ಭಾಷೆಯ ಬಳಕೆಯಿಂದಾಗಿ ಆತನ ಹುಚ್ಚಿಗೆ 'ಎರ‍್ರಿ' ಎಂಬ ಹೆಸರೇ ಸೂಕ್ತವೆನಿಸಿ ಅಂದಿನಿಂದ ಆತನನ್ನೇ ಎರ‍್ರಿತಾತನೆಂದು ಕರೆದರು. ಹುಚ್ಚ ಎರ‍್ರಿಗಳ ಪ್ರತೀಕವೆಂಬಂತೆ ಆತನ ಅಲೌಕಿಕ ವರ್ತನೆಗಳು ಅಚ್ಚರಿಮೂಡಿಸಿದ್ದವು. ಕೈ ಕಾಲುಗಳ ಬೆರಳುಗಳಲ್ಲಿ ಉಗುರುಗಳು ಬೆಳೆದು, ಜಡೆಯಾಕಾರದ ಕೂದಲು ದಟ್ಟವಾಗಿ ಬೆಳೆದಿದ್ದ ಗಡ್ಡ ಮೀಸೆಗಳು ಅವಧೂತ ಸ್ಥಿತಿಯಲ್ಲಿ ತೇಲಿಸಿದ್ದವು.

ಆತನು ರಂಗಾ ರಂಗಾ ಎಂದು ಮಾತಾನಾಡಿಕೊಳ್ಳುತ್ತಿದ್ದನೆಂದು ತಿಳಿದು ಈತನನ್ನು ಬ್ರಾಹ್ಮಣನೆಂತಲೂ, ಆತನ ಹಸ್ತದ ಭಂಗಿಯನ್ನು ಕಂಡು ಲಿಂಗವಂತನೆಂದು ಕೆಲವರ ಊಹೆಗೆ ಕಾರಣವಾಯಿತು. ಅಲೌಕಿಕ ಪುರುಷರು ಜಾತಿ, ಭಾಷೆ, ಕುಲ ಗೋತ್ರಗಳ ಎಲ್ಲೆಯನ್ನು ಮೀರಿದವರು. ಆದರೆ ಅವರನ್ನು ಒಂದೊಂದು ಜಾತಿಗೆ ಸೇರಿಸಿ ಇಕ್ಕಟ್ಟಿಗೆ ಸಿಲುಕಿಸುವ ಹುನ್ನಾರ ನಿನ್ನೆ ಮೊನ್ನೆಯದಲ್ಲ. ಎರ‍್ರಿತಾತನ ಜಾತಿಯ ಮೂಲ ಕುರಿತಂತೆ ಯಾವುದೇ ಆಧಾರ ಗ್ರಂಥಗಳಲ್ಲಾಗಲೀ, ಐತಿಹ್ಯ ಪುರಾಣಗಳಗಲ್ಲಾಗಲೀ ಅದರ ಕುರುಹುಗಳು ದೊರೆತಿಲ್ಲ. ಆದರೆ ಅವರನ್ನು ವೀರಶೈವೀಕರಣದ ತೆಕ್ಕೆಯೊಳಗೆ ನಿಲ್ಲಿಸಿಬಿಟ್ಟಿರುವುದಂತೂ ಸೋಜಿಗದ ಸಂಗತಿಯಾಗಿದೆ. ರಂಗಾ-ರಂಗಾ ಎನ್ನುವ ಆತನ ಮಾತಿನಿಂದ ಬ್ರಾಹ್ಮಣನೆಂದು ಅಥವಾ ಬೇರೆ ಸಮುದಾಯದವನೆಂದು ವಾದಿಸಿದರೆ ಯಾವ ಪ್ರಯೋಜನವಿಲ್ಲ. ಅಂದಿನ ವಿಚಾರವರ್ಗವೇ ಆತನನ್ನು ಲಿಂಗವಂತನೆಂದು ಹೆಚ್ಚು ಪ್ರಚಾರ ಮಾಡಿದ್ದಾಯಿತು. ಆ ರೀತಿಯ ಜಾತಿಯಿಂದ ಪ್ರಯೋಜನವಾದರೂ ಏನು? ಎಂಬಂತಹ ಮನೋಭೂಮಿಕೆಯೇ ಉಚಿತವೆನಿಸುತ್ತದೆ.

ಎರ್ರಿತಾತನು ಮಾಡಿದರೆನ್ನಲಾದ ಪವಾಡಗಳನ್ನು ಚೇಳಗುರಿಕೆ ಗ್ರಾಮಕ್ಕೆ ಬರುವ ಮುಂಚಿನ ಪವಾಡಗಳು, ಚೇಳಗುರಿಕೆ ಗ್ರಾಮದಲ್ಲಿ ತೋರಿದ ಪವಾಡಗಳು ಎಂದು ಅಧ್ಯಯನದ ಅನುಕೂಲಕ್ಕಾಗಿ ವಿಭಜಿಸಿ ನೋಡುವ ಪ್ರಯತ್ನ ಮಾಡಲಾಗಿದೆ. ಬರಡಾದ ಸ್ತ್ರೀಗೆ ಗರ್ಭಫಲವನ್ನು ನೀಡಿದ್ದು, ಬರಗಾಲದಲ್ಲಿ ಮಳೆ ತರಿಸಿದ್ದು ಕಾಲರಾ ರೋಗದಿಂದ ಗ್ರಾಮವನ್ನು ಮುಕ್ತಿಗೊಳಿಸಿದ್ದು, ಬಂಗಾರದ ಹಾವಾಗಿ ಮಾರ್ಪಡಿಸಿ ಬಡತನ ನಿವಾರಣೆಗೆ ಸಹಕಾರಿಯಾಗಿದ್ದು ಮುಂತಾದ ಪವಾಡಗಳನ್ನೇ ಪವಾಡಗಳ ತಾತ್ವಿಕ ಅನುಸಂಧಾನ ಎಂಬ ಭಾಗದಲ್ಲಿ ವಿಸ್ತಾರವಾಗಿ ಚರ್ಚಿಸಲಾಗಿದೆ. ಪವಾಡಗಳು ನಡೆದಿರಬಹುದೋ ಇಲ್ಲವೋ? ಎಂಬ ಅನುಮಾನಗಳನ್ನು ವೈಚಾರಿಕ, ವೈಜ್ಞಾನಿಕ ಮತ್ತು ವಿವಿಧ ಆಯಾಮಗಳಲ್ಲಿ ವಿಶ್ಲೇಷಿಸುವುದು ಸೂಕ್ತವೆನಿಸಿದೆ. ಬದುಕಿನ ಕೆಲವು ಆಶೋತ್ತರಗಳನ್ನು ಈಡೇರಿಸಿಕೊಂಡ ಭಕ್ತ ಜನರ ಅಂತರಂಗದಲ್ಲಿ ದೈವತ್ವದ ಸ್ಥಾನ ಪಡೆದ ಮೇಲೆ ಪವಾಡಗಳು ಸತ್ಯವೋ ಅಸತ್ಯವೋ ಎಂಬ ತಾಕಲಾಟದ ಹೊರೆ ಕಡಿಮೆಯಾಗುತ್ತದೆ ಎಂದೇ ಹೇಳಬಹುದು.

### ೧.೩. ಅಧ್ಯಯನದ ಉದ್ದೇಶ

೧. ಪ್ರಸ್ತುತ ಅಧ್ಯಯನದ ಕೇಂದ್ರವಾಗಿರುವ ಚೇಳಗುರಿಕೆ ಎರ್ರಿತಾತ ಒಬ್ಬ ಯೌಗಿಕ ಪಂಥದ ಅವಧೂತ ಪರಂಪರೆಯ ಮತ್ತು ಈ ಭಾಗದಲ್ಲಿ ಅನೇಕ ಭಕ್ತರ ಸೆಳೆತವನ್ನು ತನ್ನ ಕ್ಷೇತ್ರದ ಕಡೆಗೆ ನಡೆಸಿದ ನಿಸ್ಸಂಗಿಗಳಾಗಿದ್ದರು. ಜನರ ಬದುಕಿನ ಹಲವು ಸಮಸ್ಯೆಗಳಿಗೆ ಅವರ ಪವಾಡ ಸಾದೃಶ್ಯಗಳು ಸಾಕ್ಷಿಯಂತಿದ್ದವು. ಅಂತಹ ಬಡಜನರ ಭಾವನೆಗಳಿಗೆ ಬಹುಪಯೋಗದ ನಿಲುವನ್ನು ತಳೆದ ಎರ್ರಿತಾತನ ಕುರಿತು ಸಮಗ್ರವಾಗಿ ಅಲ್ಲದಿದ್ದರೂ ಸೂಕ್ಷ್ಮವಾಗಿ ಕೆಲವು ಪುಸ್ತಕಗಳು, ಸಣ್ಣ ಪುಟ್ಟ ಲೇಖನಗಳು ಪ್ರಕಟವಾಗಿದ್ದರೂ ಸಹ ಅವು ಅಪರಿಪೂರ್ಣವಾಗಿವೆ ಮತ್ತು ಅವು ಸುಮಾರು ದಶಕಗಳ ಹಿಂದೆಯೇ ರಚನೆಗೊಂಡಂತಹವುಗಳಾಗಿದ್ದು, ಅಂದಿನ ಕಾಲ ಘಟ್ಟದ ಹಲವು ಮಾಹಿತಿಗಳನ್ನು ಮಾತ್ರ ಊಹಾಪೋಹಗಳಂತೆ ತಿಳಿಸುತ್ತವೆ. ಅಂತಹ ಹತ್ತಾರು ಸಮಸ್ಯೆಗಳಿಗೆ, ಊಹೆಗಳಿಗೆ ಪರಿಹಾರವನ್ನು ಕಂಡುಕೊಳ್ಳುವ ಪ್ರಾಮಾಣಿಕ ಪ್ರಯತ್ನ ಮಾಡಿರುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

೨. ಈಗಾಗಲೇ ಹಲವಾರು ಲಕ್ಷಿತ ಪರಂಪರೆಯ ಧಾರ್ಮಿಕ ಧಾರೆಗಳ ಸಾಂಸ್ಕೃತಿಕ ಅಧ್ಯಯನ ನಡೆದಿರುವುದು ಸಾಮಾನ್ಯವಾಗಿದೆ. ಅಲಕ್ಷಿತ ಧಾರ್ಮಿಕ ಸಾಂಸ್ಕೃತಿಕ ಪಂಥಗಳ ಅಧ್ಯಯನ ನಡೆದಿರುವುದು ತುಂಬಾ ವಿರಳ. ಅದರಲ್ಲೂ ಆರ್ಥಿಕವಾಗಿ, ಸಾಮಾಜಿಕವಾಗಿ ಕಡೆಗಣಿಸಲ್ಪಟ್ಟ ಸಾಂಸ್ಕೃತಿಕ ಮತ್ತು ಧಾರ್ಮಿಕ ಧಾರೆಗಳ ಕಡೆಗೆ ತಿರುಗಿ ನೋಡದಂತ ಕ್ಷೇತ್ರಗಳಲ್ಲಿ 'ಚೇಳಗುರಿಕೆ ಎರ್ರಿತಾತನ' ಕ್ಷೇತ್ರವು ಒಂದಾಗಿದ್ದು, ಸುಮಾರು ಒಂದುವರೆ ಶತಮಾನಗಳಷ್ಟು ಹಿಂದಿನ ಕ್ಷೇತ್ರಕಾರ್ಯಗಳನ್ನೊಳಗೊಂಡ ಯಾವುದೇ ಅಧ್ಯಯನಗಳು ವಿಶ್ವವಿದ್ಯಾಲಯದ ಮಟ್ಟದಲ್ಲಿ ನಡೆಯದೇ ಇರುವುದು ಸೋಜಿಗದ ಸಂಗತಿ. ಈಗ ಆ ನಿಟ್ಟಿನಲ್ಲಿ ಕೇವಲ ಇದ್ದ ಮಾಹಿತಿ ಅಷ್ಟೇ ಅಲ್ಲದೆ ಕ್ಷೇತ್ರಕಾರ್ಯದ ಮೂಲಕ ಹಲವು ಸತ್ಯ ಘಟನೆಗಳನ್ನು ತಾರ್ಕಿಕ ನೆಲೆಗಟ್ಟಿನಲ್ಲಿ ನಿಂತು ಚರ್ಚಿಸುವುದು, ಆ ಮೂಲಕ ಅಲಕ್ಷಿತ ಧಾರ್ಮಿಕ ಧಾರೆಗಳನ್ನು ಗಟ್ಟಿಗೊಳಿಸುವ ಉದ್ದೇಶವನ್ನು ಈ ಅಧ್ಯಯನವು ಒಳಗೊಂಡಿದೆ.

ಎರ್ರಿತಾತನನ್ನು

೩. ದಕ್ಷಿಣ ಕರ್ನಾಟಕದಿಂದ ಬಂದ ಹಲವಾರು ಯೌಗಿಕ ಪುರುಷರಲ್ಲಿ ಕೆಲವರು ಮತ್ತೆ ತಮ್ಮ ಕ್ಷೇತ್ರಸ್ಥಳಗಳಿಗೆ ಹಿಂದಿರುಗಿ ಹೋದರು. ಅಂದಿನ ಕಾಲದಲ್ಲಿ ಹಂಪಿ ಪರಿಸರವು ಅನೇಕ ಸಾಧು ಸಂತರ ತವರೂರಾಗಿತ್ತು. ಆದರೆ ಎರ್ರಿತಾತನು ಅಂತಹ ಆಧ್ಯಾತ್ಮಿಕ ಕ್ಷೇತ್ರದ ಕಡೆಗೆ ಒಲವು ಏಕೆ ತೋರಲಿಲ್ಲ? ಮತ್ತೆ ತಮ್ಮ ಪ್ರದೇಶಕ್ಕೆ ಹಿಂದುರುಗಿ ಹೋಗುವ ಯಾವ ಪ್ರಯತ್ನವನ್ನು ಏಕೆ ಮಾಡಲಿಲ್ಲ? ಎಲ್ಲಿಂದಲೋ ಬಂದು ಬರಡಾದ ಚೇಳಗುರಿಕೆ ಗ್ರಾಮದಲ್ಲಿಯೇ ನೆಲೆಸಲು ಕಾರಣವೇನು? ಎಂಬ ಪ್ರಶ್ನೆಗಳಿಗೆ ಸೈದ್ಧಾಂತಿಕ ಚೌಕಟ್ಟನ್ನು ಹಾಕಿಕೊಂಡು ವಿವೇಚಿಸುವುದು ಸಹ ಅಧ್ಯಯನದ ಉದ್ದೇಶವಾಗಿದೆ.

೪. ಯಾವುದೇ ಒಬ್ಬ ಆಧ್ಯಾತ್ಮ ಮಹಾಪುರುಷರ ಪೂರ್ವ ಇತಿಹಾಸವು ಅಷ್ಟೊಂದು ಪರಿಗಣನೆಗೆ ಬಾರದಿರುವುದು ಹೊಸದೇನಲ್ಲ. ಅವರ ಮಹಿಮಾನ್ವಿತ ಚರಿತ್ರೆಗೆ ಹೆಚ್ಚು ಮಹತ್ವವಿರುವುದರಿಂದ ಈ ರೀತಿಯ ಪೂರ್ವಾರ್ಧವು ಗೌಣವಾಗಿ ಬಿಡುವ ಸಾಧ್ಯತೆಯೇ ಹೆಚ್ಚು. ಅವರು ಆಗಾಗ ಮಾತನಾಡಿಕೊಳ್ಳುತ್ತಿದ್ದ 'ರಂಗಾ ರಂಗಾ' ಎಂಬ ಮೈಸೂರಿನ ಭಾಷೆಯಿಂದ ಬ್ರಾಹ್ಮಣನೆಂತಲೂ ಎಡಹಸ್ತವು ಲಿಂಗದ ಭಂಗಿಯಲ್ಲಿರುವುದರಿಂದ ಲಿಂಗವಂತನೆಂತಲೂ ಕರೆದಿರುವುದು ಕಂಡುಬರುತ್ತದೆ. ಕೇವಲ ಒಂದು ಆಧಾರದಿಂದ ಮಾತ್ರ ಆತನನ್ನು ಲಿಂಗವಂತನೆಂದು ಸೂಚಿಸಿದ್ದಾರೆ. ಆ ಮೂಲಕ ಎರ್ರಿತಾತನನ್ನು ವೀರಶೈವೀಕರಣಗೊಳಿಸುವ ಹುನ್ನಾರ ನಡೆದಿದೆಯೇ? ಅಥವಾ ಬೇರೆ ಸಮುದಾಯದವರೆಂದು ವಾದಿಸುವ ಯಾವೊಬ್ಬ ವಿಚಾರವಾದಿಯಿಲ್ಲದೆ ಅಂತಹ ತಪ್ಪು ಗ್ರಹಿಕೆಯನ್ನು ನೇರವಾಗಿ ಹೇರಲಾಗಿದೆಯೇ? ಎಂಬಂತಹ ಅಂಶಗಳನ್ನು ಹಾಗೂ ಈಗಾಗಲೇ ಒಪ್ಪಿತವಾಗಿರುವ ಆಕರಗಳನ್ನು, ವ್ಯವಸ್ಥೆಯನ್ನು ಪ್ರಶ್ನಿಸುವ ಜರೂರನ್ನು ಅಧ್ಯಯನದ ತಾತ್ವಿಕತೆಯ ಹಿನ್ನೆಲೆಯಲ್ಲಿ ಪರಿಭಾವಿಸುವುದು ಅಷ್ಟೇ ಮುಖ್ಯವಾದ ಧ್ಯೇಯವಾಗಿದೆ.

೫. ಉತ್ತರ ಕರ್ನಾಟಕದ ಧಾರ್ಮಿಕತೆಯ ನಿಜವಾದ ಜೀವಾಳವಿದ್ದಂತೆ. ಪ್ರತಿಯೊಂದು ದೈವಕ್ಕೂ ಇಲ್ಲಿ ಎಲ್ಲಿಲ್ಲದ ಮಹತ್ವದ ಭಾವನೆ ಮತ್ತು ಪೂಜ್ಯನೀಯ ಸ್ಥಾನಮಾನ ಅದಕ್ಕಾಗಿಯೇ ಈ ಭಾಗದ ದೈವಗಳನ್ನು ತಮ್ಮ ಸಂಬಂಧದ ನೆಲೆಯೊಳಗೆ ಪರಿಭಾವಿಸಿರುವುದು ಸಾಮಾನ್ಯ. ಉದಾ: ಎರ್ರಿತಾತ, ಗಾದಿಲಿಂಗಪ್ಪ ತಾತ,. ಮಲ್ಲಪ್ಪ ತಾತ, ಬಸಪ್ಪತಾತ ಎಂಬಂತಹ ಸಂಬಂಧ ಸೂಚಕವಾದ ಮಹಾಪುರುಷರ ಹೆಸರು ವಾಡಿಕೆಯಲ್ಲಿರುವುದು ಈ ಪ್ರದೇಶದಲ್ಲಿಯೇ ಹೆಚ್ಚಾಗಿ ಕಂಡುಬರುತ್ತವೆ. ದಕ್ಷಿಣ ಕರ್ನಾಟಕದ ಪ್ರದೇಶಗಳಿಗೆ ಅಂತಹ ಸಂಬಂಧಗಳ ಗೋಜಿಗೆ ಹೋಗದಿರಲು ಕಾರಣಗಳೇನು? ಆ ರೀತಿಯ ಪರಿಮೂಸೆಯೊಳಗೆ ಮಹಾಪುರುಷರನ್ನಾಗಲೀ, ದೈವವನ್ನಾಗಲೀ ಕಾಣುವ ಪರಿಪಾಠ ಇತ್ತೀಚಿನ ಬದಲಾಗುತ್ತಿರುವ ಜೀವನಕ್ರಮವೇನಾದರೂ ಕಾರಣವಾಗಿರಬಹುದೇ? ಇಲ್ಲವೇ ಎಂಬಂತಹ ಸಹಜವಾದ ಪ್ರಶ್ನೆಗಳನ್ನು ಆರೂಢ, ಸಾಧುಸಂತರ, ಅವಧೂತರ ಇತರ ಯೌಗಿಕ ಪುರುಷರ ಹೋಲಿಕೆಗಳಿಗೆ ಅವಲೋಕಿಸಿ ಚರ್ಚಿಸುವುದು ಪ್ರಸ್ತುತ ಅಧ್ಯಯನದ ಒಳನೋಟವಾಗಿದೆ.

೬. ಮೌಖಿಕ ಪರಂಪರೆಯ ಹಿನ್ನೆಲೆಯನ್ನು ಪ್ರತಿಬಿಂಬಿಸುವ ಪವಾಡ ಸಾದೃಶ್ಯಗಳು ಎರ್ರಿತಾತನ ಜೀವನ ಚರಿತ್ರೆಯನ್ನು ಅವಲೋಕಿಸಿದಾಗ ಭಿನ್ನ ರೀತಿಯ ಅಗೋಚರತೆಯಲ್ಲಿ ಗೌಪ್ಯವಾಗಿದ್ದ ಸಿದ್ಧಿಗಳು

ಕಾರ್ಯಗತಗೊಂಡಿರುವುದು ನಿಜವೆಂಬಂತೆ ಕಾಣುತ್ತವೆ. ಪವಾಡಗಳು ನಡೆದಿರುವುದು ಸತ್ಯವೋ ಅಸತ್ಯವೋ ಎಂಬಂತಹ ಹಲವಾರು ಅನುಮಾನಗಳಿಗೆ ಕಾರಣವಾಗಿವೆ. ಮೂಲಭೂತವಾದಿತನ ಅದನ್ನೇ ಒಪ್ಪಬಹುದು. ಆದರೆ ವೈಜ್ಞಾನಿಕ ಜಗತ್ತು ಅವುಗಳನ್ನು ಕಾಣುವ ಬಗೆ ಎಂತದ್ದು? ಅವುಗಳು ವರ್ತಮಾನದ ತಲ್ಲಣಗಳಿಗೆ ಹೇಗೆ ಪ್ರತ್ಯಕ್ಷಿಕೆಯಾಗಿವೆ? ಪವಾಡಗಳು ಸಾಮಾಜಿಕ ಕಳಕಳಿಯ ಭಾಗವಾಗಿವೆಯೇ? ಜನಪದರ ಬದುಕಿನೊಳಗೆ ಹಾಸುಹೊಕ್ಕಾಗಿ ಚಲನಶೀಲತೆಗೆ ಸಹಕಾರಿಯಾಗಿವೆಯೇ? ಎರ್ರಿತಾತನು ತೋರಿದರೆನ್ನಲಾದ ಪವಾಡಗಳನ್ನು ಒಂದೊಂದಾಗಿ ಪರಿಗ್ರಹಿಸಿ ಆ ಮೂಲಕ ವಿದ್ವಾಂಸರ ಹೇಳಿಕೆಗಳನ್ನು ತಾತ್ವಿಕ ಸಮೀಕ್ಷೆಗೆ ಒಳಪಡಿಸಿ ಚರ್ಚಿಸಿರುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

೭. ಆಚರಣೆಗಳು ಜನಪದರ ಬದುಕಿನ ಭಾಗಗಳಾಗಿವೆ. ಅದೇರೀತಿ ಇಲ್ಲಿ ನಡೆಯುವ ಧಾರ್ಮಿಕ ವಿಧಿ ವಿಧಾನಗಳು, ಸಂಪ್ರದಾಯಗಳು, ಹರಕೆಗಳು ಹಾಗೂ ಜನಪದ ಕಲೆಗಳು ಎಷ್ಟರಮಟ್ಟಿಗೆ ಜನಪದರಲ್ಲಿ ಪ್ರಭಾವ ಬೀರಿವೆ? ಇಂತಹ ನಂಬಿಕೆ-ಆಚರಣೆಗಳು ದೈವತ್ವದ ಮೇಲಿನ ಭಕ್ತಿಗಾಗಿಯೋ? ಯೌಗಿಕ ಪುರುಷರ ಪೂಜನೀಯ ಭಾವನೆಗಾಗಿಯೋ? ಸಮಾಜದ ನಿಲುವಿಗಾಗಿಯೋ? ಎಂಬಂತಹ ವಿವೇಚನೆಗಳ ಜೊತೆ ಜೊತೆಗೆ ಧಾರ್ಮಿಕ, ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಮಷ್ಟಿಗಳನ್ನು ಏಕೀಕರಿಸುವಲ್ಲಿ ಅವುಗಳು ಸಹಕಾರಿಯಾಗುತ್ತವೆಯೇ? ಆಚರಣೆಗಳು ಕೆಲವೊಮ್ಮೆ ಒತ್ತಾಯಪೂರ್ವಕವಾಗಿ ಹೇರಲಾಗಿದೆಯೇ ಅಥವಾ ಒತ್ತಾಸೆಯ ಭ್ರಮೆಯೊಳಗೆ ಅನುಸರಿಸಲಾಗುತ್ತದೆಯೋ? ಎಂಬಂತಹ ನಂಬಿಕೆಗಳ ಪರಿಕಲ್ಪನೆಯನ್ನು ಇತ್ತೀಚಿನ ಬೆಳವಣಿಗೆಯ ವಿವಿಧ ಆಯಾಮಗಳಿಗೆ ಮುಖವೊಡ್ಡಿ ನಿಲ್ಲುವುದನ್ನು ಸೈದ್ಧಾಂತಿಕ ಚರ್ಚೆಗೆ ಇಂಬುಕೊಡುವಂತೆ ಪ್ರಸ್ತಾಪಿಸುವುದು ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ.

### ೧.೪. ಅಧ್ಯಯನದ ವ್ಯಾಪ್ತಿ ಮತ್ತು ವೈಧಾನಿಕತೆ

ಅಧ್ಯಯನ ಕೈಗೊಂಡಾಗ ಅದರ ವಿಸ್ತೃತರೂಪ ಪಡೆದು ನಿರ್ದಿಷ್ಟವಾದ ಫಲಿತಗಳನ್ನು ಕಂಡುಕೊಳ್ಳಲು ಒಂದು ಚೌಕಟ್ಟು ಬಹಳಮುಖ್ಯ. ಅದನ್ನು ಅಧ್ಯಯನದ ಮಿತಿ, ವ್ಯಾಪ್ತಿ, ಎಲ್ಲೆ ಎನ್ನುವ ವಿವಿಧ ಪರಿಭಾಷೆಗಳಿಂದ ಗುರುತಿಸುತ್ತೇವೆ. ಪ್ರಸ್ತುತ ಅಧ್ಯಯನವು ತನ್ನದೇ ಆದ ಒಂದು ಪರಿಧಿಯೊಳಗೆ ಚರ್ಚಿಸುತ್ತಾ ತಾತ್ವಿಕ ನೆಲೆಗಟ್ಟನ್ನು ಗಟ್ಟಿಗೊಳಿಸುವ ಪ್ರಯತ್ನ ಮಾಡಲಾಗಿದೆ. ಉಪೇಕ್ಷೆಗೆ ಒಳಗಾಗಿದ್ದ ಧಾರ್ಮಿಕ ಧಾರೆಗಳಲ್ಲಿ ಒಂದಾದ ವಸ್ತು ವಿಷಯವನ್ನು 'ಚೇಳಗುರಿಕೆ ಎರ್ರಿತಾತ ಸಾಂಸ್ಕೃತಿಕ ಸಂಕಥನ' ಎಂಬ ಸಂಶೋಧನಾ ಶೀರ್ಷಿಕೆಯನ್ನಿಟ್ಟುಕೊಂಡು ನನ್ನ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಬಳ್ಳಾರಿ ಜಿಲ್ಲೆಯ ಚೇಳಗುರಿಕೆ ಎರ್ರಿತಾತನನ್ನು ಪರಿಚಯಾತ್ಮಕ ಸಾಹಿತ್ಯಿಕ ಮತ್ತು ಮೌಖಿಕ ಆಧಾರಗಳನ್ನು ಸಮಾಜ ವಿಜ್ಞಾನಗಳ ವಿಧಿ ವಿಧಾನಗಳಿಗೆ ಅನ್ವಯಿಸಿ ಕ್ಷೇತ್ರಕಾರ್ಯ ವಿಧಾನದ ಮೂಲಕ ಒಂದು ಸೈದ್ಧಾಂತಿಕ ನಿಲುವಿನೊಳಗೆ ವಿಷಯವನ್ನು ಪರಿಗ್ರಹಿಸಲಾಗಿದೆ. ಶಿಷ್ಟ-ಪರಿಶಿಷ್ಟ ನೆಲೆಯ ವಿಭಿನ್ನ ದೃಷ್ಟಿಕೋನದಿಂದ ನನ್ನ ಅಧ್ಯಯನದ ವ್ಯಾಪ್ತಿಯೊಳಗೆ ಮಹಾಪ್ರಬಂಧವನ್ನು ಕಟ್ಟುವ ಪ್ರಯತ್ನ ಮಾಡಲಾಗಿದೆ.

ಬದುಕು ಬದಲಾದಂತೆ ಮನುಷ್ಯನ ವಿಚಾರಶಕ್ತಿಯಲ್ಲೂ ಬಹುತೇಕವಾಗಿ ವಿಭಿನ್ನವಾದ ಆಲೋಚನಾ ಲಹರಿ ಹರಿಯುವುದರಲ್ಲಿ ಸಂಶಯವಿಲ್ಲ. ಹಾಗಾಗಿಯೇ ಏನಾದರೂ ಹೊಸತನದ ಅಸ್ಮಿತೆಯನ್ನು

ಕಂಡುಕೊಳ್ಳುವುದಕ್ಕೆ ಹಲವು ನೆಲೆಗಳನ್ನು ಹುಡುಕುತ್ತಿದ್ದಾನೆ. ಅದರ ಫಲವಾಗಿಯೇ ಇಂದು ಸಂಶೋಧನೆಯ ದೃಷ್ಟಿಕೋನ ಹೊಸ ದಿಗಂತದ ಕಡೆಗೆ ಸದಾ ಹಾತೊರೆಯುವಂತೆ ಪ್ರೇರೇಪಿಸುತ್ತದೆ. ಯಾರ ಗಣನೆಗೆ ಬಾರದ ಹತ್ತು ಹಲವು ಕ್ಷೇತ್ರಗಳಾಗಲೀ, ಸಮುದಾಯಗಳಾಗಲಿ ಮತ್ತು ಸಂಸ್ಕೃತಿಗಳಾಗಲೀ ಗುರುತರವಾದ ತಾರ್ಕಿಕ ಚಿಂತನೆಗಳ ಮೂಲಕ ಅವು ಬೆಳಕಿನೆಡೆಗೆ ಬಂದು ನಿಂತಿವೆ, ನಿಲ್ಲುತ್ತಿವೆ. ಹಾಗೆಂದ ಮಾತ್ರಕ್ಕೆ ಎಲ್ಲವುಗಳು ಹೊಸತನದ ರೆಕ್ಕೆಗಳನ್ನು ಧರಿಸಿ ನಿಂತಿವೆಯೇ? ಎನ್ನುವ ಅನುಮಾನಗಳು ಏಳಬಹುದು. ಇತ್ತೀಚಿನ ಕೆಲವು ಅಧ್ಯಯನಗಳು ಅಲಕ್ಷಿತ ನೆಲೆಗಳನ್ನು ಅದರ ಸಾಧ್ಯಾಸಾಧ್ಯತೆಗಳನ್ನು, ತಾಕಲಾಟ ತಡವರಿಕೆಗಳನ್ನು ಅಲ್ಪಮಟ್ಟಿಗಾದರೂ ಆಧುನಿಕತೆಯೆಡೆಗೆ ವಾಲುವಂತೆ ಮಾಡುತ್ತಿರುವುದು ಕಂಡುಬರುತ್ತಿದೆ.

ಅಲಕ್ಷಿತ ಕ್ಷೇತ್ರಗಳನ್ನು ಅರಿಯಲು ಲಿಖಿತ ಸಾಹಿತ್ಯದಷ್ಟೆ ಮೌಖಿಕ ಸಾಹಿತ್ಯಿಕ ಆಕರಗಳು ಬೆನ್ನೆಲುಬಾಗಿ ನಿಲ್ಲಲು ಸಹಕರಿಸುತ್ತವೆ. ಜನಪದ ಸಾಹಿತ್ಯವು ಮೌಖಿಕ ಪರಂಪರೆಯ ತಾಯಿಬೇರಾಗಿ ಹಳೆಬೇರು ಹೊಸ ಚಿಗುರು ಎಂಬಂತೆ ಸಾಹಿತ್ಯಿಕ ಆಕರಗಳಿಗೆ ಜೀವನವನ್ನು ತುಂಬುವ ಜೀವಂತ ಪಳೆಯುಳಿಕೆಗಳಾಗಿವೆ. ಮನುಷ್ಯ ಏನೆಲ್ಲ ಸಾಮಾಜಿಕ ಪರಿಚಲನೆಗೆ ಇಂಬುಕೊಡಲು ಪರಿತಪಿಸುತ್ತಾನೆಯೋ ಅಂತಹ ಕಟ್ಟಡಕ್ಕೆ ಮೌಖಿಕತೆಯೇ ಬುನಾದಿಯಾಗಿದೆ. ಆದುದರಿಂದಲೇ ಲಿಖಿತ ಹಾಗೂ ಮೌಖಿಕ ಆಕರಗಳೆರಡನ್ನು ಸಮ್ಮಿಳಿಸಿ ಪ್ರಸ್ತುತ ಅಧ್ಯಯನವನ್ನು ಬಹುರೂಪಿ ನೆಲೆಯಲ್ಲಿ ಸಿದ್ಧಪಡಿಸಲಾಗಿದೆ.

ಧಾರ್ಮಿಕ ಕಟ್ಟುಪಾಡುಗಳು ಬಿಗಿಗೊಂಡಂತೆ ದೈವತ್ವ ಆಚರಣೆಗಳಲ್ಲಿ ಸರಳೀಕೃತ ವ್ಯವಸ್ಥೆಯೆಡೆಗೆ ಮನಸ್ಸನ್ನು ಕೇಂದ್ರೀಕರಿಸುವುದು ಸಾಮಾನ್ಯ. ವೈದಿಕಶಾಹಿ ನಿಲುವುಗಳಿಗೆ ಬೇಸತ್ತ ಗುಂಪೊಂದು ತಿಳಿದೋ ತಿಳಿಯದೆಯೋ ಪ್ರತಿಭಟಿಸಿರುವುದು ಭಕ್ತಿಯನ್ನು ವಿಭಿನ್ನ ರೀತಿಯಲ್ಲಿ ಕಟ್ಟಲು ಸಹಕಾರಿಯಾಗಿದೆ. ಅದು ಕೆಲವೊಮ್ಮೆ 'ಮಾತಿಗಿಂತ ಮೌನದ ಅಸ್ತ್ರವೇ ಹೆಚ್ಚು ಹರಿತ'ವಾದ ಕಾರ್ಯಮಾಡುತ್ತದೆಂಬ ತತ್ವಗಳಿಂದಲೇ ಸಾಧು ಸಂತರು, ಯೌಗಿಕ ಪಂಥದ ಮಹಿಮರೆಲ್ಲ ಮೌನಕ್ಕೆ ಶರಣಾದವರಲ್ಲಿ ಎರ್ರಿತಾತನು ಒಬ್ಬ ಮಹಾಮೌನಿ. ಎಲ್ಲವನ್ನು ಮೌನದಿಂದಲೇ ಸ್ಥಾಪಿಸಿದವನಂತೆ ಆಗಾಗ ಮಾತಾಡುತ್ತಿದ್ದ ಅಪರೂಪದ ಮಾತುಗಳಿಂದಲೇ ಸಮಾಜದ ಓರೆಕೋರೆಗಳನ್ನು ತಿದ್ದುವಲ್ಲಿ ಹಾಗೂ ಆತನ ಕುರಿತ ಸಾಹಿತ್ಯಿಕ ಕೃತಿಗಳು ಮತ್ತು ಕ್ಷೇತ್ರಕಾರ್ಯವನ್ನೇ ಪ್ರಧಾನವಾಗಿಟ್ಟುಕೊಂಡು ಅಧ್ಯಯನವನ್ನು ಕೈಗೊಳ್ಳಲಾಗಿದೆ.

**ಕ್ಷೇತ್ರಕಾರ್ಯ**

ಜಾನಪದ ಅಧ್ಯಯನದಲ್ಲಿ ಕ್ಷೇತ್ರಕಾರ್ಯವು ಅಗತ್ಯವೂ ಅನಿವಾರ್ಯವೂ ಆಗಿದೆ. ಅದರ ಆಳ, ಅಗಲ, ಎತ್ತರ, ಬಿತ್ತರಗಳನ್ನು ಅರಿಯಲು ಕ್ಷೇತ್ರಕಾರ್ಯ ಅಗತ್ಯ. ಆಧುನಿಕ ಕ್ಷೇತ್ರವಿಧಾನ, ಸಂದರ್ಶನ ವಿಧಾನ ಅಥವಾ ನಿರೂಪಕ ವಿಧಾನವನ್ನು, ಅವಲೋಕನ, ಪ್ರಶ್ನಾವಳಿ ವಿಧಾನದ ಮೂಲಕ ಧ್ವನಿಮುದ್ರಿಕೆಯಂತ್ರ ಹಾಗೂ ಕ್ಯಾಮರಾಗಳ ಸಹಾಯದಿಂದ ಕ್ಷೇತ್ರಕಾರ್ಯ ಮಾಡಲಾಯಿತು. ಜೊತೆಗೆ ಅಧ್ಯಯನದ ಉದ್ದೇಶಗಳಿಗೆ ಮತ್ತು ಸಂಶೋಧನೆಗೆ ಅವಶ್ಯಕ ಮಾಹಿತಿ ಮತ್ತು ವಿಷಯಗಳನ್ನು ಸಂಗ್ರಹಿಸಲಾಗಿದೆ. ಮಾಹಿತಿಗಳನ್ನು ಜನಪದ ಮಾಹಿತಿದಾರರು, ಕಲಾವಿದರು, ಸಾಹಿತಿಗಳು, ವಿದ್ವಾಂಸರು, ಅರ್ಚಕರು, ಮಠಾಧೀಶರು, ಅಧಿಕಾರಿಗಳು, ಸ್ಥಳೀಯ ರಾಜಕಾರಣಿಗಳು ಮುಂತಾದವರಿಂದ ಸಂಗ್ರಹಿಸಲಾಗಿದೆ.

## ೧.೫. ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನದ ಹರವಿಗೆ ಸಂಬಂಧಿಸಿದಂತೆ ಎಂಟು ಅಧ್ಯಾಯಗಳಲ್ಲಿ ವಿಷಯವನ್ನು ವರ್ಗೀಕರಿಸಲಾಗಿದೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಮಹತ್ವ, ವ್ಯಾಪ್ತಿ, ವಿಧಾನ ಹಾಗೂ ಸ್ವರೂಪವನ್ನು ಅದರ ಪರಿಧಿಯೊಳಗೆ ಕಟ್ಟುವ ಪ್ರಯತ್ನ ಮಾಡಲಾಗಿದ್ದು, ಪ್ರಬಂಧದ ಒಟ್ಟು ತಾರ್ಕಿಕತೆಯನ್ನು ಕುರಿತು ತಿಳಿಸಲಾಗಿದೆ. ಅಧ್ಯಯನ ಕೈಗೊಳ್ಳುವಾಗ ಎದುರಾಗುವ ಒಟ್ಟು ಸವಾಲುಗಳು ಮತ್ತು ವಿಷಯದ ವಿಶ್ಲೇಷಣೆಗೆ ಅನುಕೂಲವಾಗುವ ಸಾಹಿತ್ಯಿಕ ಕೃತಿಗಳ ಅವಲೋಕನದ ಜೊತೆಗೆ ಕ್ಷೇತ್ರಕಾರ್ಯಧಾರಿತ ಹಿನ್ನೆಲೆಯನ್ನು ಅನುಸರಿಸಲಾಗಿದೆ. ಅಧ್ಯಯನಕ್ಕೆ ಬಳಸಿಕೊಳ್ಳುವ ಆಕರ ಸಾಮಗ್ರಿಗಳನ್ನು ಪರಿಚಯಿಸಲಾಗಿದೆ. ಒಟ್ಟು ಅಧ್ಯಯನದ ಸ್ವರೂಪವನ್ನು ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ಎರಡರಲ್ಲಿ ಅಧ್ಯಯನ ಕ್ಷೇತ್ರವಾದ ಚೇಳಗುರಿಕೆಯ ಒಟ್ಟು ಭೌಗೋಳಿಕ ಹಿನ್ನೆಲೆಯನ್ನು ಜನಸಂಖ್ಯಾ, ಸಾಕ್ಷರತೆ, ಅಲ್ಲಿನ ಪ್ರಮುಖ ಬೆಳೆಗಳು, ಗ್ರಾಮದ ಒಟ್ಟು ಭೌಗೋಳಿಕ ಮೇಲ್ಮೈಯನ್ನು ಕುರಿತು ವಿವರಿಸಲಾಗಿದ್ದು, ಮುಂದುವರಿದು ಚೇಳಗುರಿಕೆ ಎರ್ರಿತಾತನ ಕುರಿತ ಪೂರ್ವಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ. ಇದುವರೆಗೂ ಉಪೇಕ್ಷೆಗೆ ಒಳಗಾಗಿದ್ದ ಆತನ ಪೂರ್ವಜೀವನ, ಜನನ, ಸ್ಥಳ, ಸಂಸಾರಿಕ, ಉದ್ಯೋಗ ಮುಂತಾದ ಮಹತ್ವದ ಸಂಗತಿಗಳನ್ನು ದೊರೆತ ಹಾಗೂ ಬಹುತೇಕ ಕ್ಷೇತ್ರಾಧ್ಯಯನದಿಂದ ಗುರುತಿಸಲಾಗಿದೆ. ಬದುಕಿನ ಪ್ರತಿಯೊಂದು ಘಟನೆಗಳನ್ನು ಆಧಾರಸಹಿತ ಮಾಹಿತಿಯಿಂದ ವಿಶ್ಲೇಷಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಎರ್ರಿತಾತನ ಕುರಿತು ಇರುವ ಆಚರಣೆಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ನಂಬಿಕೆ, ಆಚರಣೆಗಳನ್ನು ಕುರಿತು ವರ್ತಮಾನದ ಜನಪದರ ಬದುಕಿನಲ್ಲಿ ಹೇಗೆ ಪಾತ್ರವಹಿಸುತ್ತದೆ? ಅವುಗಳ ಚಿತ್ರಣಗಳು ಹೇಗೆ ಆಧುನಿಕತೆಗೆ ಎದುರೊಡ್ಡಿ ನಿಲ್ಲುತ್ತವೆ? ಇಂತಹ ಆಚರಣೆಗಳು ಸಂಪ್ರದಾಯಿಕವಾಗಿ ಬೆಳೆದು ಪರಿಸರಕ್ಕೆ ಸಹಾಕಾರಿಯಾಗಿವೆ ಅಥವಾ ಇನ್ನೂ ಮೂಢನಂಬಿಕೆಯ ಬಂಧನದೊಳಗೆ ಬಂಧಿಸಿವೆಯೇ? ಎಂಬುದನ್ನು ಕುರಿತು ತಾತ್ವಿಕತೆಗೆ ಒಳಪಡಿಸಲಾಗಿದೆ.

ನಂಬಿಕೆ-ಆಚರಣೆಗಳ ಒಟ್ಟು ಪರಿಕಲ್ಪನೆಯನ್ನು ಗಮನದಲ್ಲಿಟ್ಟುಕೊಂಡು ಎರ್ರಿತಾತನ ಕುರಿತ ಆಚರಣೆಗಳಲ್ಲಿ ಜೀವನಾವರ್ತನ ಆಚರಣೆಗಳು, ಮನುಷ್ಯನ ಜೀವನದಿಂದ ಹಿಡಿದು ಮರಣದವರೆಗೆ ನಡೆಯುವ ಪ್ರಮುಖ ಆಚರಣೆಗಳನ್ನು ಕುರಿತು ತಿಳಿಸಲಾಗಿದೆ. ವಾರ್ಷಿಕಾವರ್ತನ ಆಚರಣೆಯಲ್ಲಿ ಪ್ರತಿದಿನ, ಪ್ರತಿ ಅಮಾವಾಸ್ಯೆಗೆ ಹುಣ್ಣಿಮೆಗೆ ಹಾಗೂ ಜಾತ್ರೆಯಲ್ಲಿ ವಿಶೇಷವಾದ ಆಚರಣೆಗಳನ್ನು ಇಂದಿನ ವೈಜ್ಞಾನಿಕತೆಗೆ ಒಳಪಡಿಸಲಾಗಿದೆ. ಅಲ್ಲಿನ ಜನಪದ ಕಲೆಗಳು ಹೇಗೆ ಪ್ರತ್ಯಕ್ಷಿಕೆಯಾಗಿ ನಿಂತಿವೆ ಎಂಬುದನ್ನು ಕುರಿತು ವಿವರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಎರ್ರಿತಾತನ ಕುರಿತ ಮೌಖಿಕ ಸಾಹಿತ್ಯದ ಪರಿಧಿಯಲ್ಲಿ ಜನಪದರ ಹಾಡುಗಳು, ಪುರಾಣಗಳು, ಇತರೆ ಮೌಖಿಕ ಸಾಹಿತ್ಯಿಕ ಆಧಾರಗಳನ್ನು ಆಧುನಿಕತೆಯ ಪರಂಪರೆಯಲ್ಲಿ ಸಿಗುವ ಮನ್ನಣೆ

ಯಾವ ರೀತಿಯಲ್ಲಿ ಒಪ್ಪಬಹುದಾಗಿದೆ? ಒಪ್ಪಿದರೂ ಎಷ್ಟರ ಮಟ್ಟಿಗೆ ಹೊಸ ಸಾಧ್ಯತೆಗಳಿಗೆ ಅನ್ವಯ ಗೊಳ್ಳುತ್ತವೆ ಎಂಬುದನ್ನು ಚರ್ಚಿಸಲಾಗಿದ್ದು, ಇದುವರೆಗೂ ಎರ್ರಿತಾತನ ಕುರಿತ ಸಾಹಿತ್ಯಿಕ ಆಕರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಾಡುಗಳಲ್ಲಿ ವಕ್ತೃಗಳ ಮತ್ತು ಆಡಿಯೋ ವಿಡಿಯೋ ಕ್ಯಾಸೆಟ್‌ಗಳಲ್ಲಿ ಸಹ ಕೆಲವು ಭಕ್ತಿಗೀತಗಳನ್ನು ಕುರಿತು ವಿವರಿಸಲಾಗಿದೆ.

ಅಧ್ಯಾಯ ಐದರಲ್ಲಿ ಚೇಳಗುರಿಕೆ ಎರ್ರಿತಾತ ಇತರೆ ಸಂತ ಪರಂಪರೆಯ ಕುರಿತು ಚರ್ಚಿಸಲಾಗಿದೆ. ಎರ್ರಿತಾತನ ಸಮಕಾಲೀನ ಅನುಭಾವಿಗಳು, ಶಿಷ್ಯ ಸಂಕುಲ ಮತ್ತು ಇತರೆ ಅನುಭಾವಿಗಳೊಡನೆ ಸಮೀಕರಿಸಲಾಗಿದ್ದು, ಪರಸ್ಪರ ಪಂಥಗಳು ಬೇರೆ ಬೇರೆಯಾದರೂ ಅವರು ಅನುಸರಿಸಿದ ಮಾರ್ಗಗಳು ವಿಭಿನ್ನವಾದರೂ ಅವರ ಗುರಿ ಸಾಧನೆ ಒಂದೇ ಆಗಿತ್ತು ಎಂಬುದನ್ನು ವಿವರಿಸಲಾಗಿದೆ.

ಅಧ್ಯಾಯ ಆರರಲ್ಲಿ ಆತನ ಪವಾಡಗಳನ್ನು ಕುರಿತು ವಿವರಿಸಲಾಗಿದೆ. ಪವಾಡಗಳು ವಾಸ್ತವವೇ ಅವಾಸ್ತವವೇ? ಅವು ನಡೆದಿದ್ದರೂ ಅವುಗಳು ವೈಜ್ಞಾನಿಕ ಜಗತ್ತಿಗೆ ಹೇಗೆ ಸವಾಲಾಗಿವೆ ಎಂಬುದನ್ನು ಪವಾಡಗಳ ತಾತ್ವಿಕ ಅನುಸಂಧಾನ ಎಂಬ ಶೀರ್ಷಿಕೆಯಡಿಯಲ್ಲಿ ಚರ್ಚಿಸಲಾಗಿದೆ. ಮುಂದುವರೆದು ಪವಾಡಗಳನ್ನು ಎರಡು ರೀತಿಯಲ್ಲಿ ವಿವರಿಸಲಾಗಿದ್ದು, ಚೇಳಗುರಿಕೆ ಗ್ರಾಮಕ್ಕೆ ಬರುವ ಮುಂಚಿನ ಪವಾಡಗಳು ಹಾಗೂ ಚೇಳಗುರಿಕೆ ಗ್ರಾಮದಲ್ಲಿ ತೋರಿದ ಪವಾಡಗಳಾಗಿ ವಿಂಗಡಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಅಧ್ಯಾಯ ಏಳರಲ್ಲಿ ಎರ್ರಿತಾತನ ಮಠದಲ್ಲಿನ ಹಲವು ಸಾಮಾಜಿಕ ಕೊಡುಗೆಗಳನ್ನು ಕುರಿತು ವಿವರಿಸಲಾಗಿದೆ. ಚಿಕ್ಕದಾದ, ಇನ್ನು ಬೆಳೆಯುತ್ತಿರುವ ಮಠದಲ್ಲಿ ಪ್ರತಿದಿನ ದಾಸೋಹದ ವ್ಯವಸ್ಥೆ, ಶಿಕ್ಷಣಕ್ಕೆ ಶಾಲೆ, ವಸತಿ ನಿಲಯ, ಆರೋಗ್ಯ ಕೇಂದ್ರ, ಕಲ್ಯಾಣ ಮಂಟಪ, ಮದುವೆಯಂತಹ ಸಮಾರಂಭಗಳಿಗೆ ಯಾವುದೇ ಭೇದ ಭಾವಗಳಿಲ್ಲದೆ ಉಚಿತವಾಗಿ ನೀಡುವ ಮುಂತಾದ ಪ್ರಮುಖ ಅಂಶಗಳನ್ನು ಕುರಿತು ತಿಳಿಸಲಾಗಿದೆ. ಈ ಮಠಮಾನ್ಯವು ಹೇಗೆ ಕಾರ್ಯನಿರ್ವಹಿಸುತ್ತದೆ ಎಂಬುದನ್ನು ಚಿತ್ರಿಸಲಾಗಿದೆ.

ಕೊನೆಯ ಅಧ್ಯಾಯವಾದ ಸಮಾರೋಪದಲ್ಲಿ ಒಟ್ಟು ಅಧ್ಯಯನದ ಫಲಿತಗಳನ್ನು ಹೇಳುವುದರ ಜೊತೆಗೆ ಕೊನೆಗೆ ಅನುಬಂಧದಲ್ಲಿ ವಕ್ತೃ ವಿವರ, ಹಾಗೂ ಅಧ್ಯಯನಕ್ಕೆ ಸಂಬಂಧಿಸಿದ ಎರ್ರಿತಾತನ ಪವಾಡಗಳ ಚಿತ್ರ, ಜಾತ್ರೆ ಹಾಗೂ ಮಠದ ಪ್ರಮುಖ ಚಿತ್ರಗಳನ್ನು ಪೂರಕವಾಗಿ ಬಳಸಲಾಗಿದೆ.

# ಅಧ್ಯಾಯ - ೨

## ಚೇಳಗುರಿಕೆ ಎರ್ರಿತಾತ: ಪೂರ್ವಚರಿತ್ರೆ

೨.೧. ಚೇಳಗುರಿಕೆ ಭೌಗೋಳಿಕ ಹಿನ್ನೆಲೆ
೨.೨. ಚೇಳಗುರಿಕೆ ಎರ್ರಿತಾತ: ಪೂರ್ವ ಚರಿತ್ರೆ
೨.೩. ಬಾಲ್ಯ ಮತ್ತು ಸಂಸಾರ ಪರಿತ್ಯಾಗ
೨.೪. ಗುರುವಿನ ಗುಲಾಮ
೨.೫. ಮನೆಬಿಟ್ಟು ಮನಸ್ಸಿನೆಡೆಗೆ

## ಚೇಳಗುರಿಕೆ ಎರ್ರಿತಾತ : ಪೂರ್ವ ಚರಿತ್ರೆ

### ೨.೧. ಚೇಳಗುರಿಕೆ ಭೌಗೋಳಿಕ ಹಿನ್ನೆಲೆ

ಬಳ್ಳಾರಿ ಜಿಲ್ಲೆ ಕರ್ನಾಟಕದ ಪೂರ್ವ ಮೇರೆಯನ್ನು ಪಡೆದುಕೊಂಡು, ಮಧ್ಯಭಾಗದಲ್ಲಿ ನೆಲೆಗೊಂಡಿದೆ. ೧೯೫೩ರಲ್ಲಿ ಕರ್ನಾಟಕ ಮತ್ತು ಆಂಧ್ರಪ್ರದೇಶ ರಾಜ್ಯಗಳ ಸಹಯೋಗದಲ್ಲಿ ನಿರ್ಮಾಣವಾದ ತುಂಗಭದ್ರ ಅಣೆಕಟ್ಟು ಜಿಲ್ಲೆಯ ನೈಸರ್ಗಿಕ ಮೇರೆಯಾಗಿದ್ದು, ಅದು ಪಶ್ಚಿಮದಲ್ಲಿ ಕೊಪ್ಪಳ ಜಿಲ್ಲೆಯನ್ನು ಹಾಗೂ ಉತ್ತರದಲ್ಲಿ ರಾಯಚೂರು ಜಿಲ್ಲೆಯನ್ನು ಪ್ರತ್ಯೇಕಿಸುತ್ತದೆ. ತುಂಗಭದ್ರ ನದಿಯು ಜಿಲ್ಲೆಯ ಹೃದಯಭಾಗದಲ್ಲಿ ಸುಮಾರು ೫೦ ಕಿ.ಮೀ.ದೂರದವರೆಗೆ ಹರಿಯುತ್ತದೆ. ಬಳ್ಳಾರಿ ಜಿಲ್ಲೆಯು ಈ ನದಿಯ ಬಲದಂಡೆಯ ಮೇಲೆ ನೆಲೆಗೊಂಡಿದ್ದು, ಇದು ಜಿಲ್ಲೆಯ ಉತ್ತರದ ಮೇರೆಯನ್ನು ನಿಗಧಿಪಡಿಸುತ್ತದೆ. ಇಂತಹ ದಂಡೆಯ ಮೇಲೆ ವಿಶ್ವವಿಖ್ಯಾತ ವಿಜಯನಗರ ಸಾಮ್ರಾಜ್ಯದ ರಾಜಧಾನಿ ಹಂಪಿ ಪಟ್ಟಣವು ಕೇಂದ್ರೀಕೃತವಾಗಿದ್ದು, ಐತಿಹಾಸಿಕ ಹಿನ್ನೆಲೆಯಿಂದಾಗಿ ಎಲ್ಲಾ ಋತುಮಾನಗಳಲ್ಲಿ ವಿಶ್ವದ ಪ್ರವಾಸಿಗರ ತಾಣವಾಗಿದೆ.

ಜಿಲ್ಲೆಯ ಪ್ರತಿಯೊಂದು ತಾಲ್ಲೂಕುಗಳು ಒಂದೊಂದು ವೈವಿಧ್ಯತೆಗಳಿಂದ ಕೂಡಿದ್ದು, ಸಂಡೂರು ತಾಲ್ಲೂಕಿನ ಎತ್ತರವಾದ ಬೆಟ್ಟಗುಡ್ಡಗಳು ಸಮುದ್ರ ಮಟ್ಟದಿಂದ ೩೪೦೦ ಅಡಿ ಎತ್ತರದಲ್ಲಿವೆ. ಬಳ್ಳಾರಿ ಜಿಲ್ಲೆ ಕರ್ನಾಟಕ ರಾಜ್ಯದ ಪೂರ್ವಭಾಗದ ಮಧ್ಯದಲ್ಲಿ ದಕ್ಷಿಣೋತ್ತರವಾಗಿ ಹಬ್ಬಿಕೊಂಡಿದೆ. ಇದು ೧೪°-೧೩° ಮತ್ತು ೧೫°-೫೦°ಉತ್ತರ ಅಕ್ಷಾಂಶ ಹಾಗೂ ೭೫°-೪೦° ಮತ್ತು ೭೭°-೧೧° ಪೂರ್ವ ರೇಖಾಂಶಗಳ ಮಧ್ಯದಲ್ಲಿದೆ. ಜಿಲ್ಲೆಯ ಉತ್ತರದಲ್ಲಿ ರಾಯಚೂರು ಜಿಲ್ಲೆ, ಪಶ್ಚಿಮದಲ್ಲಿ ಹಾವೇರಿ ಜಿಲ್ಲೆ, ದಕ್ಷಿಣದಲ್ಲಿ ಚಿತ್ರದುರ್ಗ ಜಿಲ್ಲೆ ಹಾಗೂ ಪೂರ್ವಾ ಭಾಗದಲ್ಲಿ ಆಂಧ್ರಪ್ರದೇಶದ ಕರ್ನೂಲು ಮತ್ತು ಅನಂತಪುರ ಜಿಲ್ಲೆಗಳಿಂದ ಸುತ್ತುವರೆದಿದೆ.

ರಾಜ್ಯದ ಭೌಗೋಳಿಕ ಪ್ರದೇಶವು ೧,೯೧,೭೯೧ ಚ.ಕಿ.ಮೀ. ವಿಸ್ತೀರ್ಣದಲ್ಲಿ ಜಿಲ್ಲೆಯ ಒಟ್ಟು ಭೌಗೋಳಿಕ ಪ್ರದೇಶವು ಸುಮಾರು ೮೪೨೦ ಚ.ಕಿ.ಮೀ. ವಿಸ್ತೀರ್ಣವನ್ನು ಪಡೆದಿದೆ. ಅಂದರೆ ರಾಜ್ಯದ ಒಟ್ಟು ಶೇಕಡ ೭ರಷ್ಟು ಭೌಗೋಳಿಕ ವಿಸ್ತೀರ್ಣವನ್ನು ಹೊಂದಿ ಬಳ್ಳಾರಿ ಜಿಲ್ಲೆಯು ೧೧ನೇ ಸ್ಥಾನವನ್ನು ಪಡೆದುಕೊಂಡಿದೆ. ಇದರಲ್ಲಿ ಬಳ್ಳಾರಿ ತಾಲೂಕಿನ ಭೌಗೋಳಿಕ ವ್ಯಾಪ್ತಿ ಅತೀ ದೊಡ್ಡದಾಗಿದ್ದು, ಅದು ೧೯೮೬ ಚ.ಕಿ.ಮೀ. (ಶೇಕಡ ೨೦)ಗಳಿದ್ದರೆ, ಅತೀ ಕಡಿಮೆ ೯೩೪ ಚ.ಕಿ.ಮೀ. (ಶೇ ೧೧)ರಷ್ಟು

ವಿಸ್ತೀರ್ಣವನ್ನು ಹೊಸಪೇಟೆ ತಾಲ್ಲೂಕು ಹೊಂದಿದೆ. ಇದು ಬಳ್ಳಾರಿ ಜಿಲ್ಲೆಯ ಕೇಂದ್ರಸ್ಥಳವಾಗಿದ್ದು, ರಾಜಧಾನಿ ಬೆಂಗಳೂರಿನಿಂದ ಸುಮಾರು ೩೦೦ ಕಿ.ಮೀ. ದೂರದಲ್ಲಿದೆ. ಪ್ರಸ್ತುತ ಅಧ್ಯಯನದ ಕ್ಷೇತ್ರವಾದ ಚೇಳಗುರಿಕೆ ಗ್ರಾಮ ಬಳ್ಳಾರಿಯಿಂದ ಅನಂತಪುರ ಮಾರ್ಗದ ಮಧ್ಯದಲ್ಲಿದ್ದು, ಸುಮಾರು ೨೫ ಕಿ.ಮೀ. ಜಿಲ್ಲೆಯಿಂದ ದೂರದಲ್ಲಿದೆ.

ಚೇಳಗುರಿಕೆ ಗ್ರಾಮವು ಒಂದು ಸಾಮಾನ್ಯ ಗ್ರಾಮವಾಗಿದ್ದು, ಯಾವುದೇ ರೀತಿಯ ಐತಿಹಾಸಿಕ ಹಾಗೂ ಪೌರಾಣಿಕ ಮಹತ್ವ ಪಡೆಯದ ಗ್ರಾಮವಾಗಿದೆ. ಕರ್ನಾಟಕ ಮತ್ತು ಆಂಧ್ರ ಪ್ರದೇಶ ಈ ಎರಡು ರಾಜ್ಯಗಳ ಸಾಮಾಜಿಕ ಬದುಕನ್ನು ಇಲ್ಲಿ ಕಾಣಬಹುದು. ಕೇವಲ ೧ ೧/೨ ಕಿ.ಮೀ. ದೂರದಲ್ಲಿಯೇ ನೆರೆ ರಾಜ್ಯವಾದ ಆಂಧ್ರಪ್ರದೇಶದ ಮೇರೆ ಸಿಗುವುದು. ಈ ಒಂದು ಕಾರಣದಿಂದ ಇಲ್ಲಿ ದ್ವಿಭಾಷಿಕತೆಯ ಪ್ರಭಾವ ಹೆಚ್ಚಾಗಿದೆ. ಕೃಷಿಯಾಧಾರಿತ ಗ್ರಾಮವಾದರೂ ಜಿಲ್ಲೆಯ ಜಲಸಂಪತ್ತು ಸಮೃದ್ಧವಾಗಿದ್ದರೂ ಈ ಗ್ರಾಮಕ್ಕೆ ಕೃಷಿಗೆ ನೀರು ಸಿಗದಿರುವುದಿರಲಿ ಕುಡಿಯುವುದಕ್ಕೂ ಪರದಾಡುವ ಸ್ಥಿತಿ ನಿರ್ಮಾಣವಾಗಿ ಚಿಂತಾಜನಕವಾಗಿದೆ. ಫ್ಲೋರೈಡ್-ಕ್ಯಾಲ್ಸಿಯಂ ಅಂಶಗಳು ಹೆಚ್ಚಿರುವ ನೀರನ್ನು ಕುಡಿದ ಜನರಿಗೆ ಜ್ವರ, ಕೀಲುನೋವು ಮುಂತಾದ ರೋಗಗಳು ಸಾಮಾನ್ಯವಾಗಿವೆ. ಬಡತನವನ್ನೇ ಉಂಡು ಬಡತನವನ್ನೇ ಹೊದ್ದುಕೊಂಡು ಮಲಗುವುದು ಈ ಗ್ರಾಮದ ಸ್ಥಿತಿ. ಪ್ರಗತಿಪರ ದೇಶವೆಂದು ಅಭಿವೃದ್ಧಿಯಲ್ಲಿ ಅಮೇರಿಕಾ ಮುಂತಾದ ರಾಷ್ಟ್ರಗಳ ಜೊತೆ ಪೈಪೋಟಿ ನಡೆಸುವ ಭಾರತಕ್ಕೆ ಈ ಗ್ರಾಮದ ಬಡತನ ಮತ್ತು ಬಡವರ ಕೂಗು ಕೇಳಿಸದೇ ಇರುವುದು. ಕೇಳಿ, ನಿರ್ಲಕ್ಷ್ಯವಹಿಸುತ್ತಿರುವುದು ಸೋಜಿಗವೆನಿಸಿದೆ.

### ಜನಸಂಖ್ಯೆ ಮತ್ತು ಸಾಕ್ಷರತೆ

ಜನಸಂಖ್ಯೆ ದೃಷ್ಟಿಯಲ್ಲಿ ಭಾರತ ಶ್ರೀಮಂತ ದೇಶ. ವಿಶ್ವದ ಎರಡನೆಯ ದರ್ಜೆಯಿದ್ದು ಕೆಲವೇ ವರುಷಗಳಲ್ಲಿ ಚೀನಾವನ್ನು ಹಿಂದಿಕ್ಕಿ ಒಂದನೇ ಸ್ಥಾನ ಪಡೆಯುವ ಸಾಧ್ಯತೆಯಿದೆ. ಬಡತನಕ್ಕೆ ಜನಸಂಖ್ಯೆಯೊಂದೇ ಕಾರಣವೆಂಬ ಕುಂಟು ನೆಪ ಪ್ರಧಾನ, ಮಾನವ ಸಂಪನ್ಮೂಲದ ಸದ್ಬಳಿಕೆ ಮಾತ್ರ ಗೌಣ. ಗ್ರಾಮವು ಸು. ೭೧೬ ಮನೆಗಳನ್ನು ಹೊಂದಿದ್ದು, ಸು.೩೦೮೨ರಷ್ಟು ಜನಸಂಖ್ಯೆಯನ್ನು ಹೊಂದಿದೆ. ಇದರಲ್ಲಿ ಪುರುಷರು ೧೬೪೮ರಷ್ಟಾದರೆ ಸ್ತ್ರೀಯರು ೧೪೩೪ರಷ್ಟಿದ್ದಾರೆ. ಪರಿಶಿಷ್ಟ ಜಾತಿ ೬೪೫, ಪರಿಶಿಷ್ಟ ಪಂಗಡ ४೦೫ ಇತರೆ ೨೦೩೨ ಲಿಂಗಾಯತ ಸಮುದಾಯದವರೇ ಅತೀ ಹೆಚ್ಚು ವಾಸಿಸುತ್ತಿದ್ದು, ಕುರುಬ, ನೇಕಾರ, ಬಡಿಗ, ವಿಶ್ವಕರ್ಮ ಮುಂತಾದ ಎಲ್ಲಾ ಜಾತಿಯ ಸಮುದಾಯದವರು ಈ ಗ್ರಾಮದಲ್ಲಿದ್ದಾರೆ. ಅಂದಾಜು ಪ್ರಕಾರ ೬೯ ಆರ್.ಸಿ.ಸಿ. ಮನೆಗಳು, ೫೩೨ ಮೇಲ್ ಮನೆಗಳು, ೮೩ ಆಶ್ರಯ ಮನೆಗಳು, ೧೬ ಗುಡಿಸಲು, ೧೪ ಬಿದ್ದುಹೋದ ಮನೆಗಳಿದ್ದು, ಗ್ರಾಮದ ಅರ್ಧದಷ್ಟು ಸಮತಲವಾಗಿದ್ದರೆ ಇನ್ನುಳಿದ ಪ್ರದೇಶ ಸ್ವಲ್ಪ ದಿಣ್ಣೆಗಳಿದ್ದು, ಬಹುತೇಕವಾಗಿ ಇಲ್ಲಿ ವಾಸಿಸುವುದು ಮಾದಿಗ ಸಮುದಾಯವಾಗಿದೆ. ಒಟ್ಟು ಗ್ರಾಮದ ವಿಸ್ತೀರ್ಣ ಸು. ೪೯೫೭.೨೭ ಹೆಕ್ಟೇರ್.

ಈ ಗ್ರಾಮದಲ್ಲಿ ವಿದ್ಯಾವಂತರು ಹೆಚ್ಚಾಗಿರುವುದು ವಿಶೇಷವಾಗಿದೆ. ಏಕೆಂದರೆ ಬಡತನ ಹಾಗೂ ಬರಗಾಲ ಪ್ರದೇಶದಲ್ಲಿ ಬದುಕು ಸಾಗಿಸುವುದೇ ಕಷ್ಟವಾದಾಗ ಶಿಕ್ಷಣದ ಬಗೆಗಿನ ಕಾಳಜಿಯನ್ನು ನೋಡಿದರೆ

ಹೆಮ್ಮೆ ಪಡುವಂತಹ ವಿಷಯವಾಗಿದೆ. ಶಿಕ್ಷಣ, ಸಂಘಟನೆ ಮತ್ತು ಹೋರಾಟ ಎಂಬ ಮೂರು ಮಂತ್ರಗಳಲ್ಲಿ ಶಿಕ್ಷಣಕ್ಕೆ ಅಂಬೇಡ್ಕರ್ ಕೊಟ್ಟ ಮಹತ್ವವನ್ನು ಗ್ರಾಮದ ಎಲ್ಲಾ ಸಮುದಾಯದವರು ಅರಿತವರಂತೆ ಕಂಡುಬರುತ್ತದೆ. ಶೇಕಡ ೭೦%ರಷ್ಟು ಸಾಕ್ಷರತೆಯನ್ನು ಹೊಂದಿದ ಗ್ರಾಮವಾಗಿದೆ. ಕೆಲವರು ಪಿಯುಸಿ, ಪದವಿಗಳನ್ನು ಮುಗಿಸಿದರೆ ಇನ್ನೂ ಕೆಲವರು ಡಿ.ಇಡಿ., ಕಾನೂನು ಪದವಿಗಳನ್ನು ಪಡೆದಿರುವುದು ಕಂಡುಬರುತ್ತದೆ. ಡಾಕ್ಟರು, ಪೋಲೀಸರು, ಶಿಕ್ಷಕರು, ಡಿ ದರ್ಜೆ ನೌಕರರು, ಬ್ಯಾಂಕ್‌ನೌಕರರು ಮುಂತಾದ ಸರಕಾರಿ-ಅರೆ ಸರಕಾರಿ ಸಂಸ್ಥೆಗಳಲ್ಲಿ ಉದ್ಯೋಗ ಮಾಡುತ್ತಿರುವುದು ತಿಳಿದುಬಂದಿದೆ. ಇಡಿ ಬಳ್ಳಾರಿ ತಾಲ್ಲೂಕಿನಲ್ಲಿ ಸರಕಾರಿ ನೌಕರರ ಪ್ರಮಾಣವನ್ನು ಗಮನಿಸಿದರೆ ಈ ಗ್ರಾಮ ಮೊದಲನೆಯ ಸಾಲಿನಲ್ಲಿ ನಿಲ್ಲುತ್ತದೆಂದು ಕ್ಷೇತ್ರಕಾರ್ಯಕ್ಕೆ ಹೋದಾಗ ತಿಳಿದುಬಂದಿದೆ. ಮೂಲಭೂತ ಸೌಕರ್ಯಗಳೇ ಇಲ್ಲದ ಈ ಗ್ರಾಮವು ಇಷ್ಟೊಂದು ಶಿಕ್ಷಣದ ಬಗೆಗಿನ ಒಲವು ತೋರಿರುವುದು ಆಶ್ಚರ್ಯಕರ ಸಂಗತಿಯಾಗಿದೆ. ನವ ಸಾಕ್ಷರತೆಯ ಲಾಭ ಪಡೆದು ಇಲ್ಲಿನ ಗ್ರಾಮದಲ್ಲಿ ೪೭ ಜನ ನವಸಾಕ್ಷರರಾಗಿದ್ದಾರೆ. ಗ್ರಾಮದಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಒಂದು ಗ್ರಂಥಾಲಯವಿದೆ. ಸರಕಾರಿ ಪ್ರಾಥಮಿಕ ಶಾಲೆ, ಪ್ರೌಢಶಾಲೆ, ಮಠದ ಶಾಲೆ ಹಾಗೂ ವಸತಿ ನಿಲಯಗಳ ಸೌಕರ್ಯವಿದೆ.

ಅಂಚೆ ಕಛೇರಿ, ಗ್ರಾಮೀಣ ಬ್ಯಾಂಕ್, ಸಹಕಾರಿ ಸಂಘ, ಸ್ತ್ರೀ ಶಕ್ತಿ ಗುಂಪುಗಳು ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರವಿದ್ದು, 'ಈ ನಮ್ಮ ಕನ್ನಡ ನಾಡು' ಪತ್ರಿಕೆಯ ವರದಿಗಾರರು ಇದೇ ಗ್ರಾಮದವರಾಗಿದ್ದಾರೆ. ಮೊನ್ನೆ ತಾನೇ ನಿಧನ ಹೊಂದಿದ ಡಿ.ಆರ್.ಎರ್ರಿಸ್ವಾಮಿ 'ಆಶಾಕಿರಣ' ಪತ್ರಿಕೆಯ ಸಂಪಾದಕರಾಗಿ ಕೆಲಸ ನಿರ್ವಹಿಸಿದ್ದರು. ಹೀಗಾಗಿ ಅನೇಕ ರೀತಿಯ ವಿಷಮ ಪರಿಸ್ಥಿತಿಯ ಮಧ್ಯೆ ಶಿಕ್ಷಣದ ಅಭಿರುಚಿಯನ್ನು ಬೆಳೆಸಿಕೊಂಡು, ಕಿರಿಯರಲ್ಲಿ ಶಿಕ್ಷಣದ ಬಗ್ಗೆ ಆಸಕ್ತಿ ಬೆಳೆಸುತ್ತಾ ಇಡೀ ಬಳ್ಳಾರಿ ತಾಲೂಕಿನಲ್ಲಿ ಆದರ್ಶವಾದ ಶಿಕ್ಷಣ ಪ್ರೇಮಿಗಳು ಈ ಗ್ರಾಮದಲ್ಲಿದ್ದಾರೆ. ಸಂಪೂರ್ಣ ವಿದ್ಯಾಭ್ಯಾಸ ಪಡೆಯದವರು, ಆರ್ಥಿಕತೆಯ ಅಭಾವದಿಂದ ಉನ್ನತ ಶಿಕ್ಷಣ ಹಾಗೂ ಪ್ರಾಥಮಿಕ ಶಿಕ್ಷಣದಿಂದ ವಂಚಿತರಾದವರು ಇಲ್ಲವೆಂದಲ್ಲ. ಏನೇ ಇರಲಿ ಶಿಕ್ಷಣದ ತತ್ವಗಳನ್ನು ಅಳವಡಿಸಿಕೊಂಡ ಗ್ರಾಮ ಇದಾಗಿರುವುದಾಗಿ ತಿಳಿದು ಬರುತ್ತದೆ.

**ನೆಲ-ಜಲ-ಹವಮಾನ**

ಭೂಮಿಯ ಮೇಲ್ಮೈ ಲಕ್ಷಣ ಎಲ್ಲಾ ಕಡೆಯೂ ಒಂದೇ ಸಮನಾಗಿಲ್ಲ. ಅದು ಸ್ಥಳದಿಂದ ಸ್ಥಳಕ್ಕೆ ಬದಲಾಗುತ್ತಾ ಹೋಗುತ್ತದೆ. ಅದು ಒಂದು ಕಾಲದಿಂದ ಮತ್ತೊಂದು ಕಾಲಕ್ಕೂ ಬದಲಾಗುತ್ತಾ ಹೋಗುತ್ತದೆಂಬ ಅಂಶವಂತೂ ಕುತೂಹಲ ಕೆರಳಿಸುವಂತಹದ್ದು. ಗಾಳಿ, ಮಳೆ, ಹರಿಯುವ ನೀರು, ನೀರ್ಗಲ್ಲು, ಚಲಿಸುವ ನೀರ್ಗಲ್ಲು, ಪ್ರವಾಹ, ಸಾಗರದ ಅಲೆಗಳು, ಸಸ್ಯಗಳು, ಪ್ರಾಣಿಗಳು ಈ ಮೊದಲಾದ ಪ್ರಾಕೃತಿಕ ಅಂಶಗಳು ಭೂಮಿಯ ಹೊರಮೈಗೆ ಬೇರೆ ಬೇರೆ ರೂಪಗಳಲ್ಲಿ ಕಂಡುಬರುತ್ತದೆ. ಬಳ್ಳಾರಿ ಜಿಲ್ಲೆಯ ಬಹುಭಾಗ ಕಪ್ಪು ಹಾಗೂ ಕೆಂಪು ಮಣ್ಣಿನ ಭೂ ಪ್ರದೇಶಗಳ ನಮೂನೆಗಳಿಂದ ಕೂಡಿದೆ. ಅಲ್ಲಲ್ಲಿ ಮರಳು ಮಣ್ಣಿನ ದಿಣ್ಣೆಗಳು ಸಹ ಇವೆ ಆದರೆ ಅದರ ಪ್ರಮಾಣ ಕಡಿಮೆಯಾಗಿದೆ.

ಅತ್ಯಧಿಕ ಪ್ರಮಾಣದಲ್ಲಿ ಕಪ್ಪು ಮಣ್ಣಿನ ಪ್ರದೇಶಗಳಿದ್ದು, ಅದು ಹೆಚ್ಚು ಫಲವತ್ತತೆಯ ಹಾಗೂ ತೇವಾಂಶದಿಂದ ಕೂಡಿದೆ. ದೊಡ್ಡ ದೊಡ್ಡ ಬಂಡೆ ಕಲ್ಲುಗಳು ಹಾಗೂ ಬೆಣಚು ಕಲ್ಲುಗಳಿಂದ ಕೂಡಿದ್ದು, ಪ್ರಮುಖ ಖನಿಜಗಳಾದ ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರುಗಳಲ್ಲಿ ೧೨೨೫ ಮಿಲಿಯನ್ ಟನ್‌ಗಳಷ್ಟು ಮ್ಯಾಂಗನೀಸ್ ಅದಿರು ಹಾಗೂ ೭೮೨ ಮಿಲಿಯನ್ ಟನ್‌ಗಳಷ್ಟು ಕಬ್ಬಿಣದ ಉತ್ಕೃಷ್ಟ ಅದಿರುಗಳ ಸಂಪನ್ಮೂಲ ಹೊಂದಿದೆ. ಅದು ಸಂಡೂರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಶೇಕಡ ೭೫ರಷ್ಟು ದೊರೆಯುತ್ತದೆ. ಹೊಸಪೇಟೆಯು ಎರಡನೆಯ ಸ್ಥಾನದಲ್ಲಿ ಬರುತ್ತದೆ.

ಇಷ್ಟೆಲ್ಲ ಸಂಪದ್ಭರಿತವಾದ ಭೌಗೋಳಿಕ ಪರಿಸರವಿದ್ದರೂ ಕೃಷಿಗೆ ಯೋಗ್ಯವಾಗಿರುವ ನೀರಿನ ಸೌಲಭ್ಯಗಳಿಲ್ಲದೆ ಬಂಜರು ಭೂಮಿಗಳಿರುವುದು ಬಹಳಷ್ಟಿದೆ. ಅಂತಹ ಒಣ ಪ್ರದೇಶಗಳಲ್ಲಿ ಚೇಳಗುರಿಕೆ ಗ್ರಾಮವು ಒಂದಾಗಿದ್ದು, ಇಲ್ಲಿನ ಕೆಲವರು ಕೊಳವೆಬಾವಿಗಳಿಂದ ಕೃಷಿಯನ್ನು ಮಾಡಿದರೆ, ಬಹುತೇಕ ಭೂಮಿ ಮಳೆಯ ಮೇಲೆ ಅವಲಂಬಿತವಾಗಿದೆ. ಇತರೆ ಜಿಲ್ಲೆಗಳಿಗಿಂತಲೂ ಘೋರವಾದ ಬರಗಾಲವನ್ನು ಅನುಭವಿಸುತ್ತಿದೆ. "ಬಹುಶಃ ನಾವು ವಾಸಮಾಡುತ್ತಿರುವ ಗ್ರಹವನ್ನು 'ಭೂಮಿ' ಎಂದು ಕರೆದರೆ ತಪ್ಪಾದೀತು. ಅನೇಕ ವಿಜ್ಞಾನಿಗಳು ಇದನ್ನು 'ಜಲಾವೃತ ಗ್ರಹ' ಎಂದು ಕರೆಯಲು ಇಷ್ಟಪಡುತ್ತಾರೆ. ಆದರೆ ಅವರ ಈ ಇಷ್ಟ ಭೂಮಿಯ ಹೊರವಲಯದ ಶೇ. ೭೦%ರಷ್ಟು ಭಾಗವನ್ನು ನೀರು ಆವರಿಸಿರುವುದಕ್ಕಲ್ಲ. ಇಡೀ ಸೌರವ್ಯೂಹದಲ್ಲೇ ಇಷ್ಟು ಅಧಿಕ ಪ್ರಮಾಣದಲ್ಲಿ ನೀರು ಪಡೆದಿರುವ ವೈಶಿಷ್ಟ್ಯವಿರುವುದು ಈ ಭೂ ಗ್ರಹಕ್ಕೆ. ಅಲ್ಲದೇ ಈ ಗ್ರಹದ ಮೇಲಿನ ಜೀವಿಗಳಿಗೆ ನೀರು ಆಧಾರವಾಗಿರುವುದು ಇನ್ನೊಂದು ವೈಶಿಷ್ಟ್ಯ". (ಮೂಲ ಸಂಪಾದಕರು: ಜಾರ್ಜ್ ಕುರಿಯನ್ ಎಸ್.ಸರಾಬ್. ಅನುವಾದಕರು. ಐ.ಶ್ರೀ ಪ್ರಸಾದ್, ಪ್ರಾಧ್ಯಾಪಕ, ಭೂಗೋಳಶಾಸ್ತ್ರ ಪು.೧೭೧)

ಪೃಥ್ವಿಯ ಮೂರು ಭಾಗ ನೀರಿನಿಂದ ಆವೃತವಾದರೂ ನೀರಿನ ಅಭಾವ ಎದುರಿಸುತ್ತಿರುವುದಕ್ಕೆ ಹಲವಾರು ಕಾರಣಗಳಿವೆ. ಜಿಲ್ಲೆಯಲ್ಲಿ ಮುಖ್ಯವಾದ ನದಿಗಳೆಂದರೆ ತುಂಗಭದ್ರಾ ನದಿ ಮತ್ತು ಅದರ ಉಪನದಿಗಳಾದ ಹಗರಿ ಮತ್ತು ಚಿಕ್ಕಹಗರಿ ನದಿಗಳು. ಬಳ್ಳಾರಿ, ರಾಯಚೂರು ಹಾಗೂ ಆಂಧ್ರ ಪ್ರದೇಶದ ಹಲವಾರು ಜಿಲ್ಲೆಗಳಿಗೆ ಕೃಷಿ ಹಾಗೂ ಕುಡಿಯುವ ನೀರನ್ನು ಒದಗಿಸುತ್ತಿವೆ. ದೂರದ ಜಿಲ್ಲೆ ಹಾಗೂ ರಾಜ್ಯಗಳಿಗೆ ಕೃಷಿ ಹಾಗೂ ಕುಡಿಯುವ ನೀರಿನ ವ್ಯವಸ್ಥೆಯಿರುವುದು. ಆದರೆ ಪಕ್ಕದ ಹಲವಾರು ಗ್ರಾಮಗಳಿಗೆ ಕೃಷಿಗೆ ನೀರು ಸಿಗುವುದಿರಲಿ, ಕುಡಿಯಲು ಉಪ್ಪು ನೀರಿಗೂ, ಪ್ಲೋರೈಡ್, ಕ್ಯಾಲ್ಸಿಯಂ ರಹಿತ ನೀರು ಸಹ ಸಿಗದಿರುವುದು ತುಂಬಾ ಸೋಜಿಗದ ಸಂಗತಿಯಾಗಿದೆ. ಚುನಾವಣೆಗಳ ಸಮಯದಲ್ಲಿ ನೀಡಿದ ಭರವಸೆಗಳು ನೀಡಿದ ಕೇವಲ ಭರವಸೆಗಳಾಗಿವೆ ಎಂಬುದು ಗ್ರಾಮದ ಜನರಿಗೆ ಅರಿವಾಗಿರುವುದು ಇಂದು ನಿನ್ನೆಯದಲ್ಲ. ಇದು ವರ್ತಮಾನ ಭೂತಗಳ ಪರಿಮೂಸೆಯಲ್ಲಿ ನಿಂತಂತ್ತಿವೆ.

ಚೇಳಗುರಿಕೆ ಗ್ರಾಮದಿಂದ ೮ ಕಿ.ಮೀ. ದೂರದಲ್ಲಿ ಹಗರಿ, ಚಿಕ್ಕ ಹಗರಿನದಿಗಳು ಹರಿಯುತ್ತಿದ್ದರೂ ಕೃಷಿ ಹಾಗೂ ಕುಡಿಯುವ ನೀರಿಗೆ ಕೊರತೆಯಿರುವುದು ಕಂಡುಬರುತ್ತದೆ. ಇದಕ್ಕೆಲ್ಲ ಪೂರ್ವಗ್ರಹ ಪೀಡಿತ

ಅನೇಕ ರಾಜಕೀಯ ಪೀಡೆಗಳು ಸುತ್ತುವರೆದಿರಬಹುದೆಂಬ ಗುಮಾನಿಗಳು ಕೇಳಿಬರುತ್ತಿವೆ. ಇಲ್ಲಿಯ ಮಳೆಯ ಪ್ರಮಾಣ ತುಂಭ ಕಡಿಮೆಯಾಗಿದ್ದು. ಜನರು ಬದುಕಿನ ಜೊತೆಗೆ ಹಲವು ವೈರುಧ್ಯಗಳನ್ನು ಎದುರಿಸಬೇಕಾಗಿದೆ. ಗ್ರಾಮದ ಕೆಲವೇ ಜನರನ್ನು ಬಿಟ್ಟು, ಉಳಿದೆಲ್ಲ ಜನರು ಬಳ್ಳಾರಿ ನಗರಕ್ಕೆ ಕೆಲಸಕ್ಕಾಗಿ ಅರಸಿ ಬರುವುದು ರೂಢಿಯಾಗಿದೆ.

ಚೇಳಗುರಿಕೆ ಗ್ರಾಮ ಜಿಲ್ಲೆಯಿಂದ ಬಹುದೂರವಿಲ್ಲದ ಪ್ರದೇಶವಾಗಿರುವುದರಿಂದ ಜಿಲ್ಲೆಯ ಹವಾಗುಣದಂತೆ ಸಾಮಾನ್ಯವಾಗಿರುವುದು. ಇಲ್ಲಿ ಒಣಹವೆಯಿಂದ ಕೂಡಿದ್ದು, ಅತಿಹೆಚ್ಚು ಬಿಸಿಲಿನಿಂದ ಕೂಡಿದ ಉಷ್ಣಾಂಶ ಪ್ರದೇಶವಾಗಿದೆ. ಗರಿಷ್ಠ ಉಷ್ಣಾಂಶವು ೧೫° ಯಿಂದ ೪೫° ಡಿಗ್ರಿಯವರೆಗೆ ಇರುತ್ತದೆ. ಹಾಗೆಯೇ ಚಳಿಗಾಲದಲ್ಲಿ ಕನಿಷ್ಟ ಉಷ್ಣಾಂಶವು ೯° ಯಿಂದ ೧೦° ಸೆಂಟಿಗ್ರೇಡ್‌ನಷ್ಟಿರುತ್ತದೆ. ಬೇಸಿಗೆಯಲ್ಲಿ ಅತಿ ಸೆಕೆ, ಚಳಿಗಾಲದಲ್ಲಿ ಅತೀ ಚಳಿಯಿರುವುದು ಇಲ್ಲಿನ ವೈಶಿಷ್ಟ್ಯವಾಗಿದೆ. ಬಳ್ಳಾರಿಯ ಹಾಸ್ಯ ಸಾಹಿತಿ ಬೀಚಿ ಹೇಳಿರುವಂತೆ "ಬಳ್ಳಾರಿಯಲ್ಲಿರುವುದು ಎರಡೇ ಕಾಲ ಒಂದು ಬೇಸಿಗೆ ಮತ್ತೊಂದು ಅತೀ ಬೇಸಿಗೆ" ಎಂಬ ಹಾಸ್ಯಾಸ್ಪದ ಹೇಳಿಕೆಯನ್ನು ಗಮನಿಸಿದರೆ ತಿಳಿಯುತ್ತದೆ. ಬಳ್ಳಾರಿಯ ಬಿಸಿಲು ಹೈದರಾಬಾದ್ ಕರ್ನಾಟಕದ ಜಿಲ್ಲೆಗಳ ವ್ಯಾಪ್ತಿಯೊಳಗೆ ಬಹುಬೇಗನೆ ಸೇರಿ ಬಿಡುತ್ತದೆ.

**ಬೆಳೆಗಳು**

'ಕೃಷಿಯ ಮೂಲ ಋಷಿಯ ಮೂಲ ಹುಡುಕಬಾರದೆಂಬ' ಹೇಳಿಕೆಯಿದೆ. ಕೃಷಿಯ ಮೂಲವನ್ನು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಏಕೆಂದರೆ ಕೃಷಿ ನಾಗರೀಕತೆಯಷ್ಟೇ ಪ್ರಾಚೀನವಾದುದ್ದು. ಅದು ಮಾನವನ ಅತಿ ಪುರಾತನ ಉದ್ಯೋಗವೆಂದು ಪರಿಗಣಿಸಲ್ಪಟ್ಟಿದೆ. ಭೂಮಿ ರಚಿತವಾಗಿ ಅದರ ಮೇಲೆ ಸಸ್ಯ ಹಾಗೂ ಪ್ರಾಣಿವರ್ಗಗಳು ಕಾಣಿಸಿಕೊಂಡಾಗಿನಿಂದ ಇದುವರೆಗೆ ಆಗಿರುವ ಸ್ಥಿತ್ಯಂತರಗಳ ಕಥೆ ಕುತೂಹಲಕರವಷ್ಟೇ ಅಲ್ಲ, ಅದ್ಭುತವೂ ಆಗಿದೆ. ಸುಮಾರು ಹತ್ತುಸಾವಿರ ವರ್ಷಗಳ ಹಿಂದೆ ಮಾನವ ಮಾಂಸಹಾರಿಯಾಗಿ ಬೇಟೆಯಾಡಿ ಆಹಾರ ಸೇವಿಸುತ್ತಿದ್ದ, ಗೆಡ್ಡೆ ಗೆಣಸು, ಹಣ್ಣು ಹಂಪಲುಗಳನ್ನೇ ತನ್ನ ಆಹಾರಕ್ಕಾಗಿ ಬಳಸುತ್ತಿದ್ದ. ಹೀಗೆ ಕ್ರಮೇಣ ಅವನ ಬಯಕೆಗಳು ಹೆಚ್ಚಾಗತೊಡಗಿದವು. ಬುದ್ದಿ ಬೆಳೆದಂತೆಲ್ಲಾ ನೆಲ, ನೀರು, ಕಾಲ, ಹವೆ ಮೊದಲಾದ ಅಂಶಗಳನ್ನು ಅನುಸರಿಸಿ ಸಸ್ಯಗಳಲ್ಲಿ ಆಗುತ್ತಿದ್ದ ಬದಲಾವಣೆಗಳನ್ನು ಅವನು ಗಮನಿಸಿದ. ಆಹಾರದ ಕೊರತೆ ಹೆಚ್ಚಾದಂತೆ ಈ ಅಂಶಗಳನ್ನು ಬಳಸಿಕೊಂಡು ಸ್ವಪ್ರಯತ್ನದಿಂದ ಕೃಷಿಯನ್ನು ಆರಂಭಿಸಿದ. ಹೀಗೆ ಆರಂಭಗೊಂಡ ಕೃಷಿಯು ಹಲವಾರು ಪ್ರದೇಶಗಳಲ್ಲಿ ಭಿನ್ನತೆಯ ಸ್ವರೂಪ ಪಡೆಯಿತು. ನೆಲ ಜಲಗಳೆರಡರ ಪರಿಣಾಮ ಕೃಷಿಯ ಬೆಳವಣಿಗೆಯಲ್ಲಿ ವ್ಯತ್ಯಾಸವಾಗಲು ಮುಖ್ಯ ಕಾರಣವಾಯಿತು.

ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ನೀರು ಮತ್ತು ಮಣ್ಣಿನ ಫಲವತತ್ತೆಯ ಪರಿಣಾಮದಿಂದಾಗಿ ಬೆಳೆಯುವ ಫಸಲುಗಳಲ್ಲಿ ತೀವ್ರವಲ್ಲದಿದ್ದರೂ ಕೆಲವು ಬದಲಾವಣೆಗಳು ಕಂಡುಬರುತ್ತವೆ. ಪ್ರತ್ಯಕ್ಷವಾಗಿಯೋ ಅಥವಾ ಪರೋಕ್ಷವಾಗಿಯೋ ಮಾನವನಿಗೆ ಅವಶ್ಯವಾಗಿರುವ ಆಧಾರಗಳಿಗೆಲ್ಲ ಪ್ರಾಕೃತಿಕ ಮೂಲವಾಗಿರುವ

ಮಣ್ಣು ಮುಖ್ಯವಾದುದು. ಭೂಮಿಯ ಚಿಪ್ಪಿನ ಅತ್ಯಂತ ಮೇಲಿರುವ ಹೊರ ಆವರಣವನ್ನು ಇದು ಪ್ರತಿನಿಧಿಸುವುದೇ ಅಲ್ಲದೇ ಸಸ್ಯಗಳಿಗೆ ಅವಶ್ಯಕವಾದ ಜೈವಿಕ ಮತ್ತು ಖನಿಜಗಳನ್ನು ಇದು ಒದಗಿಸುತ್ತದೆ. ಸಸ್ಯ ಪ್ರಾಣಿಗಳ, ಪಳೆಯುಳಿಕೆಗಳು ಕೊಳೆತು, ಕಪ್ಪೇರಿ ಗೊಬ್ಬರವಾಗುವುದರಿಂದ ಕೃಷಿಗೆ ಯೋಗ್ಯವೆನಿಸಿವೆ.

ನೀರೇ ಕೃಷಿಯ ಸಂಜೀವಿನಿ ಎಂಬುದು ತಿಳಿದ ವಿಷಯ. ಇಡೀ ಬಳ್ಳಾರಿ ತಾಲ್ಲೂಕಿನಲ್ಲಿ ಈ ಗ್ರಾಮದ ಸುತ್ತ ಮುತ್ತ ಸುಮಾರು ಕಿ.ಮೀವರೆಗೂ ನೀರಾವರಿ ಸೌಲಭ್ಯದ ಕೊರತೆ ಕಂಡುಬರುವುದರಿಂದ ಮಳೆಯನ್ನೇ ಅವಲಂಭಿಸಿದೆ. ಮುಂಗಾರು ಮಳೆಗೆ ಬೆಳೆಯುವ ಪ್ರಮುಖ ಬೆಳೆಗಳೆಂದರೆ ಕಡಲೆಕಾಯಿ, ದನಿಯಾ, ಸೂರ್ಯಕಾಂತಿ, ಬಿಳಿಜೋಳ ಅಲ್ಲಲ್ಲಿ ಕೊಳವೆಬಾವಿ ವ್ಯವಸ್ಥೆಯಿರುವ ಜಮೀನಿನಲ್ಲಿ ಭತ್ತ ಬೆಳೆಯುತ್ತಾರೆ, ಆದರೆ, ತೀರಾ ಕಡಿಮೆ ಎನ್ನಬಹುದು. ಹಿಂಗಾರುವಿನಲ್ಲಿಯು ಸಹ ಇದೇ ರೀತಿಯ ಬೆಳೆಗಳನ್ನು ಬೆಳೆಯುತ್ತಾರೆ. ಮೀನಳ್ಳಿ, ಸಿಡಗಿನಮೊಳೆ, ಕಾರೇಕಲ್ಲು, ವೀರಾಪುರ ಹಾಗೂ ಚೇಳಗುರಿಕೆ ಗ್ರಾಮದಲ್ಲಿ ಬೆಳೆಯುವ 'ದನಿಯಾ' ಬೆಳೆಗೆ ಮಾರುಕಟ್ಟೆಯಲ್ಲಿ ವಿಶೇಷ ಸ್ಥಾನವಿದೆ.

**ರಾಜಕೀಯ ಪ್ರಭಾವ**

ಬಳ್ಳಾರಿಯ ಭಾಗ ರಾಜಕೀಯ ಒತ್ತಡ ಹಾಗೂ ಒತ್ತಾಸೆಗಳಿಗೆ ಹಿಂದಿನಿಂದಲೂ ತನ್ನದೇ ಆದ ಸ್ಥಾನ ಮಾನವನ್ನು ಪಡೆದಿದೆ. ರಾಷ್ಟ್ರೀಯ ಅಂತರಾಷ್ಟ್ರೀಯ ಮಾನ್ಯತೆಗಳಿಸಿದ ಉದಾಹರಣೆಗಳಿವೆ. ಈ ಹಿಂದೆ ರಾಯಲಸೀಮಾ ಭಾಗವಾಗಿ ಆಗಿನ ಮದ್ರಾಸ್ ಪ್ರಾಂತ್ಯದಲ್ಲಿದ್ದ ಹೆಚ್.ರೆಡ್ಡಿ ಮಹಾಬಳೇಶ್ವರಪ್ಪ ಹಾಗೂ ಹಾಲರ್ವಿ ಸೀತಾರಾಮರೆಡ್ಡಿ ಹಣಕಾಸು ಸಚಿವರಾಗಿ ಮದ್ರಾಸ್ ಸರ್ಕಾರದಲ್ಲಿ ಬಳ್ಳಾರಿಯನ್ನು ಪ್ರತಿನಿಧಿಸಿದ್ದರು. ಅಂದಿನಿಂದ ಇಂದಿನವರೆಗೂ ಹಲವಾರು ಸಚಿವರು ಹಲವಾರು ಖಾತೆಗಳನ್ನು ವಹಿಸಿಕೊಂಡಿದ್ದರು ಸಹ ಈ ಗ್ರಾಮದವರು ರಾಜಕೀಯವಾಗಿ ಅಷ್ಟೊಂದು ಆಸಕ್ತಿ ಹೊಂದಿಲ್ಲದಿರುವುದು ಕಂಡುಬರುತ್ತದೆ. ಸಣ್ಣ ಪುಟ್ಟ ರೀತಿಯ ರಾಜಕೀಯ ವಾಸನೆ ಬಿಟ್ಟರೆ ವಿಧಾನ ಸಭಾ ಸದಸ್ಯರಾಗಲಿ ಇನ್ನಿತರೆ ಉನ್ನತ ಮಟ್ಟದ ಯಾವುದೇ ರಾಜಕೀಯದ ಗೋಜಿಗೆ ಹೋಗಿಲ್ಲ. ೨೦೦೮ರ ಲೋಕಸಭೆ ಸಂಸದರಾಗಿ ಆಯ್ಕೆಯಾದ ಜೆ.ಶಾಂತಾ ಅವರು ಪಕ್ಕದ ಜೋಳದರಾಶಿಯವರು ಎಂಬುದು ಗಮನಿಸಬೇಕಾದ ಸಂಗತಿಯಾಗಿದೆ.

**ಸಮುದಾಯಗಳು**

ಜಾತಿ ಪದ್ದತಿಯು ಹಿಂದೂ ಸಮಾಜದ ಒಂದು ವಿಶಿಷ್ಟ ಲಕ್ಷಣವಾಗಿದ್ದು, ಕರ್ನಾಟಕವು ಕೂಡ ತನ್ನದೇ ಆದ ಪ್ರಾದೇಶಿಕ ಜಾತಿಗಳನ್ನು-ಉಪಜಾತಿಗಳನ್ನು ಹೊಂದಿದೆ. ಡಿಸ್ಲೇಯವರ ಪ್ರಕಾರ ಜಾತಿಯೆಂದರೆ ಒಬ್ಬ ಮಾನವ ಅಥವಾ ದೈವ ಸಂಭೂತನಾದ ಕಾಲ್ಪನಿಕ ಪೂರ್ವಜನಿಂದ ತಮ್ಮ ವಂಶವನ್ನು ಗುರುತಿಸುವ ಕೆಲವು ಕುಟುಂಬಗಳ ಒಂದು ಸಂಕಲನ ಅಥವಾ ಅಂತಹ ಕುಟುಂಬಗಳ ಸಮೂಹಗಳು. ಜಾತಿಯು ವಂಶ ಪಾರಂಪರ್ಯವಾಗಿ ಬಂದ ಒಂದು ವೃತ್ತಿಯನ್ನು ಅನುಸರಿಸುತ್ತದೆ. ಅದು ಒಂದು ಸ್ವರೂಪವುಳ್ಳ ಸಮುದಾಯ ಅವರ ಪ್ರಕಾರ ಹಿಂದೆ ಸೀಮಿತ ವೃತ್ತಿಯನ್ನೇ ಅನುಸರಿಸಿದರೆ ಇಂದು ಇಂಥದೇ ಜಾತಿಯವರು ಎಂದು ಗುರುತಿಸದ ಹಾಗೆಯೇ ಹಲವು ವೃತ್ತಿ ಪ್ರವೃತ್ತಿಗಳಲ್ಲಿ ಹಲವಾರು ಸಮುದಾಯಗಳು ಭಾಗಿಯಾಗಿರುವುದು

ಬಹುತೇಕವಾಗಿದೆ. ಜಾತಿ ಪದ್ಧತಿಯಲ್ಲಿ ರೀತಿ ರಿವಾಜು ಮತ್ತು ನಂಬಿಕೆಗಳ ವಿಷಯದಲ್ಲಿ ವಾಡಿಕೆ ರೂಢಿಗಳು ಉದ್ಯೋಗಗಳಲ್ಲಿ ಮತ್ತು ಇವೆಲ್ಲಕ್ಕಿಂತ ಮಿಗಿಲಾಗಿ ಸಂಪ್ರದಾಯಗಳಲ್ಲಿ ಭಿನ್ನತೆ ಹಾಗೂ ಸಾಮ್ಯತೆಗಳೆರಡು ಹಾಸುಹೊಕ್ಕಾಗಿವೆ. ಚೇಳಗುರಿಕೆ ಗ್ರಾಮದ ಹಲವು ಸಮುದಾಯಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಲಿಂಗಾಯತ ಸಮುದಾಯ**

ಚೇಳಗುರಿಕೆ ಗ್ರಾಮದಲ್ಲಿ ಲಿಂಗಾಯತ ಸಮುದಾಯದವರೇ ಹೆಚ್ಚಿನ ಸಂಖ್ಯೆಯಲ್ಲಿ ನೆಲೆ ನಿಂತಿರುವರು. ಗ್ರಾಮದ ಪ್ರಮುಖ ಧಾರ್ಮಿಕ ಆಚರಣೆಗಳ ಕೇಂದ್ರತ್ವ ವಹಿಸಿದ್ದಾರೆ. ಅವರಲ್ಲಿ ಪಂಚಮ ಸಾಲಿಯವರು, ಶೀಲವಂತ ಬಣಜಿಗರು ಹಾಗೂ ಸಾಧು ಲಿಂಗಾಯತರು ಮುಂತಾದ ಒಳಪಂಗಡಗಳಿವೆ. ಅವರಲ್ಲಿ ಮದುವೆ ಸಂಬಂಧಗಳು ಸ್ವಲ್ಪ ವ್ಯತ್ಯಾಸವಾಗಿರುತ್ತವೆ. ಸಾಧು ಲಿಂಗಾಯತರು ಮೇಲೆ ತಿಳಿಸಿದ ಉಪಪಂಗಡಗಳಲ್ಲಿ ಮದುವೆಯಾಗುವುದಿಲ್ಲ. ತಮ್ಮದೇ ಪಂಗಡದಲ್ಲಿ ಮದುವೆಯಾಗುತ್ತಾರೆ. ಆದರೆ ಅವರ ಎಲ್ಲಾ ಆಚರಣೆಗಳು ಸಾಮಾನ್ಯವಾಗಿ ಒಂದೇ ರೀತಿಯಲ್ಲಿರುತ್ತವೆ. ಕೂಸು ಹುಟ್ಟಿದಾಗ ಹುಟ್ಟಿದ ಶಾಸ್ತ್ರ ಮಾಡಿ, ಹದಿಮೂರನೆಯ ದಿನಕ್ಕೆ ನಾಮಕರಣ ಶಾಸ್ತ್ರ ಮಾಡಿಸುವುದು ಲಿಂಗಾಯತ ಸಮುದಾಯದ ಸಾಮಾನ್ಯ ನಿಯಮ. ಮೊದಲು ಸ್ವಾಮಿಗಳು ಹೆಸರಿಟ್ಟು ಕರೆದ ನಂತರ ಸೋದರತ್ತೆ ಆ ಹೆಸರನ್ನು ಕರೆಯುತ್ತಾಳೆ. ಹೆಸರಿಡುವ ಹೊತ್ತಿಗೆ ಆ ಓಣಿಯ ಹೆಣ್ಣು ಮಕ್ಕಳನ್ನು ಕರೆಯುವುದು ವಾಡಿಕೆ. ಅತ್ತೆ ಕೂಸಿನ ಕಿವಿಯಲ್ಲಿ ಹೆಸರು ಉಸಿರಿಸುತ್ತಿರುವಂತೆ ಸುತ್ತನಿಂತವರು ಅವಳ ಬೆನ್ನುತಟ್ಟುತ್ತಾರೆ. ಈ ಸಂದರ್ಭದಲ್ಲಿ ಗುಗ್ಗರಿ ಹಂಚುವುದು ವಿಶೇಷವಾಗಿದೆ.

ಇತ್ತೀಚಿನ ದಿನಮಾನಗಳಲ್ಲಿ ಜನನ, ಮದುವೆಯಂಥ ಸಂದರ್ಭಗಳಲ್ಲಿ ಆಚರಿಸುವ ಹಿಂದಿನ ಆಚರಣೆಗಳು ಎಷ್ಟೋ ಮರೆಯಾಗಿವೆ ಮತ್ತು ಬದಲಾಗಿವೆ. ಹಿಂದಿನ ದಿನಗಳಲ್ಲಿ ಕಟ್ಟುನಿಟ್ಟಿನ ಆಚರಣಾ ಕ್ರಮವಿತ್ತು. ಈಗ ಎಲ್ಲಾ ಬದಲಾದರೂ ಅಲ್ಲಲ್ಲಿ ಅವುಗಳ ಆಚರಣೆ ತಪ್ಪದೆ ನಡೆಯುತ್ತದೆ. ಲಿಂಗಾಯತರು ನೆರವೇರಿಸುವ ಮದುವೆಗಳಲ್ಲಿ ಅಗ್ನಿಹೋಮಕ್ಕೆ ಅವಕಾಶವಿಲ್ಲ. ಅದರ ಬದಲು ಪಂಚ ಕಳಶ ಅಂದರೆ ಐದು ಪವಿತ್ರ ಬಿಂದಿಗೆಗಳ ಪ್ರತಿಷ್ಠೆ ಆಗುತ್ತದೆ. ಕುಲದೇವತೆ ವೀರಭದ್ರನನ್ನು ಆರಾಧಿಸುವ ಕೆಲವು ಕುಟುಂಬಗಳು ಮದುವೆಯ ಮೊದಲು ಗುಗ್ಗರಿ ಸೇವೆಯನ್ನು ಕೈಗೊಳ್ಳುವರು. ಐದರಲ್ಲಿಯ ನಾಲ್ಕು ಕಳಶಗಳಲ್ಲಿ ಹಾಲು ಮಡ್ಡಿ ಮತ್ತಿತರ ದಾಹಕ ಪದಾರ್ಥಗಳಾದ ಗುಗ್ಗಳ ಅಥವಾ ಧೂಪ ತುಂಬಿ ಕಳಶಗಳಿಗೆ ಮೆರವಣಿಗೆ ಮೂಲಕ ಒಯ್ಯುತ್ತಾರೆ. ಇವು ವೀರಭದ್ರ ಮತ್ತು ಶಿವನಿಗೆ ಸಲ್ಲಿಸುವ ಮರ್ಯಾದೆ. ಸರಳವಾಗಿ ವಿವಾಹ ವಿಧಿಯನ್ನು ಜಂಗಮನೊಬ್ಬ ನಡೆಸುವನು. ಲಿಂಗಾಯತರ ಇತರ ವಿಧಿಗಳು ಬೇರೆ ಹಿಂದೂಗಳ ವಿಧಿಗಳಂತೆ ಇರುತ್ತವೆ. ಲಿಂಗಾಯತರ ಪ್ರತಿ ಸಾಂದರ್ಭಿಕ ಆಚರಣೆಗಳು ನಡೆಯುವಾಗ ಎರ್ರಿತಾತನ ಮಠಕ್ಕೆ ಹೋಗಿ ಪೂಜೆ ಸಲ್ಲಿಸಲಾಗುತ್ತದೆ. ನಂತರ ಎಲ್ಲಾ ಶುಭ ಕಾರ್ಯಗಳು ನಡೆಯುವುದು ಈ ಗ್ರಾಮದ ಲಿಂಗಾಯತ ಸಮುದಾಯದವರ ವಿಶೇಷವಾಗಿದೆ. ಶವ ಹೂಳುವ ಪದ್ಧತಿಯಲ್ಲಿ ಶವವನ್ನು ಕುರ್ಚಿಯ ಮೇಲೆ ಕುಳ್ಳಿರಿಸಿ ಮೆರವಣಿಗೆ ರೂಪದಲ್ಲಿ ಸ್ಮಶಾನಕ್ಕೆ ಕರೆದೊಯ್ದು ಕುಳಿತ ಭಂಗಿಯಲ್ಲಿ ಹೂಳುತ್ತಾರೆ. ಏಕೆಂದರೆ ಶವವನ್ನು ದೈವತ್ವದ ಸಂಕಲ್ಪದಂತೆ ಕಾಣುತ್ತಾರೆ.

## ವಾಲ್ಮೀಕಿ ಸಮುದಾಯ

ಈ ಗ್ರಾಮದಲ್ಲಿ ವಾಲ್ಮೀಕಿ ಸಮುದಾಯದವರು ಶೇ. ೪೦%ರಷ್ಟು ಇದ್ದಾರೆ. ಕೆಲವರಿಗೆ ಜಮೀನು ಇದ್ದರೆ, ಇನ್ನು ಕೆಲವರು ಉದ್ಯೋಗಕ್ಕಾಗಿ ಬಳ್ಳಾರಿಗೆ ಬರುತ್ತಾರೆ. ಅವರ ಪ್ರಮುಖ ಆಚರಣೆಗಳಿಗೆ ಮನೆ ಹಾಗೂ ಕುಲದೇವತೆ ಎರ್ರಿತಾತನನ್ನು ಪೂಜಿಸುವುದುಂಟು. ಮದುವೆಯಂತಹ ಮಂಗಳ ಪ್ರಸಂಗಗಳಲ್ಲಿ ಸಾಮಾಜಿಕ ಸಹಕಾರ ವಿಶೇಷವಾಗಿರುತ್ತದೆ. ಹೆಣ್ಣು ಗಂಡು ಗಟ್ಟಿ ಮಾಡುವಾಗ ಸಮುದಾಯದ ಪ್ರಮುಖರು ಕೂಡಿದ ಸಮಯದಲ್ಲಿ ಒಂದಿಷ್ಟು ಹಣವನ್ನು ದೈವಕ್ಕೆ ಕೊಡಲಾಗುವುದು. ಇಲ್ಲಿ ದೈವ ಎಂದರೆ ಸಮುದಾಯದ ಹಿರಿಯರ ಗುಂಪು ಎಂದರ್ಥ. ಇಲ್ಲಿ ಸೇರಿದ ಹಿರಿಯರು ದೇವರಿಗೆ ಸಮಾನರೆನ್ನಿಸುತ್ತಾರೆ. ಮದುವೆಗಿಂತ ಮೊದಲು "ಹಿರಿಯರಿಗೆ ಮಾಡುವುದು" ಹಿರಿಯರನ್ನು ಮಾಡಿದ ದಿನ ಮಾಂಸದ ಅಡಿಗೆಗಾಗಿ ಓತ ಕುರಿ ಕೊಯ್ಯುವುದುಂಟು. ಮದುವೆ ಸಮಾರಂಭಕ್ಕೆ ಲಿಂಗಾಯತ ಮಠದ ಸ್ವಾಮಿಗಳನ್ನು ಕರೆಸೋದು ವಾಡಿಕೆಯಾಗಿದೆ.

ಸಮುದಾಯದ ಒಳಗಡೆ ನ್ಯಾಯ ಪಂಚಾಯತಿ ವಿಷಯಗಳು ಬಂದರೆ ಗ್ರಾಮದ ತಮ್ಮ ಸಮುದಾಯದ ಹಿರಿಯರೆಲ್ಲ ಸೇರಿ ಚರ್ಚಿಸಿ ಬಗೆಹರಿಸುವುದು ಸಾಮಾನ್ಯವಾಗಿದೆ. ಜನನ ಮದುವೆಯಂತಹ ಶುಭ ಕಾರ್ಯಗಳಿಗೆ ಸ್ವಾಮಿಗಳನ್ನು ಕರೆಸಿ ಶಾಸ್ತ್ರಮಾಡಿಸುವುದು ಎಲ್ಲಾ ಸಮುದಾಯದವರಂತೆ ಆಚರಿಸಲಾಗುವುದು. ಶವ ಸಂಸ್ಕಾರ ಪದ್ಧತಿ ಸಾಮಾನ್ಯವಾಗಿ ಹೂಳುವುದು ಆಗಿದೆ. "ಪೌರೋಹಿತ್ಯದ ಕಾರ್ಯವನ್ನು ಸಾಮಾನ್ಯವಾಗಿ ಅವರಲ್ಲಿ ಇರುವ ಜಂಗಮರೆಂಬುವರು ಮಾಡುತ್ತಿದ್ದರು. ಊರು ಬೇಡರು ತಮ್ಮ ಮೃತರನ್ನು ಹೂಳುತ್ತಾರೆ. ಆದರೆ ಮ್ಯಾಸಬೇಡರಲ್ಲಿ ಅಗ್ನಿ ಸಂಸ್ಕಾರವು ಪ್ರಚಲಿತದಲ್ಲಿದೆ" (ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ ೧. ಪುಟ.೩೬೪) ಗ್ರಾಮದಲ್ಲಿ ಮುಖ್ಯವಾಗಿ ಊರನಾಯಕರೇ ಇರುವುದರಿಂದ ಅಗ್ನಿ ಸಂಸ್ಕಾರದ ಆಚರಣೆಯಾಗಲೀ ಇರುವುದಿಲ್ಲ. ಇತರ ಸಮುದಾಯಗಳಲ್ಲಿರುವಂತೆ ಶವವನ್ನು ಹೂಳುವುದು ಇಸಬಾಯಿ ತೊಳೆಸುವ ಕಾರ್ಯಕ್ರಮವಿರುತ್ತದೆ. ತೀರಿಕೊಂಡ ವ್ಯಕ್ತಿಗೆ ಋಣ ತೀರಿಸುವುದನ್ನು ತಲೆ ಕೂದಲನ್ನು ಬೋಳಿಸಿ ಕೊಳ್ಳುವುದರ ಮೂಲಕ ನಡೆಯುತ್ತದೆ. ತೀರಿಕೊಂಡವರ ಮನೆಯಲ್ಲಿ ತಿಂಗಳೊಳಗಾಗಿ ಸಿಹಿ ಅಡಿಗೆ ಮಾಡಿ ತಿಥಿಯಾಗಬೇಕು. ತೀರಿಕೊಂಡ ಮೇಲೆ ಹೆಣದ ಮೇಲೆ ಬರುವವರು ತೆಂಗಿನ ಕಾಯಿ, ಊದಿನಕಡ್ಡಿ, ಹೂವಿನ ಮಾಲೆ ತರುತ್ತಾರೆ. ಈ ರೀತಿಯ ಸಂಪ್ರದಾಯ ಆಚರಣೆಗಳನ್ನು ಈ ಸಮುದಾಯದವರು ಉಳಿಸಿಕೊಂಡು ಬಂದಿದ್ದಾರೆ.

## ಮಾದಿಗ ಸಮುದಾಯ

ಚೇಳಗುರಿಕೆ ಗ್ರಾಮದಲ್ಲಿ ಲಿಂಗಾಯತರ ನಂತರ ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುತ್ತಿರುವುದು ಮಾದಿಗ ಸಮುದಾಯದವರು. ಸುಮಾರು ೬೪೫ರಷ್ಟು ಜನಸಂಖ್ಯೆ ಹೊಂದಿದ್ದು, ಒಟ್ಟು ಗ್ರಾಮದ ಜನಸಂಖ್ಯೆಯಲ್ಲಿ ಶೇ. ೬೭%ರಷ್ಟು ಕಂಡುಬರುತ್ತದೆ. ಗ್ರಾಮಕ್ಕೆ ಪ್ರವೇಶಿಸಿದಾಗ ಮೊದಲು ಕಾಣುವ ಪ್ರದೇಶದಲ್ಲಿ ಮಾದಿಗ ಸಮುದಾಯದವರು ವಾಸಿಸುತ್ತಿದ್ದು, ಎಲ್ಲಾ ಸಮುದಾಯಗಳ ಜೊತೆಗೆ ಸಾಮರಸ್ಯದ ಬದುಕನ್ನು ನಡೆಸುತ್ತಿದ್ದಾರೆ.

ಸಮುದಾಯದಲ್ಲಿ ಶಿಕ್ಷಣದ ಬಗೆಗಿನ ಕಾಳಜಿ ಹಾಗೂ ಶಿಕ್ಷಣದ ಮೌಲ್ಯಗಳು ಹೆಚ್ಚಾಗಿ ಕಂಡುಬರುತ್ತವೆ. ಪ್ರತಿ ಮನೆಯಲ್ಲಿ ವಿದ್ಯಾವಂತರು ತಕ್ಕಮಟ್ಟಿಗಿನ ವಿದ್ಯಾಭ್ಯಾಸವನ್ನು ಮಾಡಿದ್ದಾರೆ, ಮಾಡುತ್ತಿದ್ದಾರೆ. ಒಟ್ಟು ಗ್ರಾಮದ ಪರಿಕಲ್ಪನೆಯಲ್ಲಿ ಹೆಚ್ಚಾಗಿ ಈ ಸಮುದಾಯದವರು ಅನೇಕ ಸರಕಾರಿ ನೌಕರಿಗಳಲ್ಲಿ ತಾಲೂಕಿನಲ್ಲಿಯೇ ಪ್ರಥಮ ಸ್ಥಾನ ಪಡೆದಿರುವುದು ವಿಶೇಷವಾಗಿದೆ. ಡಾಕ್ಟರ್, ಬ್ಯಾಂಕ್‌ನೌಕರರು, ಕೆ.ಎಸ್.ಆರ್.ಟಿ.ಸಿ., ಶಿಕ್ಷಕರು, ವಕೀಲರು, ಎಫ್.ಡಿ.ಎ., ಎಸ್.ಡಿ.ಎ. ಹಾಗೂ ಜವಾನ ಮುಂತಾದ ಸರಕಾರಿ ಅರೆ ಸರಕಾರಿ ನೌಕರರಾಗಿರುವುದು ಹೆಮ್ಮೆಯ ಸಂಗತಿ. ಬಡತನ ಮತ್ತು ಶೋಷಣೆ ಎರಡನ್ನು ಮೈಗೂಡಿಸಿಕೊಂಡು ಶಿಕ್ಷಣದ ಹಂದರದೊಳಗೆ ಬದುಕನ್ನು ಹಸನಾಗಿ ಮಾಡಿಕೊಂಡಿರುವುದು ಸವಾಲಿನ ಪ್ರಶ್ನೆಯಾಗಿಯೇ ಕಾಣುತ್ತದೆ. "ಬಡತನವ ಬುಡಮಟ್ಟಕೀಳ ಬನ್ನಿ ಮೌಢ್ಯತೆಯ ಮಾರಿಯನ್ನು ಹೊರೆದೂಡಲೈತನ್ನಿ" ಎನ್ನುವ ಕುವೆಂಪು ಅವರ ವಾಣಿಯನ್ನು ಸಾರ್ಥಕಗೊಳಿಸಿದ್ದಾರೆ.

ಜನನದಿಂದ ಮರಣದವರೆಗಿನ ಎಲ್ಲಾ ಶುಭ ಅಶುಭ ಕಾರ್ಯಗಳನ್ನು ವಿವಿಧ ಧಾರ್ಮಿಕ ವಿಧಿ ವಿಧಾನಗಳನ್ನು ಅನುಸರಿಸಿ ನಡೆಸಲಾಗುತ್ತದೆ. ಕೆಲವು ಶುಭ ಕಾರ್ಯಗಳಿಗೆ ಮೊದಲು ಗ್ರಾಮದ ಮಠಕ್ಕೆ ಹೋಗಿ ಪೂಜೆ ಸಲ್ಲಿಸುವುದು ವಾಡಿಕೆ. ಕೆಲವು ಆಚರಣೆಗಳಿಗೆ ಸಮುದಾಯದ ಹಿರಿಯರೆ ನಡೆಸಿಕೊಡುವುದು ತಿಳಿದುಬಂದಿದೆ. ನಾಮಕರಣ, ತೊಟ್ಟಿಲು ಕಾರ್ಯ, ಮದುವೆ, ಶವಸಂಸ್ಕಾರ ಮುಂತಾದ ಕಾರ್ಯಗಳು ಇತರ ಸಮುದಾಯಗಳಂತೆ ಆಚರಿಸಲ್ಪಡುತ್ತವೆ.

**ಕುರುಬ ಸಮುದಾಯ**

ಈ ಗ್ರಾಮದಲ್ಲಿ ಕುರುಬ ಸಮುದಾಯದವರು ಹೆಚ್ಚಿನ ಸಂಖ್ಯೆಯಲ್ಲಿ ಇಲ್ಲದಿದ್ದರೂ, ಇದ್ದವರಲ್ಲಿ ಹತ್ತಿ ಕಂಕಣದವರು ಮತ್ತು ಉಣ್ಣೆ ಕಂಕಣದವರು ಎಂದು ಎರಡು ಶಾಖೆಗಳು ಬರುತ್ತವೆ. ಕುರುಬರಲ್ಲಿ ಬೇರೆ ಬೇರೆ ಬೆಡಗುಗಳುಂಟು. ಮದುವೆಯಂತಹ ಸಂದರ್ಭದಲ್ಲಿ ಕಂಕಣ ಮತ್ತು ಬೆಡಗುಗಳು ಮುಖ್ಯವಾಗಿ ಪರಿಗಣಿಸಲ್ಪಡುತ್ತವೆ. ಮೊದಲು ಕೇಳುವುದು ಕಂಕಣ, ಕಂಕಣ ಬೇರೆಯಾಗಿದ್ದರೆ ಪರಸ್ಪರ ಬೀಗುತನ ಬೆಳೆಯುವುದು ಸಾಧ್ಯವಾಗುವುದಿಲ್ಲ. ಹತ್ತಿ ಕಂಕಣದವರು ಅವರಲ್ಲಿಯೇ ಸಂಬಂಧ ಬೆಳಸಬೇಕು. ಉಣ್ಣೆ ಕಂಕಣದವರು ಉಣ್ಣೆ ಕಂಕಣದಲ್ಲಿಯೇ ಸಂಬಂಧ ಬೆಳಸಬೇಕು ಎಂಬ ನಿಯಮವಿದೆ. ಇವರಿಬ್ಬರ ಅಂತರ ಮುಖ್ಯವಾಗಿ ಒಡೆದು ತೋರುವುದು ಗಂಡು ಮಕ್ಕಳಿಗೆ ಕೈಗೆ ನೂಲಿನ ಕಂಕಣ ಕಟ್ಟುತ್ತಾರೆ. ಎರಡನೆಯದಾಗಿ ಬೆಡಗು ಮುಖ್ಯವೆನಿಸುತ್ತದೆ. ಬೇರೆ ಬೇರೆ ಹೆಸರಿನ ಬೆಡಗುಗಳು ಎರಡು ಕಂಕಣಗಳಲ್ಲಿಯೂ ಬೆಡಗು ಬೇರೆಯಾದರೆ ಮಾತ್ರ ಬೀಗತನ ಬೆಳೆಸುವುದು ಒಂದೆಯಾದರೆ ಸೋದರ ಸೋದರಿಯರಾಗುತ್ತಾರೆ ಎಂಬುದು ಸಾಮಾನ್ಯವಾಗಿ ಎಲ್ಲಾ ಸಮುದಾಯಗಳಲ್ಲಿರುವಂತೆ ಈ ಸಮುದಾಯದಲ್ಲಿಯೂ ಇದೆ.

ಈ ಸಮುದಾಯದ ಕುಲದೇವರು ಬೀರಪ್ಪನಾದರೂ ಗ್ರಾಮದ ಕುಲದೇವರ ಸ್ಥಾನದಲ್ಲಿರುವ ಎಲ್ರಿತಾತನನ್ನು ಆರಾಧಿಸುವುದು ಕಂಡುಬರುತ್ತದೆ. ಬೇರೆ ಎಲ್ಲಾ ಕುರುಬ ಸಮುದಾಯದವರ ಆಚರಣೆಗಳಂತೆ

ಇಲ್ಲಿಯು ಸಹ ನಡೆಯುತ್ತವೆ. ಸಮುದಾಯದ ಹಿರಿಯರು ವಧುವನ್ನು ನೋಡುವುದು, ಮದುವೆಯ ಬೀಗರನ್ನು ಎದುರುಗೊಳ್ಳುವುದು, ಐರಣಿ ತರುವುದು, ಬಾಸಿಂಗ ಧರಿಸುವುದು ಇವೆಲ್ಲ ಮದುವೆ ಸಂದರ್ಭದ ಆಚರಣೆಗಳು ಹಿಂದಿನ ಕಾಲದಲ್ಲಿ ಸಮುದಾಯದಲ್ಲಿದ್ದ ತೆರವು ತೆಗೆದುಕೊಳ್ಳುವ ಪದ್ಧತಿ ಈಗಿಲ್ಲ. ವರದಕ್ಷಿಣೆಯ ಗಾಢತೆ ಇನ್ನು ಅಷ್ಟಾಗಿಲ್ಲ. ಅದರಲ್ಲೂ ವಿದ್ಯಾವಂತ ಯುವಕರು ಲಕ್ಷದ ಮಾತನಾಡಿ ಪಡೆಯುವುದುಂಟು. ಕೂಸು ಹುಟ್ಟಿದಾಗ ಕೂಸಿನ ಹನ್ನೊಂದು ಅಥವಾ ಹದಿಮೂರನೆಯ ದಿನಕ್ಕೆ ಹೆಸರಿಡಲಾಗುತ್ತದೆ. ಶವಸಂಸ್ಕಾರ ಹಿಂದೂ ಧರ್ಮದ ಪದ್ಧತಿಯಂತೆ ಹೂಳುತ್ತಾರೆ. ಕುರಿ ಕಾಯುವುದು ಈ ಸಮುದಾಯದ ಮುಖ್ಯ ಕಸುಬಾದರೆ ಒಂದು ಎರಡು ಮನೆ ಬಿಟ್ಟರೆ ಉಳಿದವರು ಕೃಷಿಯ ಮೇಲೆ ಅವಲಂಬಿತರಾಗಿದ್ದಾರೆ. ಇನ್ನು ಕೆಲವರು ವ್ಯಾಪಾರ ಹಾಗೂ ಹತ್ತಿರದ ಬಳ್ಳಾರಿ ನಗರಕ್ಕೆ ಕೆಲಸಕ್ಕೆಂದು ಹೋಗುವುದು ಕಂಡುಬರುತ್ತದೆ. ಈ ಸಮುದಾಯದಲ್ಲೂ ಶಿಕ್ಷಣದ ವ್ಯವಸ್ಥೆ ಸ್ವಲ್ಪ ಮಟ್ಟಿಗೆ ಸುಧಾರಿಸಿದ್ದು ಮಠದ ಹಾಗೂ ಸರಕಾರದ ಶಾಲೆ ಹಾಗೂ ವಸತಿ ನಿಲಯಗಳಲ್ಲಿಯು ಸಹ ವಿದ್ಯಾರ್ಥಿಗಳಿಗೆ ಅವಕಾಶ ಮಾಡಿಕೊಟ್ಟಿರುವುದು ತಿಳಿದುಬಂದಿದೆ.

**ಬಡಿಗ, ಕುಂಬಾರ ಸಮುದಾಯಗಳು**

"ಕಾಸಿ ಕಂಬಾರನಾದ ಬೀಸಿ ಮಡಿವಾಳನಾದ, ವೇದವನೋದಿ ಹಾರುವನಾದ" ಎನ್ನುವಂತೆ ಇವರುಗಳ ಕಸುಬುಗಳ ಮೇಲೆಯೇ ಇವರ ಜಾತಿಗಳು ಸೃಷ್ಟಿಯಾಗಿವೆ. ಈ ಗ್ರಾಮದಲ್ಲಿ ಹಿಂದಿನಂತೆ ಅವರ ಕಸುಬಿನ ಕೆಲಸ ನಿಂತು ಹೋಗಿದೆ. ಕೆಲವೇ ಕೆಲವು ಜನರು ಜೀವನೋಪಾಯಕ್ಕಾಗಿ ವೃತ್ತಿಯಲ್ಲಿ ತೊಡಗಿದ್ದಾರೆ. ಇಂದು ಹಣಕ್ಕೆ ಕೆಲಸವನ್ನು ಮಾಡುತ್ತಾರೆ. ಹಿಂದೆ ಬಡಿಗ ಅಥವಾ ಕುಂಬಾರನಿಗೆ ವರ್ಷಕ್ಕೊಮ್ಮೆ ನಿಗದಿಪಡಿಸಿದ ಕಾಳನ್ನು ಕೊಡಲಾಗುತ್ತಿತ್ತು. ಕುಂಬಾರನಿಗೆ ೨ ಎತ್ತಿನ ಒಕ್ಕಲಿಗ ೨೨ ಸೇರು ಜೋಳ, ೨ ಸೇರು ಕಡ್ಲೆ, ೫ ಸೇರು ತೊಗರಿ ಕೊಡಬೇಕು. ಬಡಿಗನಿಗೆ ೩೫ ಸೇರು ಜೋಳ, ತೊಗರಿಕಡ್ಲೆ ಕೊಡಬೇಕು. ಇಷ್ಟಲ್ಲದೆ ಹೊಲದಲ್ಲಿ ಮೇವನ್ನು ಕೊಡಲಾಗುತ್ತಿತ್ತು.

ಈ ಗ್ರಾಮದಲ್ಲಿ ಕುಂಬಾರ ಮತ್ತು ಬಡಿಗ ಸಮುದಾಯಗಳು ತೀರ ಕಡಿಮೆ ಪ್ರಮಾಣದಲ್ಲಿವೆ. ಬೇರೆ ಇಲ್ಲಿ ಕೆಲವರು ಸ್ವಗೋತ್ರ ಇದ್ದಾರೆ. ಬೇರೆ ಬೇರೆ ಗೋತ್ರದವರು ಇದ್ದಾರೆ. ಸ್ವಗೋತ್ರದವರು ಅಣ್ಣ ತಮ್ಮಂದಿರಾದರೆ, ಅನ್ಯಗೋತ್ರದವರು ಸಂಬಂಧ ಬೆಳೆಸುವುದು ಸಾಮಾನ್ಯವಾಗಿದೆ. ಕೂಸು ಹುಟ್ಟಿದಾಗ ಐದನೇ ದಿನಕ್ಕೆ ಹುಟ್ಟಿದ ಶಾಸ್ತ್ರ ಮಾಡಿ ಮುಂದೆ ಮುಹೂರ್ತ ನೋಡಿ ಒಳ್ಳೆಯ ದಿನದಂದು ತಿಂಗಳೊಳಗಾಗಿ ಹೆಸರಿಡುವ ಪದ್ಧತಿಯಿದೆ.

**ಅಗಸ ಸಮುದಾಯ**

ಇಲ್ಲಿ ಅಗಸ ಸಮುದಾಯದವರು ತೀರಾ ಕಡಿಮೆಯಿದ್ದಾರೆ. ಇವರ ಮೂಲ ಕಸುಬು ಬಟ್ಟೆ ತೊಳೆಯುವುದು. ಆದರೆ ಈ ಗ್ರಾಮಕ್ಕೆ ನೀರಿನ ಸೌಲಭ್ಯವಿಲ್ಲ. ಕೆಲವರು ಗ್ರಾಮದ ಲಿಂಗಾಯತ ಮುಂತಾದ ಸಮುದಾಯದವರ ಬಟ್ಟೆಗಳನ್ನು ಬಾವಿಗಳ ಹತ್ತಿರ ಇಲ್ಲವೆ ಮನೆಯಲ್ಲಿಯೇ ಒಗೆದು ಕೊಡುತ್ತಾರೆ.

ಇವರ ಕುಲದೇವರು ಮಡಿವಾಳ ಮಾಚಿದೇವನಾದರೂ ಎಲ್ಲರು ಆಂಜನೇಯ, ಎರ್ರಿತಾತ ಮುಂತಾದ ದೈವಗಳನ್ನು ಪೂಜಿಸಿದ ನಂತರವೇ ಎಲ್ಲಾ ಆಚರಣೆಗಳು ನಡೆಯುತ್ತವೆ. ಆದರೆ ಇವರಲ್ಲಿ ಬೆಡಗುಗಳು ಇಲ್ಲ. ತಮ್ಮ ಕುಲದವರೆ ತಮ್ಮ ಮದುವೆ ಸಂಪ್ರದಾಯಗಳನ್ನು ಆಚರಿಸುತ್ತಾರೆ. ಎಲ್ಲಾ ಸಮುದಾಯಗಳಲ್ಲಿ ಇರುವಂತೆ ಶವಸಂಸ್ಕಾರ ಪದ್ಧತಿ ಇವರ್ದ್ದೊಂದೇ ರೀತಿ ಇದೆ.

**ಸವಿತಾ (ಹಜಾಮರ) ಸಮುದಾಯ**

ಗ್ರಾಮದಲ್ಲಿ ಈ ಸಮುದಾಯಕ್ಕೆ ಒಂದು ಮಹತ್ವವಿದೆ. ಏಕೆಂದರೆ ಎರ್ರಿತಾತನು ಗ್ರಾಮದ ಕೆಲವು ದಿನಗಳು ಮಲ್ಲಪ್ಪನ ಮಟ್ಟಿಯಲ್ಲಿ ವಾಸವಾಗಿ ನಂತರ ಮಠಕ್ಕೆ ಬರುವ ಮುಂಚಿನ ದಿನಗಳು ಹಜಾಮರ ಭೀಮಪ್ಪನ ಹೊಲದಲ್ಲಿ ಇದ್ದಾನೆಂದು ತಿಳಿದುಬರುತ್ತದೆ. ಅದಕ್ಕಾಗಿಯೇ ಹಜಾಮರು ತಮ್ಮ ಹೊಲವನ್ನು ಮಠದ ಜೀರ್ಣೋದ್ಧಾರಕ್ಕಾಗಿ ಕೊಟ್ಟಿದ್ದಾರೆ ಎಂಬುದು ಕ್ಷೇತ್ರಕಾರ್ಯದ ಮಾಹಿತಿಯಿಂದ ತಿಳಿದುಬಂದಿದೆ.

ಸಮುದಾಯದಲ್ಲಿ ಕೂಸು ಹುಟ್ಟಿದಾಗ ಲಿಂಗ ಕಟ್ಟಿಸುತ್ತಾರೆ. ಈ ಸಂದರ್ಭದಲ್ಲಿ ಪ್ರತಿಯೊಂದು ಕಾರ್ಯವು, ಧಾರ್ಮಿಕ ವಿಧಿ-ವಿಧಾನಗಳು ಸ್ವಾಮಿಗಳ ನೇತೃತ್ವದಲ್ಲಿ ನಡೆಯುವುದು. ನಾಮಕರಣ, ಮದುವೆಯಲ್ಲಿ ಐರಾಣಿ ತರುವುದು ಮುಂತಾದ ಆಚರಣೆಗಳು ಬಳಕೆಯಲ್ಲಿ ಉಂಟು. ಹಿಂದೆಯಿದ್ದ ಮದುವೆಯ ಕೆಲವು ಆಚರಣೆಗಳು ಈಗ ಕ್ರಮೇಣ ಕಡಿಮೆಯಾಗಿವೆ.

ಮೇಲಿನ ಸಮುದಾಯಗಳಲ್ಲದೆ ವಿಶ್ವಕರ್ಮ ಅಥವಾ ಪಾಂಚಾಳ ಸಮುದಾಯ, ಬಡಿಗೇರರು, ಬಾರೀಕರ ಮುಂತಾದ ಸಮುದಾಯಗಳು ಇದ್ದರೂ ಒಂದು ಅಥವಾ ಎರಡು ಕುಟುಂಬಗಳು ಮಾತ್ರ ಇರುವುದು ಕಂಡುಬರುತ್ತದೆ. ಈ ರೀತಿಯಾಗಿ ಪ್ರಾಚೀನ ಕಾಲದಿಂದಲೂ ಕೇವಲ ಗುಂಪುಗಳಾಗಿದ್ದು, ನಂತರ ಸಮುದಾಯಗಳಾಗಿ ಇಂದು ಬಹು ಸಂಸ್ಕೃತಿಗಳ ನಾಡಾದ ಭಾರತದ ನೆಲದಲ್ಲಿ ಅನೇಕ ಸಂಸ್ಕೃತಿಯನ್ನು ಸಾರುವ ಬಿತ್ತರಿಸುವ ಸಮುದಾಯಗಳು ಅನೇಕ ರೀತಿಯ ಮೂಲಭೂತ ಸೌಕರ್ಯಗಳಿಲ್ಲದೆ ಪರಿತಪಿಸುತ್ತಿರುವುದು ಕಂಡುಬರುತ್ತದೆ.

**೨.೨. ಚೇಳಗುರಿಕೆ ಎರ್ರಿತಾತ : ಪೂರ್ವ ಚರಿತ್ರೆ.**

ಭಾರತವು ಧರ್ಮದ ದೃಷ್ಟಿಯಲ್ಲಿ ವಿವಿಧ ಧರ್ಮ ಮತ ಪಂಥಗಳ ನೆಲೆಬೀಡಾಗಿದೆ. ಈ ಎಲ್ಲಾ ಧರ್ಮ ಪಂಥಗಳು ನಾಡಿನಲ್ಲಿ ಸಾಮರಸ್ಯದಿಂದ ಬಾಳಿ ಬೆಳಗಿವೆ. ಮಧ್ಯಕಾಲೀನ ಸಂದರ್ಭದಲ್ಲಿ ಹುಟ್ಟಿದ ಅನುಭಾವಿ ಮಾರ್ಗವು ಮತ್ತು ಚಳುವಳಿಯಲ್ಲಿದ್ದ ಆತ್ಮವಾದಿಗಳ ಮಾರ್ಗವು ನಮ್ಮಲ್ಲಿದ್ದ ಧಾರ್ಮಿಕ ನಂಬಿಕೆ ಮತ್ತು ಸಾಮಾಜಿಕ ಕಟ್ಟುಪಾಡುಗಳನ್ನು ಕಿತ್ತೊಗೆಯಲು ತುಂಬ ಸಹಕಾರಿಯಾದವು. ಈ ಅನುಭಾವಿಗಳಾದ ಸಿದ್ಧರು, ಸಂತರು, ಯೋಗಿಗಳು ತಮ್ಮ ಸಂದೇಶಗಳನ್ನು ಈ ನಾಡಿಗೆ ಬಿಟ್ಟು ಹೋಗಿದ್ದಾರೆ. ದೇಶದ ವಿವಿಧ ಭಾಗಗಳಲ್ಲಿ ನಡೆದ ಧಾರ್ಮಿಕ ಆಂದೋಲನವು ಮನುಷ್ಯರನ್ನು ಮನುಷ್ಯರಂತೆ ಕಾಣಲು ಮತ್ತು ಪರಸ್ಪರ ಅನ್ಯೋನ್ಯತೆಯ ಹಂದರದೊಳಗೆ ಕೂಡಿಸುವ, ಒಂದಾಗಿದ್ದ ಬದುಕನ್ನು ಭದ್ರಗೊಳಿಸುವ ಕಾರ್ಯಕ್ಕೆ ನಾಂದಿಯಾಯಿತು ಎನ್ನಬಹುದಾದಷ್ಟು ಆರೋಗ್ಯಕರವಾದ ಭಕ್ತಿಯ ಗಾಳಿಯು ಇಳೆಯಲ್ಲೆಲ್ಲಾ ಪಸರಿಸಿತು.

ಜ್ಞಾನ, ವೈರ್ರಾಗ್ಯ ಮತ್ತು ಭಕ್ತಿ ಇವುಗಳನ್ನೊಳಗೊಂಡ ಅನುಭಾವ ಮಾರ್ಗ ಜನತೆಯ ಮೇಲಾಗಿರುವುದನ್ನು ಕಾಣುತ್ತೇವೆ. ಉತ್ತರ ಕರ್ನಾಟಕದ ಕಡೇಕಲ್ಲು ಮತ್ತು ಸಾವಳಗಿ ಶಿವಲಿಂಗನ ಪರಂಪರೆಯನ್ನು, ಮಧ್ಯಕರ್ನಾಟಕದಲ್ಲಿ ಪಂಚಗಣಾಧೀಶರ ಪರಂಪರೆಯನ್ನು, ದಕ್ಷಿಣ ಕರ್ನಾಟಕದಲ್ಲಿ ಮಂಟೇಸ್ವಾಮಿ, ಮಲೆಮಹದೇಶ್ವರ ಪರಂಪರೆಯನ್ನು ಕಾಣಬಹುದು. ಹದಿನೈದು-ಹದಿನಾರನೆಯ ಶತಮಾನದ ವೇಳೆಗೆ ನೂರೊಂದು ವಿರಕ್ತರ ಮತ್ತು ಅನುಭಾವಿಗಳ ಜೀವನ ಸಾಧನೆ, ಮೌಲ್ಯತತ್ವಗಳು ಭಕ್ತರುಗಳ ಸಾಂಸ್ಕೃತಿಕ ಜೀವನದ ಮೇಲೆ ಪ್ರಭಾವ ಬೀರಿ ಅವರ ದೈನಂದಿನ ಜೀವನದಲ್ಲಿ ಹಾಸು ಹೊಕ್ಕಾಗಿವೆ. ಈ ಅನುಭಾವಿ ಪರಂಪರೆಯುಳ್ಳ ಅವಧೂತರು ಹಂಪಿ ಪರಿಸರದಲ್ಲಿ ಜಾತಿ ಮತ ಪಂಥಗಳನ್ನು ಮೀರಿ ಅವತರಿಸಿದ್ದಾರೆ. ವೈಜ್ಞಾನಿಕ ಯುಗಕ್ಕೆ ಆಶ್ಚರ್ಯ ಮತ್ತು ಕುತೂಹಲ ಮೂಡಿಸಿರುವಂತೆ ಅವರ ಅವತಾರವಾಗಿದೆ. ಇವರುಗಳೆಲ್ಲಾ ಭಕ್ತ ಜನತೆಯ ಆರಾಧ್ಯ ದೈವವಾಗಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿರುವುದು ಸ್ಪಷ್ಟವಾಗಿದೆ.

"ಸೂಫಿ ಸಂತರ ಚರಿತ್ರೆ"ಯನ್ನು ಕಟ್ಟುವುದೆಂದರೆ, ಹುಟ್ಟಿಲ್ಲದ ದೋಣಿಯಲ್ಲಿ ಕುಳಿತು ಹರಿವ ನದಿಯಲ್ಲಿ ಪಯಣ ಹೊರಟಂತೆ, ಸೆಳವು ಬಂದತ್ತ ಹೋಗುವ ಆಕರ್ಷಣೆಯೂ ಇದೆ. ಬೇಕಾದ ಕಡೆ ಹೋಗಲಾಗದ ಸಮಸ್ಯೆಯೂ ಇದೆ. ಗ್ರಂಥಶಾಸನಗಳಂತಹ ಸ್ಥಾವರದಾಖಲೆಗಳನ್ನು ನೆಚ್ಚಿ ಚರಿತ್ರೆಯನ್ನು ಕಟ್ಟುವ ಪ್ರಸಿದ್ಧ ವಿಧಾನವೊಂದು ಇದೆಯಷ್ಟೆ. ಆದರೆ ಈ ವಿಧಾನವನ್ನು ಕಂಗೆಡಿಸುವ ಲೋಕ ಸೂಫಿಗಳದ್ದು. ವೇಷ ಮರೆಸಿಕೊಂಡು ಹಲವು ರೂಪಗಳಲ್ಲಿ ಸುಳಿದಾಡುವ 'ಚರಿತ್ರೆ' ಇಲ್ಲಿ ದೈವವಿದ್ದಂತೆ, ಇದೆ ಎಂದರೆ ಇದೆ. ಇಲ್ಲವೆಂದರೆ ಇಲ್ಲ. ಚರಿತ್ರೆಯು ಇಲ್ಲಿ ಪುರಾಣವಾಗಿ ನಂಬಿಕೆಯಾಗಿ ಆಚರಣೆಯಾಗಿ ಹೋಗಿರುತ್ತದೆ. ಮತ್ತದು ನಿರಂತರವಾಗಿ ಬದಲಾಗುತ್ತಲೇ ಇರುತ್ತದೆ."[೧] (ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು ಪು.೦೨) ಇಲ್ಲಿ ಸೂಫಿಸಂತರಷ್ಟೇ ಮುಖ್ಯ ಅನುಭಾವಿ ಪುರುಷರ ಎಲ್ಲಾ ಸ್ಥಿತಿಗತಿಗಳು ಹೀಗೆಯೇ ಇವರು ಇಂತಹ ಶತಮಾನ ಕಾಲದವರು ಎಂದು ಹೇಳಬಹುದು. ಆದರೆ ಅವರ ವಿಚಾರಧಾರೆಗಳ ಕಾಲಗರ್ಭಗಳನ್ನು ಭೇಧಿಸಿ ಪ್ರಸ್ತುತತೆಯ ಪಯಣದೊಳಗೆ ನಡೆಸುತ್ತವೆ. ಅದಕ್ಕಾಗಿಯೇ ಅವರನ್ನು ಪಾರಮಾರ್ಥಿಕವಾದಿಗಳು, ಅನುಭಾವಿಗಳು, ಅಸಾಧ್ಯ ಪುರುಷರು, ಯೋಗಿಗಳು, ಅವಧೂತರುಗಳೆಂಬ ಬದಲಾವಣೆಯ ಮುಖಗಳಾದರೂ, ಇವರುಗಳು ತೋರುವ ಗುರಿಯೊಂದೇ. ಖಚಿತತೆಗೆ ಸ್ವಲ್ಪ ಅವಧಾನ ಕಡಿಮೆಯಾದರು, ನಿತ್ಯತ್ವಕ್ಕೆ ನೆಲೆಯಾಗಿ ನಿಲ್ಲುತ್ತವೆ.

ಹಂಪಿ ಪರಿಸರದಲ್ಲಿ ನೆಲೆಸಿದ ವಿರಕ್ತರಲ್ಲಿ ಕೆಲವರು "ಜಗಕ್ಕೆ ತಾ ಮರುಳು, ತನಗೆ ಜಗ ಮರುಳು" ಎಂಬಂತೆ ಲೀಲಾಮೂರ್ತಿಗಳಾಗಿ ಲೋಕದ ಕಣ್ಣಿಗೆ ಹುಚ್ಚರಂತೆ ತೋರಿದರೂ, ಶಿವಯೋಗದ ನಿಬ್ಬೆರಗಿನಲ್ಲಿ ಅಂಗಲೀಲೆಯನ್ನು ಮರೆದ ಮಹಾನುಭಾವಿಗಳಾಗಿದ್ದಾರೆ". (ಶಿವಾನಂದ ವಿರಕ್ತಮಠ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ ಪು.೧೦೫) ಇಂಥಹ ಅನುಭಾವಿಗಳ ಪರಂಪರೆಯಲ್ಲಿ ಅವಧೂತ ಪರಂಪರೆಯವರಾಗಿದ್ದಾರೆ. "ಕನ್ನಡ, ತೆಲುಗು, ತಮಿಳು, ಇಂಗ್ಲೀಷ್ ಭಾಷೆಗಳಲ್ಲಿ ಚೇಳಗುರಿಕೆ ಎರ್ರಿತಾತನ

ಚರಿತ್ರೆ ರಚನೆಗೊಂಡಿದೆ. ಪ್ರಕಟಿತ ಕೃತಿಗಳೆಲ್ಲಾದರಲ್ಲೂ ತಾತನವರ ಜೀವನದ ಬಗೆಗೆ ಖಚಿತವಾಗಿ ಹೇಳಿಲ್ಲ. ಎಲ್ಲವೂ ಐತಿಹ್ಯವೇನೋ ಎಂಬಂತೆ ಸಂಗ್ರಹಿತವಾಗಿದೆ. ಆದರೆ ಹೆಚ್ಚಿನ ವಿವಾದಾತ್ಮಕ ಸಂಗತಿಗಳಿಲ್ಲದಿರುವುದು ಒಂದು ವಿಶೇಷ" (ಜೋಳದರಾಶಿ ದೊಡ್ಡನಗೌಡರು, ಚೇಳಗುರಿಕೆ ಎರ್ರಿತಾತನ ಶಿವಮಯ ಜೀವನ ಚರಿತ್ರೆ ಪು.೧೫) ಆವಧೂತರಿಗೆ ಜನನವಿಲ್ಲ, ಮರಣವಿಲ್ಲ, ಕಾಣದರಾಗ ಬಾಧೆ-ಕರ್ಮದ ಕೋಟಲೆಯಿಲ್ಲ. ಬಂದಿತೋ ಬಾರದೋ ಎಂಬ ತಥ್ಯ-ಮಿಥ್ಯೆಗಳ ದ್ವೇಷಗಳಿಲ್ಲ. ಸ್ತುತಿನಿಂದೆಗಳಿಗೆ ಹಿಗ್ಗಿ ಕುಗ್ಗುವವರಲ್ಲ. ಇಂತಹ ಮಹಾಮಹಿಮ ಜೀವನ ಸಾರ್ಥಕತೆಯ ಸಾಧನಗಿರಿಯ ಮೇಲೆ ನಿಂತು ನಮಿಸಲು ಇಂದು ಹಲವಾರು ಹಳ್ಳಿ ಗ್ರಾಮಗಳಿಂದ, ನಗರ ಪ್ರದೇಶಗಳಿಂದ, ಬೇರೆ ಬೇರೆ ರಾಜ್ಯಗಳಿಂದ ಬಂದು ಚೇಳಗುರಿಕೆ ಎರ್ರಿತಾತನ ದರುಶನ ಪಡೆದು ಪುನೀತರಾದವರು ಪುನೀತರಾಗುತ್ತಿರುವವರು ಅದೆಷ್ಟೋ ಜನ.

"ಪರವಶ ಸ್ಥಿತಿಯ ಎರ್ರಿತಾತನವರ ಗತಿ ಮತಿಗಳು ವಿಚಿತ್ರವೂ ಊಹಾತೀತವೂ, ಲೌಕಿಕಾನುಭವಕ್ಕೆ ನಿಲುಕಲಾದವುಗಳೂ ಆಗಿದ್ದವು. ಆದ್ದರಿಂದ ಎಲ್ಲರಂತೆ ಇವರಿರಲಿಲ್ಲ. ಇವರಿದ್ದ ಈ ಸ್ಥಿತಿಯನ್ನು ಎಲ್ಲರೂ ಅರಿಯುವಂತಿರಲಿಲ್ಲ. ಊಟ, ಉಡುಗೆ, ನಡೆ, ನುಡಿ ಮುಂತಾದ ಅವರ ನಿತ್ಯಜೀವನವು ನೋಡುವವರ ಕಣ್ಣಿಗೆ ಆಶ್ಚರ್ಯವನ್ನುಂಟು ಮಾಡುತ್ತಿದ್ದವು. ಒಟ್ಟಾರೆ ಇವರ ವರ್ತನೆ ಪ್ರಾಪಂಚಿಕ, ಸಾಮಾಜಿಕ ವೃತ್ತಿಗೆ ವ್ಯತಿರಿಕ್ತವಾಗಿದ್ದವು" (ಅದೇ ಪು.೧೬) ಭಕ್ತಿ-ಜ್ಞಾನ-ವೈರಾಗ್ಯಗಳು ಶಿವಾಂಶ ಸಂಭೂತರಿಗಲ್ಲದೆ ಅನ್ಯರಿಗೆ ಅರ್ಥವಾಗದು. ಶಿವಾನುಭವ ನಿರ್ಧಾರ, ನಿಷ್ಪತ್ತಿ ದೈವಾಂಶ ಸಂಭೂತರಿಗೆ ವೇದ್ಯವಾದದ್ದು. ಇವೆಲ್ಲವನ್ನು ಮೈಗೂಡಿಸಿಕೊಂಡ ತಾತನಿಗೆ ನೋಟವೊಂದೇ, ಮೂಸಿಸುವ ನಾಸಿಕವೊಂದೇ, ರುಚಿಸುವ ನಾಲಿಗೆಯೊಂದೇ, ಮುಟ್ಟುವ ಸ್ಪರ್ಶಕ್ಕೂ ಒಂದೇ, ನೆನವ ಮನವೊಂದೇ ಎರಡೆಂಬುದಕ್ಕೆ ಇಂಬಿಲ್ಲ. ಅವರ ನಡೆ ನುಡಿಗಳಲ್ಲಿ ದ್ವಂದ್ವವಿಲ್ಲ, ದೈತ್ಯವಿಲ್ಲ, ಮೌನವೇ ಭೂಷಣವೆಂಬಂತೆ ನೋಡುವುದಕ್ಕೆ ಅನಾಗರೀಕ ಪ್ರಜ್ಞೆಯಂತಿದ್ದರು. ಅವರ ದರ್ಶನ-ಸ್ಪರ್ಶನಗಳಿಂದ ಗೈದ ಪಾಪ ಪಲಾಯನವಾಗುವಂತೆ ಕಷ್ಟ, ಕಾರ್ಪಾಣ್ಯಗಳಿಂದ ಮುಕ್ತಿಯ ಹೊಂದಿದ್ದೇವೆ ಎಂಬ ಭಾವನೆಯಿಂದ ಇಂದು ಸಾಗರೋಪಾದಿಯಲ್ಲಿ ಚೇಳಗುರಿಕೆಗೆ ಭಕ್ತರ ಸಾಲು ಅದೆಷ್ಟೋ ಅದಮ್ಯ ಚೇತನವಾಗಿ, ಅಂತರ್ಯದ ಅವೇದನೆಗಳಿಗೆ ನಾಂದಿಯಾಗಿಸುವಂತಿದೆ. "ಇಂದ್ರಿಯಾಣಿ ಪರಾಣ್ಯಾ ಹುರಿಂದ್ರಯೋಜ್ಯ: ಪರಂ ಮನ | ಮನಸಸ್ತು ಪರಾ ಬುದ್ಧಿಯೋ ಬುದ್ಧೆ : ಪರವಸ್ತು ಸಃ ||" (ಭಗವದ್ಗೀತೆ ೩-೪೨). ಇಂದ್ರಿಯಗಳಿಗಿಂತ ಮನ, ಮನಕ್ಕಿಂತ ಬುದ್ಧಿ, ಬುದ್ಧಿಗಿಂತ ಆತ್ಮ, ಹೆಚ್ಚಿನದೆಂದರಿದು ನಡೆದ ಇರವು, ಅರವು ಇವರದು.

## ೨.೩. ಬಾಲ್ಯ ಮತ್ತು ಸಂಸಾರ ಪರಿತ್ಯಾಗ

ಋಷಿಮುನಿಗಳ ಜೀವನ ವೈಖರಿಗಳು ತುಂಬ ವಿಭಿನ್ನ ರೀತಿಯಲ್ಲಿರುತ್ತವೆ. ಏಕೆಂದರೆ ಈ ಮಹಾತ್ಮರ ಪೂರ್ವಜೀವನ ಚರಿತ್ರೆಯನ್ನು ಖಚಿತವಾಗಿ ಹೇಳುವುದು ಕಷ್ಟ. "ಎರ್ರಿತಾತನವರು ಯಾವಾಗಲಾದರೊಮ್ಮೆ ತಮಗೆ ತಾವೇ ಮಾತನಾಡಿಕೊಳ್ಳುತ್ತಿದ್ದ ಕನ್ನಡ ಭಾಷೆಯ ಶೈಲಿಯಿಂದ ಇವರು ಹಳೆಯ ಮೈಸೂರಿನ

ಕಡೆಯವರೆಂದು ಊಹಿಸಬಹುದಿತ್ತು. 'ರಂಗಾ ರಂಗಾ' ಎಂದು ಹೇಳಿಕೊಳ್ಳುತ್ತಿದ್ದ ನುಡಿಯಿಂದ ಆ ರಂಗನು ಆತನ ಅನುಗ್ರಹದ ಗುರುವೋ, ದೈವವೋ ಆಗಿರಬೇಕೆಂದು ಕೆಲವರ ಅಭಿಪ್ರಾಯವಾಗಿದೆ. ಈ ಅಭಿಪ್ರಾಯವನ್ನು ಪುಷ್ಟೀಕರಿಸಲು ಕೆಲವರು ಈತನನ್ನು ಬ್ರಾಹ್ಮಣನೆಂತಲೂ, ಇನ್ನೂ ಕೆಲವರು ಲಿಂಗವಂತನೆಂತಲೂ ಊಹಿಸಿದರು. ಲಿಂಗವಂತನೆಂಬ ಊಹೆಗೆ ರಂಗನು ಮೂಲವಲ್ಲದಿದ್ದರೂ, ಅವರು ಕುಳಿತಾಗ ಎಡದ ಹಸ್ತವನ್ನು ಲಿಂಗಹಸ್ತದ ಭಂಗಿಯಲ್ಲಿರುವುದನ್ನು ನೋಡಿ ಈ ರೀತಿಯ ಊಹೆಗೆ ಆಸ್ಪದವಿದೆ ಎಂದು ಲಿಂಗವಿಲ್ಲದ ಹಸ್ತವನ್ನು ತಮ್ಮ ವಿಚಾರಕ್ಕೆ ಗುರಿಯಾಗಿಟ್ಟುಕೊಂಡರು. ಯಾರ ವಿಚಾರ, ಯಾವ ಗುರಿ, ಯಾರ ಚರ್ಚೆಗಳಿಗೂ ನಿಲುಕದೆ ನಿಶ್ಚಯಾತ್ಮಕನಾಗಿ ಜಾತಿ, ಮತ, ಪಂಥಗಳ ಚಿಹ್ನೆಗಳಿಲ್ಲದೆ ಎಲ್ಲವೂ ತಾನಾಗಿ ಎಲ್ಲಾ ಧರ್ಮದವರು, ಎಲ್ಲಾ ಜಾತಿಯವರು ಭಕ್ತಿಯಿಂದ ನೀಡಿದ ಪದಾರ್ಥಗಳನ್ನು ಸೇವಿಸುತ್ತಿದ್ದರು". (ಅದೇ ಪು.ಸಂ.೧೫) ಕೆಲವು ದಾಖಲೆಗಳ ಪ್ರಕಾರ ಹಳೇ ಮೈಸೂರು ಸೀಮೆಯ ದೊಡ್ಡಬಳ್ಳಾಪುರ ಸಮೀಪದ ಲಿಂಗದಹಳ್ಳಿ ತಾತನವರ ಜನ್ಮಸ್ಥಳ. ಇದೇ ಬಳ್ಳಾರಿ ಜಿಲ್ಲೆಯ ಹಂಪೆಯಲ್ಲಿ ಬದುಕಿದ್ದ ನೂರೊಂದು ವಿರಕ್ತರ ಒಂದು ಆಧ್ಯಾತ್ಮಿಕ ಪರಂಪರೆ ಮೈಸೂರು ಕಡೆಯಿಂದ ಆಗಮಿಸಿತು. ನೂರೊಂದು ವಿರಕ್ತರ ಪರಂಪರೆಯನ್ನು ಬೆಳಸಿದ ಅನುಭಾವಿಗಳೇ ಈ ಅವಧೂತರಾಗಿರುವರು. ಹೀಗಾಗಿ ಶಿವಸಂಪ್ರದಾಯದ ನೀಲಕಂಠರಾಧ್ಯ ಮತ್ತು ನಿರ್ಮಲಾಂಬಿಕೆಯೆಂಬ ದಂಪತಿಗಳಿಗೆ ತಾತನು ಮಗನಾಗಿ ಜನಿಸಿದನು. ಇವರ ಮೊದಲ ಹೆಸರು ನಂಜುಂಡನೆಂದು ಗೊತ್ತಾಗಿದೆ.

"ಎಳತನದೊಳೇ ತಂದೆ ತಾಯ್ಗಳ
ಬಳಯೊಳುರೆಕುಳಿವಾಸುತನು ಕಡು
ನಲಿವಿನಿಂದ ವರೆಸ ಗುರುಶಿರುವಾ ಲಿಂಗ ಪೂಜೆಯನು
ಅಲುಗದಕ್ಷೆಯಾಳೀಕ್ಷಿಸುವುದಂ
ಕಲಿಯುತಿರೆ ಮುಂದೀಕುವರನಿಗೆ
ಸುಲಭದಿಂ ಶಿವಯೋಗ ಸಿದ್ಧಿಯು ದೊರೆವುದೆಂಬುದನು" (ಅದೇ ಪು.೧೯)

ನಂಜುಂಡಯ್ಯನು ಎಳತನದಲ್ಲಿಯೇ ಜ್ಞಾನವನ್ನು ಅಪಾರವಾಗಿ ಪಡೆದು ತಂದೆ ತಾಯಿಗಳ ಹತ್ತಿರ ಚರ್ಚಿಸಿ ನಿತ್ಯವು ಶಿವಲಿಂಗ ಪೂಜೆಯನ್ನು ಕೈಗೊಳ್ಳುತ್ತಿದ್ದನೆಂದು ತಿಳಿಯಪಡಿಸಲಾಗಿದೆ.

"ಕನ್ನಡದೊಳಂ ಸಂಸ್ಕೃತದೊಳ
ತ್ಯುನ್ನತಾಂಗ್ಲ ಸುಭಾಷೆಯೊಳಮು
ತ್ಪನ್ನ ಚತುರತೆಯಾಂತು ಮೇಣಾಂಧ್ರಾದಿ ಭಾಷೆಗಳೊಳ್
ಇನ್ನುತಿಳಿವಂ ಪಡೆದು ಪಿತೃಗಳ

ಕಣ್ಣ ಪುಣ್ಯದಿ ಮೂರ್ತಿಯೆನಿಸಿದ

ಸನ್ನುತನ ನಂಜುಂಡ ನೊಡಲಪ್ಪಿದುದು ಔತನವು" (ನಾಗೇಶಶಾಸ್ತ್ರಿ. ವೈ. ಲಾಲೀಮೃತ ಪು.೨೪)

ಮೈಸೂರಿನ ಕಂದಾಯ ಇಲಾಖೆಯಲ್ಲಿ ಉನ್ನತ ಉದ್ಯೋಗವು ದೊರಕಿತು. ಕೆಲವರು ತುಮಕೂರಿನಲ್ಲಿ ಎಂಬ ಅಭಿಪ್ರಾಯವನ್ನು ನೀಡುತ್ತಾರೆ. ನಂಜುಂಡ ಆಗಲೇ ತಾರುಣ್ಯವಸ್ಥೆಯನ್ನು ತಲುಪಿದ್ದ ತಂದೆ ತಾಯಿಗಳು ಮಗನಿಗೆ ಮದುವೆ ಮಾಡಬೇಕೆಂಬ ಅಪೇಕ್ಷೆಯಾಯಿತು. 'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎನ್ನುವಂತೆ ಮಗನೇ ಮದುವೆಯಾಗಿ ಸುಖದಿಂದ ಬಾಳು. ಸಂಸಾರ ಯೋಗವೇ ಶಿವವಾಗುವುದು. ಬಸವಾದಿ ಪ್ರಮಥಮರು ಸಂಸಾರದಲ್ಲಿದ್ದು ಭಕ್ತಿಯ ತೋರಿದ್ದಾರೆ. ಇದಕ್ಕಿಂತ ಮಿಗಿಲಾದುದು ಯಾವುದು ಇಲ್ಲ. ಸದ್ಗುಣ ರೂಪದ ಸತಿಯ ಕೈಹಿಡಿದು ಸಂಸಾರ ನಡೆಸು" (ಅದೇ ಪು.೩೬) ಎಂಬ ತಂದೆ ತಾಯಿಗಳ ಅಪ್ಪಣೆಯಂತೆ ಮದುವೆಯಾಗಲು ಬಹಳ ಸಂತೋಷವಾಗಿ

"ಬಳಿಕೆ ಪಿತೃಗಳು ಹೊನ್ನಗಣೆಯಿಂ

ತೊಳಗುವಾ" ಕೋಲಾರ, ದೊಳು ಸತ್

ಕುಲದ 'ಶಿವ ಶಿವ'ಯೆಂಬ ಪಿತೃವರ್ಗದಲ್ಲಿ ಪುಟ್ಟಿರ್ದು

ಚಲುವೆಯಾಗಿ ಸುಭಕ್ತಿ ಗುಣ ಸಂ

ಕಲಿತಳೆನಿಸಿದ ಮಂಜುಕಾಖ್ಯೆಯ

ತಳೆದ ಕನ್ಯೆಯನಾಸುತಗೆ ನಿಶ್ಚಯವಮಾಡಿದರು" (ಬಸವರಾಜ್ ಬಿ.ಸಿ., ಚೇಳಗುರಿಕೆ ಎರ್ರಿಸ್ವಾಮಿಗಳು, ಪು.೧೫)

ಕೋಲಾರದ ಶಿವಭಕ್ತರಾದ ಶಿವಪ್ಪ ಶಿವಮ್ಮ ದಂಪತಿಗಳ ಮಗಳಾದ ಮಂಜುಳೆಯನ್ನು ನಂಜುಂಡನು ವಿವಾಹವಾದನು. ಅವರ ಸರ್ವಕಾರ್ಯಗಳಲ್ಲೂ ಸಮಭಾಗಿಯಾಗಿ, ಸಾಧ್ವಿ ಶಿರೋಮಣಿಯಾಗಿ ಪತಿಯೊಂದಿಗೆ ಸಂಸಾರವನ್ನು ನಡೆಸಿದಳು. ಅವರ ಸುಖ ಸಂಸಾರದ ಪರಿಯನ್ನು ಲೀಲಾಮೃತದಲ್ಲಿ ಹೀಗೆ ವರ್ಣಿಸಲಾಗಿದೆ.

"ಚಿನ್ನರನ್ನಗಳಂತೆ ತಳ್ತುಂ

ಭಿನ್ನತೆಯನೊಳಗೊಂಡು ಮೊದಲೋಳ್

ಮನ್ನಾಣೆಯ ನವದಂಪತಿಗಳವರಿರ್ದು ಬರಬರುತೇ

ಇನ್ನ ಸಕ್ಕರೆ ಪಾಲು ಬೆರೆಯುತೆತ

ಭಿನ್ನತೆಯಾಳಿರ್ದಂತ ಸಮರಸ

ದುನ್ನತಿಯ ಸತಿ ಪಡೆದು ಗೃಹಿಧರ್ಮದೊಳು ಬೆಳಗಿದರು" (ನಾಗೇಶಶಾಸ್ತ್ರಿ ವೈ, ಲೀಲಾಮೃತ ಪು.೩೨)

ಆದರ್ಶಮಯ ಜೀವನವನ್ನು ಸಾಗಿಸುತ್ತಿದ್ದ ದಂಪತಿಗಳಿಗೆ ಪರದ ಇರದೆಯನ್ನು ಮರೆತವರಂತೆ ಲೌಕಿಕತೆಯ ಮಡುವಿನೊಳಗೆ ತೇಲಿಹೋದರು. ಒಂದು ದಿನ 'ಸರಸ ನಂತರ ವಿರಸ' ಎಂಬಂತೆ ನಂಜುಡಯ್ಯನಲ್ಲಿ ಬದಲಾವಣೆಯ ಗಾಳಿ ಬೀಸತೊಡಗಿತು. ಸತಿಗೆ ಪತಿಯಲ್ಲಾದ ಬದಲಾವಣೆಯನ್ನು ಕಂಡು ಸಂತೋಷ-ಸಂತಾಪಗಳೆರಡನ್ನೂ ಅನುಭವಿಸುತ್ತಿದ್ದಳು. ತಂದೆ ತಾಯಿಗಳ, ಹೆಂಡತಿಯ ಅಪ್ಪಣೆಪಡೆದು ಯೋಗ ವಿಧಿ ವಿಧಾನಗಳನ್ನು, ಧಾರ್ಮಿಕ ನಿಲುವುಗಳ ಮರ್ಮವನ್ನು ಅರಿತು ಸಮಾಧಿ ಸಿದ್ಧಿಯ ಪಡೆಯಲು "ಭಕ್ತಿಯೆಂಬುದು ಬೇರು, ವಿರಕ್ತಿಯೆಂಬುದು ಮರ, ಜ್ಞಾನವೆಂಬುದು ಫಲನೋಡಾ ಅಖಂಡೇಶ್ವರಾ" ಎಂಬ ಷಣ್ಮುಖ ಶಿವಯೋಗಿಗಳ ಮಾತಿನಂತೆ ಭಕ್ತಿಯ ಸಿದ್ಧಿಯನ್ನು ಹುಡುಕಾಡಲು ಹೊರಟರು.

"ಸಿರಿಯ ಸಂಸಾರವನು ಸ್ಥಿರವೆಂದು ನಂಬದಿರು

ಹಿರಿದೊಂದು ಸಂತೆ ನೆರೆದೊಂದು ಜಾವಕ್ಕೆ

ಹರಿದು ಹೋದಂತೆ ಸರ್ವಜ್ಞ"

ಎಂಬುಕ್ತಿಯಂತೆ ನಂಜುಂಡಯ್ಯನಿಗೆ ಸಂಸಾರ ಸಂಗ ಸಾಕೆನಿಸಿತು. ಸುರು ಸುರುವಿನಲ್ಲಿಯೇ ಶಿವನ ಸಾನ್ನಿಧ್ಯ ಬೇಕೆನಿಸಿತು. ಭವದ ಹಂಗು ಹರಿದು ನೆನೆಯುವವನಿಗೆ ಮನೆಯೇನು? ಮಠವೇನು? ನೆನೆಯದವನಿಗೆ ಪರ್ವತದ ಕೊನೆಯಲ್ಲಿದ್ದರೇನು? ಎಂದು ಊರೂರು ಅಲೆದಾಡುತ್ತಾ ಜಪತಪಗಳಿಲ್ಲ, ಧ್ಯಾನ ಮನನಗಳಿಲ್ಲ, ಚಿಂತನ ಮಂಥನಗಳಿಲ್ಲ, ವಿಧಿ ವಿಧಾನಗಳ ನೇಮವಿಲ್ಲದೆ, ಮೌನ ಭಕ್ತಿಯನ್ನು ಮನದಲ್ಲಿಟ್ಟುಕೊಂಡು ಗುರುವಿನೆಡೆಗೆ ನಡೆದರು. ಮನೆಯಲ್ಲಿ ಇಳಿವಯಸ್ಸಿನ ತಂದೆ ತಾಯಿಗಳಿಗೆ, ಹೆಂಡತಿ ಮಕ್ಕಳಿಗೆ ಆಧಾರವೇನೆಂಬುದನ್ನು ಅರಿಯದಂತೆ ಅವರ ಅಪ್ಪಣೆ ಪಡೆದು ಯೋಗಸಿದ್ಧಿಯ ಪಡೆಯಲು 'ಎಲ್ಲಾ ಇದ್ದು ಇಲ್ಲದುದರ ಕಡೆಗೆ ನಡೆಯುವುದೇ ಜೀವನ'ವೆನ್ನುವಂತೆ ನೀರಗುಳ್ಳೆಯಂತೆ, ಮೋಹದ ಮಿಂಚಿನಂತೆ, ಕಾಮನಬಿಲ್ಲಿನಂತೆ ಕ್ಷಣಿಕ ಸುಂದರವಾಗಿ ಕಾಣುವ ಲೌಕಿಕ ವ್ಯಾಮೋಹಕ್ಕೆ ಒಳಗಾಗದಂತೆ ಈ ಶರೀರಕ್ಕೆ ಸ್ಥೂಲ, ಸೂಕ್ಷ್ಮ, ಕಾರಣ ಶರೀರ ಸ್ವಭಾವಗಳುಂಟು. ಲೌಕಿಕ ಸುಖದ ಆಸೆ ಸ್ಥೂಲ ಶರೀರಕ್ಕೆ ಅಲೌಕಿಕದ ಆನಂದ ಸೂಕ್ಷ್ಮ ಶರೀರಕ್ಕೆ ಇವುಗಳಿಗೆ ಅತೀತವಾದ ಬ್ರಹ್ಮಾನಂದವು ಲಭಿಸುತ್ತದೆ. ಮಹಾತ್ಮರ ಅವತರಣ ಸಿದ್ಧಿ-ಸಾಧನೆಗಳು ಅದ್ಭುತವಾಗಿರುತ್ತವೆ. ಎಲ್ಲರಿಗೂ ಆತ್ಮವುಂಟು. ಆದರೆ ಮಹಾತ್ಮರೆನಿಸಿಕೊಂಡವರು ಬಹು ವಿರಳ. ಮಹನೀಯ ಮಹಾನುಭಾವ, ಸುಧಾರಕ, ಮಹಾಪುರುಷ ಮೊದಲಾದವರೆಲ್ಲರೂ ಮಹಾತ್ಮರಲ್ಲ. ಮಹಾತ್ಮರು ಕೇವಲ ಬೆರಳೆಣಿಕೆಯಲ್ಲಿರುತ್ತಾರೆ.

ಹರಿಯ ಸಂದೇಶದಿಂದ ಮನದ ಸಂದೇಹವ ಬಿಡಿಸು |

ಗುರು ಕರುಣ ಸಂಪಾದಿಸಿ ಮೈಲಿಗೆಯ ಗುಡಿಸು

ಓಂಕಾರನಾದದಿ ಮನಕೆ ಆನಂದ ಬಡಿಸು |

ಹೊಯ್ದಾದೊ ಮನವ ನಿನ್ನೊಡನೆ ಶ್ರೀ ವಿಭಾವನಲ್ಲಿ

ನಡೆಸನ್ನ ಒಡೆಯ ಹನುಮದೇವ" (ಅದೇ ಪು.೩೬)

ನಂಜುಂಡನು ಭವದ ಬಂಧನವನ್ನು ಮುರಿದು ದೈವಲೀಲೆಯ ಅಲೌಕಿಕತೆಯೆಡೆಗೆ ಮುನ್ನುಗ್ಗಿದರು. "ಅನುಭಾವಕ್ಕೆ ಯಾವುದೇ ಧರ್ಮದ ಹಂಗಿಲ್ಲ. ಅದು ತಾರ್ಕಿಕವಲ್ಲ ಒಮ್ಮೆ ಜ್ಞಾನ, ಒಮ್ಮೆ ಭಕ್ತಿ, ಒಮ್ಮೆ ವಿರಕ್ತಿ, ಒಮ್ಮೆ ಹಠ, ಒಮ್ಮೆ ದೈನ್ಯ, ಒಮ್ಮೆ ಮೌನ, ಒಮ್ಮೆ ಮಾತು, ಒಮ್ಮೆ ಮಹಾಶಾಂತಿ, ಒಮ್ಮೆ ವೀರಕ್ರೋಧಲ್ಲಿ ಮರೆಯುತ್ತ ಯಾವ ಹಿಡಿತಕ್ಕೂ, ಹೊಡೆತಕ್ಕೂ ಸಿಕ್ಕದೆ ಸಾಗುವ, ನಡೆಯುವ ಅನುಭಾವಿಗಳು ದೈವಿಕ ಅರಿವಿನ ಮಹಾಸಾಗರದಲ್ಲಿ ಹುಚ್ಚೆದ್ದು ಕುಣಿಯುವ ಮುಗ್ಧ ಮಕ್ಕಳಾಗಿರುತ್ತಾರೆ" (ಹರೀಶ್ ಕಶ್ಯಾಪ್ ಅರಿವಿನೆಡೆಗೆ ಪು.೨೨೪) ಪರಲೋಕದ ಬಯಲಾಟದಲ್ಲಿ ತನಗೊಂದು ಜಗತ್ತಿನ ಜಂಜಾಟದಿಂದ ಮುಕ್ತಿಹೊಂದಲು ಅವರ ಮನಸ್ಸು ಹಂಬಲಿಸುತ್ತಿತ್ತು. ಹೀಗೆ ನಂಜುಂಡನು ದೈವಿಕ ಬಯಕೆಯನ್ನು ನೀಗಿಸಿಕೊಳ್ಳಲು ಗುರು ನಾಗಪ್ಪಯ್ಯನ ಹತ್ತಿರ ಬಂದನು.

### ೨.೪. ಗುರುವಿನ ಗುಲಾಮ

ಹಾಲು-ಬೆಣ್ಣೆಗಳ ನೇಮವನ್ನೇ ಬಿಟ್ಟು ಅಂಬಲಿಯ ನೇಮ ಹಿಡಿಯದವನೇ ನಿಜವಾದ ಯೋಗಿ ಎಂಬುದು ಶರಣರ ಮತ. ಸೌಧ ಸುಪ್ಪತ್ತಿಗೆಗಳನ್ನುಳಿದು, ಶೋಕಿಯ ಭೋಜನವನ್ನು ತೊರೆದು, ಬೆಲೆಯುಳ್ಳ ಒಡವೆ ವಸ್ತುಗಳನ್ನು ನಿರಾಕರಿಸಿ ಬಂದವನಂತೆ ಜೀವನ ನಡೆಸುವವನೇ ಸಮಾಜವಾದಿಯೆಂಬ ಗಾಂಧೀಜಿಯ ಹೇಳಿಕೆಗೂ ಶರಣರ ಅಭಿಪ್ರಾಯಕ್ಕೂ ನಿಕಟ ಸತ್ಯವಿದೆ. ಇಲ್ಲಿ ತಾತನವರು ಎಲ್ಲಾ ಇದ್ದು ಇಲ್ಲದರ ಕಡೆಗೆ ನಡೆಯುವುದೇ ಸಿದ್ಧಿಯೆಂದು, ಅದು ನಿರಂತರತ್ವವನ್ನು ಪಡೆಯುವುದೆಂಬ ಮೌನವ್ರತವೇ ವಿನಹ ಯಾವುದೇ ರೀತಿಯ ಆಡಂಬರದ ಸಮಾಜ ಸೇವೆಗೆ ಅವರು ಮುನ್ನುಗ್ಗಲಿಲ್ಲವೆಂಬ ಮನವರಿಕೆ ಅವರ ಜೀವನ ವಿಧಾನವನ್ನು ಅವಲೋಕಿಸಿದಾಗ ತಿಳಿಯುತ್ತದೆ. 'ಆಸೆಯೇ ದುಃಖಕ್ಕೆ ಮೂಲ' ಎಂಬ ಬುದ್ಧನ ಅಂತರಂಗದ ನಿಲುವನ್ನು ಒಪ್ಪಿಯೇ ಎಂಬಂತೆ ಎಲ್ಲವನ್ನು, ಎಲ್ಲರನ್ನು ತೊರೆದು ದೂರಸರಿದರು.

"ಪರಮಾತ್ಮನ ಬಗ್ಗೆ ಭಕ್ತಿ ಎಷ್ಟು ಮುಖ್ಯವೋ ಅಷ್ಟೇ ಪೀರ್ ಅಥವಾ ಮರ್ಷಿದ್ (ಗುರು) ಬಗ್ಗೆ ಭಕ್ತಿ ಅಷ್ಟೇ ಮುಖ್ಯವೆಂದು ಸೂಫಿ ತಿಳಿಸುವ ಗುರುವಿನ ಮೇಲೆ ಪರಿಪೂರ್ಣ ಭಕ್ತಿಯಿರುವುದು ಸಾಕ್ಷಾತ್ಕಾರದ ಸಿದ್ಧಿಗೆ ಅತ್ಯಗತ್ಯ. ಶಾಹ್ ಲತೀಫನ ಕೆಳಗಿನ ಮಾತುಗಳು ಈ ಚಿಂತನೆಯನ್ನೇ ಪ್ರತಿಧ್ವನಿಸುತ್ತವೆ. 'ಗುರು ಮತ್ತು ಗೋವಿಂದ "ಗುರುವೇ ಸಾಕ್ಷಾತ್ ಪರಬ್ರಹ್ಮ" (ರಹಮತ್ ತರೀಕೆರೆ, ಧರ್ಮ ವಿಶ್ವಕೋಶ ಪು.೦೨) ಎಂಬುದು ನಮ್ಮ ಭಾರತದ ಸಂಸ್ಕೃತಿಯ ಜೀವಂತ ತಿಳುವಳಿಕೆ. ಭಾರತೀಯ ಧರ್ಮಗಳಲ್ಲಿ ಬೌದ್ಧಧರ್ಮವನ್ನು ಹೊರತುಪಡಿಸಿದರೆ ಉಳಿದೆಲ್ಲಾ ಧರ್ಮ ಪಂಥ ಮಾರ್ಗಗಳಲ್ಲಿ ಗುರುವಿಗೆ ಮಹತ್ವದ ಸ್ಥಾನವಿದೆ. ಗುರುವಿಲ್ಲದ ಸಾಧಕನು ಗುರಿ ಮುಟ್ಟಲಾರ ಹಾಗೂ ಮುಂದುವರಿಯಲಾರ. ಇಲ್ಲಿ 'ಮಹಾಭಾರತದ ಏಕಲವ್ಯ'ನು ನೇರವಾಗಿ ಗುರುವಿನ ಭಾಗ್ಯ ಸಿಗದಿದ್ದರೂ 'ಗುರುವಿನ ಮೂರ್ತಿ'ಯನ್ನು ತನ್ನ ಆರಾಧ್ಯಮೂರ್ತಿಯನ್ನಾಗಿಸಿಕೊಂಡು ಶಬ್ದವೇಧಿ ವಿದ್ಯೆಯನ್ನು ಕಲಿತಿರುವುದು ಗುರುವಿನ ಶ್ರೇಷ್ಟತೆ, ಪ್ರಾಮುಖ್ಯತೆಯನ್ನು ಕಾಣಬಹುದು. ಆದರೆ ಗುರುವೇ ಮುಳುವಾದಾಗ ಅವನ ಹೆಬ್ಬೆರಳನ್ನು ಕಾಣಿಕೆಯಾಗಿ ಸ್ವೀಕರಿಸಿ ಕತ್ತಲೆಯ, ಶೋಷಣೆಯ ಹಾದಿಯೊಳಗೆ ತಳ್ಳಿದ್ದು ಚರ್ಚಿಸುವ ವಿಷಯವಾಗಿಯೇ ಉಳಿದಿದೆ.

"ಗುರುವಿಂಗೆ ತನುವ ಕೊಟ್ಟು

ಲಿಂಗಕ್ಕೆ ಮನವ ಕೊಟ್ಟು

ಜಂಗಮಕ್ಕೆ ಧನವ ಕೊಟ್ಟು

ಇಂತೀ ತ್ರಿವಿಧಕ್ಕೆ ತ್ರಿವಿಧವ ಕೊಟ್ಟು

ನಾನು ಶುದ್ಧವಾದೆನು ಕಾಣಾ

ಕೂಡಲ ಸಂಗಮದೇವಾ'

ಎಂಬ ಬಸವಣ್ಣನವರ ವಚನದಂತೆ ಸಂಸಾರಿಕ ಸುಖಭೋಗ, ದೈಹಿಕ ಆಸೆಆಮಿಷ ಜಗತ್ತಿನ ಜಂಜಾಟದಿಂದ ದೂರುಳಿದಾಗ ಶುದ್ಧತೆ ಬಂದು ಆವರಿಸುತ್ತದೆ ಎಂಬಂತೆ, ತಾತನವರು ಐಹಿಕ ಹಂದರಕ್ಕೆ ಒಳಗಾಗದೆ ಶುದ್ಧತೆಯೆಡೆಗೆ ಪಯಣಿಸಿದರು.

"ಗುರುವ ಪಾದವ ಹೊಂದಿ ತಾನಾ

ಗುರುವ ಸೇವಿಸುತಿರ್ದು, ನಿತ್ಯದಿ

ಗುರು ಪ್ರಸಾದವನುಂಡು ಗುರು ಚರಣೋದಕವ ಕುಡಿದು ||

ಗುರುವ ಧ್ಯಾನಿಸಿ, ಗುರುವ ಪೂಜಿಸಿ,

ಗುರುವ ಸ್ತುತಿಸಿಯೆ ಗುರುವ ಹಾಡಿಯ

ಗುರುವ ನೆನವುತ್ತಿಹುದದೇ ಸತ್ಪಥವು ಕೇಳೆಂದು"|| (ಚಿದಾನಂದಾವದೂತರು)

ಇಲ್ಲಿ ಗುರುವಿಗೆ ಆದರ್ಶ, ಶಿಷ್ಯನಾಗಲು ಗುರು ಚರಣಗಳೇ ತನ್ನ ಪೂಜಾಮೂಲವು ಮತ್ತು ಗುರು ಕಟಾಕ್ಷವೇ ತನ್ನ ಮುಕ್ತಿಗೆ ಕಾರಣವೆಂದು ನಿತ್ಯ ಅರಿತಿರುವವನೇ ಉತ್ತಮ ಶಿಷ್ಯ. ಶಿಷ್ಯನಾದವನು ದೇಹದಲ್ಲಿ ಉಸಿರಿರುವವರೆಗೂ ಮನದಲ್ಲಿ ಗುರುವನ್ನು ಸ್ಮರಿಸುತ್ತಿರಬೇಕು. ಗುರುವಿನಿಂದ ದೂರವಿದ್ದರೂ ಗುರುವನ್ನು ಮರೆತಿರಬಾರದು. ಗುರುವಿಗೆ ಅಂಗಸೇವೆ, ಆಪ್ತಸೇವೆ, ಸ್ಥಾನಸೇವೆ ಹಾಗೂ ಸದ್ಭಾವನೆ ಹೊಂದಿದ್ದು ಸಕಲವು ಗುರುದೇವ ಎಂದು ಅರಿತಿರಬೇಕು ಎಂಬುದು ನಿಜಸ್ಥಿತಿ. ಆದರೂ ಗುರುವು ದಾರಿತಪ್ಪಿದಾಗ ಅದನ್ನು ಅರಿತು ಮನದ ದಾರಿಯನ್ನು ಬದಲಾಯಿಸಬೇಕಾಗುತ್ತದೆ. ಗುರು ಮತ್ತು ಗೋವಿಂದ ಇಬ್ಬರೂ ನನ್ನೆದುರು ನಿಂತಿದ್ದಾರೆ. ಯಾರ ಪಾದಕ್ಕೆ ನಮಿಸಲಿ? ಗೋವಿಂದನ ಹೆಸರನ್ನು/ನಾಮವನ್ನು ತಿಳಿಸಿದ ಗುರುವಿಗೇ ಸಂಪೂರ್ಣ ಸಮರ್ಪಿಸಿಕೊಳ್ಳಲು ನಾನು ಸಿದ್ಧನಿರುವೇ" (ಅದೇ ಪು.೨೬೧) ನಂಜುಂಡಯ್ಯನು ಲಿಂಗದಹಳ್ಳಿಯಲ್ಲಿದ್ದ ನಾಗಪ್ಪನವರೆಂಬ ವೇದಾಂತಿಗಳ ಹತ್ತಿರ ತನ್ನ ಆಧ್ಯಾತ್ಮಿಕ ಹಸಿವನ್ನು ನೀಗಿಸಿಕೊಳ್ಳಲು ಹೋದನು. ಅವರಿಂದ ಬಹಳಷ್ಟು ವಿಷಯಗಳನ್ನು ಕೇಳಿ ತಿಳಿದುಕೊಂಡನು. ಆದರೆ ನಂಜುಂಡಯ್ಯನನ್ನು ತೃಪ್ತಿಗೊಳಿಸಲು ನಾಗಪ್ಪನವರಿಂದ ಸಾಧ್ಯವಾಗಲಿಲ್ಲ. "ನನಗಿಂತಲೂ ದೊಡ್ಡ ಜ್ಞಾನದಾಹಿ ನನ್ನ ಶಿಷ್ಯ"

(ಶಿವಾನಂದ ಎಸ್, ಚೇಳಗುರಿಕೆ ಎಲ್ರಿತಾತ, ಪು.೦೪) ಎಂದು ನಾಗಪ್ಪನವರು ಒಂದು ತೀರ್ಮಾನಕ್ಕೆ ಬಂದು ನಂಜುಂಡಯ್ಯನನ್ನು ಹೆಚ್ಚಿನ ಜ್ಞಾನಾರ್ಜನೆಗಾಗಿ ದೊಡ್ಡ ಬಾಣಾಪುರದಲ್ಲಿದ್ದ ಗಗನಾರ್ಯ ಪಂಡಿತರ ಹತ್ತಿರ ಕಳುಹಿಸಿಕೊಟ್ಟರಂತೆ.

"ಬಿಡುವುಲಭಿಸಿದ ಸಮಯದೋಳ್ ತಾಂ

ಬಿಡದೆ ಗಗನಾರ್ಯರ ಮಠಕ್ಕಡಿ

ಗಡಿಗೆ ಪೋಗುವುದಿನ್ನು ತಪ್ಪಿದುದೆಂದು ಪಿತೃಜನರು

ಕಡು ಮುದವ ನೊಂದರು ಸಂತಸ

ಗಡಲೊಳೀಸಾಡುವ ನಿಜಪ್ರಿಯೆ

ಯೊಡನೆ ಸುಖದಿಂರ್ದನಾ ಜ್ಞಾನಬ್ಧಿ ಚಂದ್ರಮನು" (ನಾಗೇಶ ಶಾಸ್ತ್ರಿಗಳು ವೈ, ಲೀಲಾಮೃತ ಸಂಧಿ.೪, ಪು.೫೨).

ಗಗನಾರ್ಯರು ಧಾರ್ಮಿಕ ವಿದ್ವಾಂಸರಾಗಿದ್ದರಲ್ಲದೇ ಮೈಸೂರು ಅರಸನಾದ ಶ್ರೀ ಕೃಷ್ಣರಾಜ ಒಡೆಯರ್ ಅವರಿಗೆ ಬೇಕಾದವರಾಗಿದ್ದರು. ನಂಜುಂಡಯ್ಯ ಅವರ ಬಳಿಗೆ ಹೋಗಿ ಜ್ಞಾನದ ಹಂಬಲವನ್ನು ಹೇಳಿಕೊಂಡ. ಪರೀಕ್ಷಿಸಿದ ಗಗನಾರ್ಯರು ಮೂರು ನಾಲ್ಕು ದಿವಸ ಹೊರಗಡೆ ನಿಲ್ಲಿಸಿದರು. ಆದರೂ ನಂಜುಂಡಯ್ಯನ ಭಕ್ತಿಗೆ ಮೆಚ್ಚಿ ಶಿಷ್ಯನಾಗಿ ಸ್ವೀಕರಿಸಿದರು. ತತ್ವಶಾಸ್ತ್ರ, ಆಧ್ಯಾತ್ಮ ಅಧ್ಯಯನ ಗೈದ ನಂಜುಂಡಯ್ಯನನ್ನು ಜನ ನಂಜುಂಡಶಾಸ್ತ್ರಿ ಎಂದು ಕರೆಯಲಾರಂಭಿಸಿದರು. ಗುರು-ಲಿಂಗ-ಜಂಗಮವು ಲೋಕೋದ್ಧಾರಕ್ಕಾಗಿ ಮೈವೆತ್ತಿ ನಿಂತಿವೆ. ಗುರುವಿನಿಂದ ಲಿಂಗದೀಕ್ಷೆಯಾಗಬೇಕು ಅದು ಆಧ್ಯಾತ್ಮದ ಹಸಿವನ್ನು ನೀಗಿಸಿಕೊಳ್ಳುವುದು ಎಂಬುದನ್ನು ತಿಳಿಸುತ್ತದೆ. ಆದುದರಿಂದ ಆ ಲಿಂಗದಲ್ಲಿಯೇ ಸ್ವಸ್ವರೂಪ ದರ್ಶನ ಅದು ಅರುಹಿನ ಕುರುಹು ಇಷ್ಟಲಿಂಗದ ಅವಶ್ಯಕತೆಯನ್ನು ಚೆನ್ನಬಸವಣ್ಣನು ಸುಂದರವಾಗಿ ನಿರ್ವಚಿಸಿರುವರು.

"ಆಕಾಶದಲ್ಲಾಡುವ ಪಟಕ್ಕಾದೆಡೆಯೂ ಮೂಲ ಸೂತ್ರವಿರಬೇಕು

ಕಲಿಯಾದಡೆಯೂ ಕಜ್ಜವಿಲ್ಲದೆ ಆಗದು

ಭೂಮಿಯಿಲ್ಲದ ಬಂಡಿ ನಡೆಯುವುದೇ?

ಅಂಗಕ್ಕೆ ಲಿಂಗವಿಲ್ಲದೆ ನಿಸ್ಸಂಗವಾಗಬಾರದು

ಇಲ್ಲಿ ಮುಖ್ಯವಾಗಿ ಅರಿವನ್ನು ಪಡೆಯಲು 'ಗುರು'ವು ಪ್ರಧಾನ ಸ್ಥಾನವನ್ನು ಪಡೆಯುತ್ತಾನೆ. ಅಮೂರ್ತವಾದವುಗಳು ಅವನಿಂದ ಬೆಳಕಿಗೆ ಬರುತ್ತವೆ.

"ನಿನ್ನ ಸ್ವಾಮಿಗೆ ಪೂರ್ಣ ಹೃದಯವನ್ನು ಧಾರೆಯೆರೆದು, ನಿನ್ನ ಆತ್ಮವನ್ನು ಸಂಪೂರ್ಣವಾಗಿ ಸಮರ್ಪಿಸಿ, ನಿನ್ನ ಸರ್ವ ಸಾಮರ್ಥ್ಯವನ್ನು ಉಪಯೋಗಿಸಿ ಪ್ರೀತಿಸು" (ಬೈಬಲ್) ಎಂಬ ಯೇಸುವಿನ

ಕರೆಯಲ್ಲಿ ಭಕ್ತಿಯ ಸಂದೇಶ ಅಡಗಿರುವುದು ಸ್ಪಷ್ಟ. ಇಲ್ಲಿಯ ಸಂದೇಶವು 'ಗುರುವಿನ ಗುಲಾಮನಾಗದ ತನಕ ದೊರೆಯದಣ್ಣಾ ಮುಕುತಿ' ಎಂಬ ಸಂದೇಶವನ್ನು ಒತ್ತಿ ಹೇಳಿದಂತೆ ನಂಜುಂಡಶಾಸ್ತ್ರಿ ಸಂಪೂರ್ಣ ಗುರುವಿನ ಸೇವೆ ಗೈದನು. ದೈವತ್ವದ ನಂಬಿಕೆಯು ಬದುಕಿನ ಬದಲಾವಣೆ ಮತ್ತು ಉದ್ದೇಶಗಳನ್ನೊಳಗೊಂಡಿರುತ್ತದೆ. ಯಾವುದೇ ದೃಢನಿಶ್ಚಯವಿಲ್ಲದ ಜೀವನವು, ಜೀವನದ ಉನ್ನತವಾದ ಉದ್ದೇಶದ ಬದ್ಧತೆಯಿಲ್ಲದೆ ವಿಘಟಿತವಾಗಿ ಸಾಮಾನ್ಯ ರೀತಿಯಲ್ಲಿ ಸಾಗುತ್ತಿರುತ್ತದೆ. ಆದರೆ ಧಾರ್ಮಿಕ ನಿಷ್ಠೆಯಿರುವ ವ್ಯಕ್ತಿಗಳು ಸಂಗತಿಗಳನ್ನು ಭಿನ್ನ ರೀತಿಯಲ್ಲಿ ನೋಡುತ್ತಾರೆ. ಇದು ಮನುಷ್ಯರು ಆಧ್ಯಾತ್ಮಿಕ ಜೀವನಕ್ಕೆ ಕಾಲಿಟ್ಟಿರುವರೆಂಬುದಕ್ಕೆ ಸೂಕ್ತವಾದ ಪುರಾವೆಯಾಗುತ್ತದೆ.

ಗುರುತ್ವ ಹಾಗೂ ಶಿಷ್ಯತ್ವಗಳ ಸಂಬಂಧ ಹಾಗೆ ಬೆಸೆದುಕೊಳ್ಳುವುದಿಲ್ಲ. ಅದು ಒಂದೊಮ್ಮೆ ಸ್ಫೋಟಿಸಿ ತಣ್ಣಗಾಗುವ ಜ್ವಾಲಾಮುಖಿಯಂತೆ ಹಲವು ಪರೀಕ್ಷೆ, ಪ್ರಮಾದಗಳನ್ನು ಎದುರಿಸಿ ದೈವಿಕತೆ ಪಡೆಯಲು ನೆರವಾಗುತ್ತದೆ. ಇಲ್ಲಿ ನಂಜುಂಡಯ್ಯ ಶಾಸ್ತ್ರೀಯೂ ಸಹ ಗುರುವಿನಿಂದ "ಪರೀಕ್ಷೆಗೆ ಒಳಪಟ್ಟು ಮೂರು, ನಾಲ್ಕು ದಿವಸ ಒಳಗಡೆ ಕರೆಯದೇ ಇದ್ದಾಗ ಮನೆಯ ಬಾಗಿಲಿನಲ್ಲಿ ಕಾವಲಿದ್ದು ಅವರ ಅನುಗ್ರಹಕ್ಕೆ ಪಾತ್ರರಾಗಿ ಉಪದೇಶವನ್ನು ಪಾಲಿಸಬೇಕೆಂದು ಪ್ರಾರ್ಥಿಸುತ್ತಾರೆ. ಆಗ ಗುರುಗಳು ಬೆತ್ತಲೆಯಾಗಿ ಮೂರು ಸಲ ಊರು ಸುತ್ತಿ ಬಾ ಎಂದು ನಿರೂಪಿಸಲು ತಾತನು ಅದರಂತೆಯೇ ಮಾಡಿ ತಾನು ನಿರ್ಗಂಥಿ ಮುನಿ ಸತ್ತಮನೆಂಬುದನ್ನು ತೋರಿಸಿದರಂತೆ" (ಚನ್ನಬಸವೇಶ್ವರ ಸಿ.ವ, ಚೇಳಗುರಿಕೆ ಎರ್ರಿಸ್ವಾಮಿಗಳ ಲೀಲಾವಿಲಾಸ ಪು.೧೭) ಈ ರೀತಿಯ ಶೋಧನೆಗೆ ಒಳಪಟ್ಟ ನಂಜುಂಡಯ್ಯನು ಪುಟಕ್ಕೆ ಹಾಕಿ ಶೋಧಿಸಿದ ಚೊಕ್ಕಾ ಬಂಗಾರದಂತೆ ಸ್ವಚ್ಛ ನಿರ್ಮಲತೆಯನ್ನು ಪಡೆದನು.

"ದ್ವೈತದೋಳ್ ಮುಕ್ತಂ ವಿಶಿಷ್ಟಾ
ದ್ವೈತದೋಳ್ ಜೀವೇಶಭೇರವ
ಪೂರ ಮುಕ್ತ ಸ್ಥಿತಿಯೊಳಂ ವಾದಿಸುವುದನು ಚಿತದಾ
ಮಾತೆನಿಸುವುದು ಶಂಕರೋಕ್ತಾ
ದ್ವೈತದೊಳು ಪರಕಿಪೊಡೆ ಮಿಥ್ಯಾ
ಭೂತವೆನಿಸುವವಿನ್ನು ಜೀವ ಜಗತ್ತುಗಳು ಮತ್ತಂ" (ನಾಗೇಶ ಶಾಸ್ತ್ರಿಗಳು, ಲೀಲಾಮೃತ ಸಂಧಿ.೪, ಪು.೫೩).

ಒಮ್ಮೆ ಗುರುಗಳಾದ ಗಗನಾರ್ಯ ಬಳಿ ಇದ್ದಾಗ ಒಂದು ಘಟನೆ ನಡೆಯಿತಂತೆ. ಗಗನಾರ್ಯರು ತಾವೇ ಬರೆದ ಒಂದು ಹಸ್ತ ಪ್ರತಿಯ ಕೆಲಭಾಗ ಗೆದ್ದಲು ಹತ್ತಿ ಶಿಥಿಲವಾಗಿತ್ತಂತೆ. ಇದರಿಂದ ವ್ಯಾಕುಲಗೊಂಡ ವಿಷಯ ಶಿಷ್ಯ ನಂಜುಂಡಶಾಸ್ತ್ರಿಗೆ ತಿಳಿಯುತ್ತಲೇ ಆತ ಶಿಥಿಲವಾದ ಆ ಭಾಗವನ್ನು ಮೊದಲಿನಂತೆ ಬರೆದು ಕೊಟ್ಟನಂತೆ ಇದನ್ನು ಕಂಡು ಸಂತೋಷಚಿತ್ತರಾದ ಗುರುಗಳು ಆತನನ್ನು ನಿರಂಜನ ಎಂದೇ ಕರೆಯುತ್ತಿದ್ದರಂತೆ.

ತಾತನವರನ್ನು 'ನಿರಂಜನಮೂರ್ತಿ' ಎಂದೂ, ಆನಂತರ ಆ ಹೆಸರನ್ನು ಎಲ್ಲೂ ಕರೆದಿರುವುದು ಪ್ರಚಾರಕ್ಕೆ ಬಂದಿರುವುದಿಲ್ಲವೆಂದು ಶಿವಾನಂದ ಎಸ್. ಅವರ 'ಚೇಳಗುರಿಕೆ ಎರ್ರಿತಾತ' ಎಂಬ ಕಿರು ಪುಸ್ತಕದಲ್ಲಿ ತಿಳಿಯಪಡಿಸಿದ್ದಾರೆ. ಹೀಗೆ ನಂಜುಂಡ, ನಂಜುಂಡಯ್ಯ, ನಂಜುಂಡಶಾಸ್ತ್ರಿ, ನಿರಂಜನಮೂರ್ತಿ ಎಂಬ ನಾಮಗಳು ಅವರ ವಿಶಿಷ್ಟ ರೀತಿಯ ಭಕ್ತಿಯೋಗ, ಜ್ಞಾನಯೋಗ ಹಾಗೂ ಕರ್ಮಯೋಗಗಳಿಂದ ಬಂದಿರುವುದು ವೇದ್ಯವಾಗುತ್ತದೆ. ಸಂಪೂರ್ಣ ಸಮಾಧಿ ಸಿದ್ಧಿಯ ಸಾಕ್ಷಾತ್ಕಾರ ಪಡೆಯಲು ಗುರುವಿನ ಅಪ್ಪಣೆಯಂತೆ ಮನಬಂದ ಕಡೆಗೆ ಸಂಚರಿಸುತ್ತಾ ದಿವ್ಯದರ್ಶನದ ಕಡೆಗೆ ನಡೆದರು. "ದೇಶಸುತ್ತು ಕೋಶ ಓದು" ಎಂಬ ನಾಣ್ಣುಡಿಯಂತೆ ಇಹಪರಗಳ ಪಾರಮಾರ್ಥಿಕತೆಯನ್ನು ಪಡೆಯಲು ಮುಂದಾದರು. ಇಂಥಹ ಧಾರ್ಮಿಕ, ಅಲೌಕಿಕತೆಯ ನಂಬಿಕೆಯು ನಾವು ಹೇಳುವ ವೈಜ್ಞಾನಿಕ ನಂಬಿಕೆಗಳಂತಲ್ಲ. ವೈಜ್ಞಾನಿಕ ನಂಬಿಕೆಗಳು ಅನುಭವದ ಆಧಾರದ ಮೇಲೆ ನಿಂತಿರುತ್ತವೆ. ಆದರೆ ಧಾರ್ಮಿಕತೆಯ ನಂಬಿಕೆಗಳು ಅಂತರ್ಯದ ತೃಪ್ತಿಗೋಸ್ಕರ ಹುಟ್ಟಿಕೊಳ್ಳುತ್ತವೆ. ಹೀಗೆ ಆಧ್ಯಾತ್ಮಿಕ ವ್ಯಕ್ತಿಗಳು ಆಂತರಿಕ ಪ್ರಜ್ಞೆಯ ಸಂಗತಿಯಾಗಿರುತ್ತಾರೆ. ಅದರೊಂದಿಗೆ ತಮ್ಮ ಜತೆಯ ಜೀವ ಸಂಕುಲಗಳಿಗಿಂತ ಭಿನ್ನವಾಗಿರಬೇಕೆಂಬ ಉನ್ನತಿಕೆಯ ಪ್ರಜ್ಞೆಯೂ ಸೇರಿರುತ್ತದೆ. ಮುಖ್ಯವಾಗಿ ಅಲೌಕಿಕತೆಯು ಆಧ್ಯಾತ್ಮಿಕತೆಯ ಪರಸ್ಪರ ಬೆಸುಗೆಯ ಕೊಂಡಿಯಾಗಿರುತ್ತದೆ. "ಯಾವುದು ಒಳ್ಳೆಯದೋ ಅದು ದೈವತ್ವವೂ ಹೌದು. ದುರ್ಗುಣವೂ ಹೆಚ್ಚಿ ನನ್ನ ನೈತಿಕತೆಯನ್ನು ಹಾಳುಗೆಡುವುತ್ತದೆ. ಅಲೌಕಿಕವಾದದಷ್ಟೇ ಅಲೌಕಿಕವಾದುದನ್ನು ಅಭಿವ್ಯಕ್ತಿಸಬಲ್ಲದು" ಎಂಬ ವಿಟಗಿನ್‌ಸ್ಟನ್‌ನ ವಿಚಾರ ಉಲ್ಲೇಖಾರ್ಹವಾಗಿದೆ. ಇಲ್ಲಿ ನಂಜುಂಡಶಾಸ್ತ್ರೀ ಅರಿವಿನ ಹಂಬಲಕ್ಕಾಗಿ ಆ ಊರು ಈ ಊರು ತಿರುಗುತ್ತಾ ಲಿಂಗದಹಳ್ಳಿಯನ್ನು ಬಿಟ್ಟು ಯೋಗ ಸಿದ್ಧಿ, ಸಮಾಧಿ ಸಿದ್ಧಿಯ ಮರ್ಮವನ್ನು ಅರಿಯಲು ಮನಬಂದಯೆಡೆಗೆ ಸಂಚರಿಸಿದ. "ಯೋಗ ರಹಸ್ಯವನ್ನು ಗುರು ಮುಖೇನ ಕಲಿತು, ಆತ್ಮಸಾಧನೆಗೆ ಬಳಸುವ ಎಲ್ಲಾ ಕಲ್ಪಾಗಳೂ, ಜ್ಞಾನ ಅನುಭವಗಳನ್ನು ರಹಸ್ಯವಾಗಿಡಲು ಬಯಸುತ್ತವೆ" (ರಹಮತ್ ತರೀಕೆರೆ, ಕರ್ನಾಟಕ ಸೂಫಿಗಳು, ಪು.೯೭) ಕೊಡೇಕಲ್ ಬಸವಣ್ಣ ಇದನ್ನು ಹೀಗೆ ಹೇಳುತ್ತಾನೆ, "ಗುಪ್ತದಾ ನುಡಿಯಿದು ಗುಪ್ತದಲಿರಬೇಕು| ಒಪ್ಪದವರ ಮುಂದೆ ನುಡಿಯಬೇಡ". ಇದು ಗುಟ್ಟನ್ನು ಗುಟ್ಟಾಗೇ ಇಡಬೇಕು ಎಂಬ ಸೂಫಿಗಳ ಹೇಳಿಕೆಯನ್ನೇ ನೆನಪಿಸುತ್ತದೆ"

ಧರ್ಮ, ಅರ್ಥ, ಕಾಮಗಳನ್ನು ಜಯಿಸಿ ಮೋಕ್ಷದ ಸಿದ್ಧಿಗೆ ತಮ್ಮನ್ನು ಸಂಪೂರ್ಣ ಸಮರ್ಪಿಸಿಕೊಂಡು ತನ್ನದೆಲ್ಲವನ್ನು ಬಿಟ್ಟು ಸಿದ್ದಿಯೆಡೆಗೆ ಆಧ್ಯಾತ್ಮಿಕ ದಿಗಂತದೆಡೆಗೆ ಸಾಗಲು ಯಾವ ವರ್ಗದ, ಯಾವ ವಯಸ್ಸಿನ ಅಂತರವಿಲ್ಲವೆಂಬಂತೆ ನಂಜುಂಡಯ್ಯನು ದೇಶಾಂತರಕ್ಕೆ ಹೊರಟು ಹೋದನು. ಆಗ ನಂಜುಂಡಯ್ಯನಿಗೆ ಮೂವತ್ತೋ, ಮುವತ್ತೈದೋ ವಯಸ್ಸಿದ್ದಿರಬಹುದೆಂಬ ಊಹೆಯು ಇದೆ.

**೨.೫. ಮನೆಬಿಟ್ಟು ಮನಸ್ಸಿನೆಡೆಗೆ**

ಆಧ್ಯಾತ್ಮಿಕವಾದ ಮತ್ತು ಐಹಿಕವಾದಗಳು ಒಂದೇ ನಾಣ್ಯದ ಎರಡು ಮುಖಗಳು. ಮಾನವನ ಇಚ್ಛೆ ಯಾವಾಗಲೂ ಸುಖದ ಕಡೆಗೆ ವಾಲುತ್ತದೆಯೇ ಹೊರತಾಗಿ ದುಃಖದ ಕಡೆಗೆ ಎಂದಿಗೂ ತಿರುಗುವುದಿಲ್ಲ.

ಆದರೆ ನಂಜುಂಡ ಶಾಸ್ತ್ರೀಯ ಬದುಕು ಹಾಗಾಗಲಿಲ್ಲ. 'ಇದ್ದುದೆಲ್ಲವ ಬಿಟ್ಟು ಇಲ್ಲದುದರಯೆಡೆಗೆ' ಹೋಗುವುದೇ ಜೀವನ ಅದು ನಿರಂತರವೂ ಮತ್ತು ನಿತ್ಯತ್ವವೂ ಎಂಬುದು ಅವರ ಮನದಾಳದ ಅಭಿಮತ. ಹಾಗಾಗಿ ಅಜ್ಞಾನದ ಬಂಧನವನ್ನು ಒಂದೊಂದಾಗಿ ಭೇದಿಸಿ ಹೊರಬಂದನು. ಮನುಷ್ಯನಿಗೆ ಅಜ್ಞಾನಕ್ಕಿಂತ ಬೇರೆ ಸಂಕೋಲೆಗಳಿಲ್ಲ. ಅಂತಹ ಸಂಕೋಲೆಗಳಿಂದ ಜ್ಞಾನವೊಂದೇ ಅವನನ್ನು ಪಾರು ಮಾಡಬಲ್ಲದು ಎಂಬ ನಿರ್ಣಯಗಳಿಂದ ತಂದೆ, ತಾಯಿ, ಮಡದಿ, ಮಕ್ಕಳು, ನನ್ನದು ನನ್ನವರು ಎಂಬ ಲೌಕಿಕ ಕರಿಛಾಯೆಯಿಂದ ದೂರದೂರ ಇನ್ನು ದೂರ ಎಂಬಂತೆ ಯೋಗಸಿದ್ಧಿಯ, ಸಮಾಧಿ ಸಿದ್ಧಿಯನ್ನು ಪಡೆಯಲು ದೈಹಿಕ ಮತ್ತು ಅಜ್ಞಾನದ ಮೇಲೆ ಗೆಲುವು ಸಾಧಿಸುತ್ತಾ ವಿಕಾಸಗೊಳ್ಳಬಹುದು ಎಂಬ ದೃಢನಿರ್ಧಾರ ಅವರ ಲೌಕಿಕತೆಯ ಗೋಡೆಯನ್ನು ದಾಟುವುದಷ್ಟೇ ಅಲ್ಲ ಅದನ್ನು ಎಗರುವಂತೆ, ಹಾರುವಂತೆ ಮಾಡಿತು. ಭವದ ಜೀವಿಗೆ ಯೋಗಜ್ಞಾನ, ದಿವ್ಯಜ್ಞಾನ ಹಾಗೂ ಸಮಾಧಿ ಸಿದ್ಧಿಯೇ ಶಕ್ತಿ ಕೊಡುವಂಥದ್ದು ಜ್ಞಾನವಲ್ಲದೇ ಬೇರೊಂದಿಲ್ಲ ಎಂಬುದು ಅವರ ನಡಾವಳಿಯಿಂದ ತಿಳಿಯಬಹುದು.

'ಉದ್ದೇಶದ ಸಿದ್ಧಾಂತ' ಎಂಬ ಗ್ರಂಥದಲ್ಲಿ ಹೀಗಿದೆ, 'ಮನುಷ್ಯನಲ್ಲಿರುವ ಒಳ್ಳೆಯತನದ ಅಂಕುರದೊಡನೆಯೇ ಅವನು ನಿಷ್ಕಾಪಟ್ಯವನ್ನು ದೊರಕಿಸಿಕೊಳ್ಳುತ್ತಾನೆ. ಈ ನಿಷ್ಕಾಪಟ್ಯವು ವ್ಯಕ್ತವಾಗುತ್ತದೆ. ವ್ಯಕ್ತವಾಗುವುದರಿಂದ ಅದು ರುಜುವಾತಾಗುತ್ತದೆ; ಅದು ರುಜುವಾತಾಗುವುದರಿಂದ ಉಜ್ವಲವಾಗುತ್ತದೆ. ಉಜ್ವಲತೆಯಿಂದ ಕೂಡಿದ ಅದು ಮಹಿಮೆಗೆ ಸಿದ್ಧಿಗೆ ಎಳೆದೊಯ್ಯುತ್ತದೆ. ಇದರಿಂದ ಪರಿವರ್ತನೆಗೊಂಡು ಜ್ಞಾನ, ಯೋಗ ಸಿದ್ಧಿಯ ಮಾರ್ಗ ಸರಾಗವಾಗುತ್ತದೆ. ಆತ್ಮ ಸಂಸ್ಕಾರದಿಂದ ಅವನ ಸ್ವಭಾವಕ್ಕೆ ಸಾಧ್ಯವಾಗುವ ಅತ್ಯುನ್ನತ ಪ್ರಗತಿಯನ್ನು ಮುಟ್ಟಲು ಸಾಧ್ಯ. ಅತ್ಯಂತ ಎತ್ತರಕ್ಕೆ ಹೋಗಿ ನಿಲ್ಲು. ಅಲ್ಲಿಯವರೆಗೆ ವಿಶ್ರಮಿಸಬೇಡ. ಉನ್ನತಿಯನ್ನು ಮುಟ್ಟಿದಾಗ ಮಾತ್ರ ನಿಲ್ಲು. ಇದೇ ಕನ್‌ಫ್ಯೂಷಿಯಸ್ ಧರ್ಮ ಪದ್ಧತಿಯ ಆಧಾರ ಸ್ವರೂಪವಾಗಿದೆ.

ಬಂಧನವು ಸ್ವಯಂ ನಿರ್ಮಿತವಾದದ್ದು; ಅದನ್ನು ಸ್ವಸ್ಥಚಿತ್ತದಿಂದ ಮುರಿಯಬೇಕು ಎಂಬುದು ನಂಜುಂಡಯ್ಯನ ಸಿದ್ಧಾಂತ. ಹಾಗಾಗಿಯೇ ಆತನು ಭವದ ಬಂಧನಗಳನ್ನು ತೊರೆದು "ಪರಿಗ್ರಹ ವಸ್ತುಗಳನ್ನು ಸಂಗ್ರಹಿಸುತ್ತಾ ವಸ್ತುಗಳ ಗುಲಾಮನಾಗುವುದೇ ಪರಿಗ್ರಹ ಬುದ್ಧಿ, ಸಂಗ್ರಹ ಬುದ್ಧಿ. (Possesive Impuloe) ಇದಕ್ಕೆ ದಾಸನಾದವನಿಗೆ ಜೀವನದ ಉನ್ನತ ಮೌಲ್ಯಗಳತ್ತ ಲಕ್ಷ್ಯವೇ ಹೋಗುವುದಿಲ್ಲ. ಯೋಗ ಸಾಧನೆ ದೂರಾನೇ ಉಳಿಯಿತು. ವ್ಯಾಸಭಾಷ್ಯದ ಈ ವ್ಯಾಖ್ಯಾನ ಮನನೀಯ ವಿಷಯಾಣಾಮಾರ್ಜುನ ರಕ್ಷಣ-ಕ್ಷಯಸಂಗ ಹಿಂಸಾದೋಷದರ್ಶನಾದಪಿ ಸ್ವೀಕರಣಮ ಪರಿಗ್ರಹ ಇತ್ಯೇತೇ ಯಮಾಃ ಎಂದರೆ ವಸ್ತುಗಳ ಸಂಪಾದನೆಯು ಅವುಗಳ ರಕ್ಷಣೆ, ನಾಶ ಮತ್ತು ಅವುಗಳಲ್ಲಿ ಆಸಕ್ತಿ, ಅವುಗಳಿಗಾಗಿ ಹಿಂಸೆ ಇತ್ಯಾದಿ ದೋಷಗಳಿಂದ ಕೂಡಿರುವುದರಿಂದ ಅವುಗಳನ್ನು ಸ್ವೀಕರಿಸದಿರುವುದೇ ಅಪರಿಗ್ರಹ" (ಸಿದ್ದಯ್ಯ ಪುರಾಣಿಕ, ಶರಣ ಸರಣಿ, ಪು.೬೭) "ಈಶ ಚಿಂತನೆಯೊಂದೇ ಸುಖ, ಉಳಿದೆಲ್ಲವೂ ದುಃಖಮಯ" ಎಂಬ ತೀರ್ಮಾನವನ್ನು ತನ್ನಲ್ಲಿ ತಂದುಕೊಂಡು, ಲಿಂಗದಹಳ್ಳಿಯಿಂದ ವೈರಾಗ್ಯ ಮೂರ್ತಿಯಾಗಿ ಮನಬಂದ

ಕಡಗೆ ಸಂಚರಿಸುತ್ತಾ ಚಿಕ್ಕನಾಯಕನಹಳ್ಳಿಗೆ ಬಂದನು. ಅಲ್ಲಿಂದ ಅನೇಕ ಹಳ್ಳಿಗಳಲ್ಲಿ ಸಂಚಾರ ಗೈದು ಮಲ್ಲೇಶ್ವರನ ಬೆಟ್ಟದ ಗವಿಯಲ್ಲಿ ಪೂಜಾ ವಿಧಿ-ವಿಧಾನಗಳಿಂದ ಅನುಷ್ಠಾನಕ್ಕೆ ತೊಡಗಿದರು.

"ಹಳ್ಳಿಯದರಂತಿ ಕದ ವಿಮಳತೆ

ಯಳ್ಳ ಮಲ್ಲೇಶ್ವರನ ಬೆಟ್ಟ

ಕ್ಕುಲ್ಲಸಿತ ಚಿತ್ತದೊಳು ನಂಜುಂಡಾರ್ಯನೈತಂದು

ಅಲ್ಲಿರುವ ಗವಿಯೊಂದ ಕಂಡದ

ರಲ್ಲಿರಲು ಮನದಿಷ್ಟ ಸಿದ್ಧಿಯ

ಸಲ್ಲಿಸುವುದಾ ನೆಲೆಯೆನಿಸಿದುದು ಬಗೆಯೊಳಾಬುಧಗೆ" (ನಾಗೇಶ ಶಾಸ್ತ್ರಿಗಳು, ಲೀಲಾಮೃತ ಪು.೬೫)

ಅವರ ಸೇವೆಗೆಂದು ಒಬ್ಬ ಭೈರವ ಸಿದ್ಧನಾದನು. ಆದರೆ ಬೂಜಿಹಳ್ಳಿಯ ಜನರಿಗೆ ಇದು ಸರಿಬರಲಿಲ್ಲ. ಭೈರವನು ಆತನ ಸೇವೆಗೆ ಸಿದ್ಧನಾದದ್ದನ್ನು ಜನರು ಏಕೆ ಒಪ್ಪಲಿಲ್ಲ ಎಂಬುದು ಯಾವುದೇ ಕೃತಿಗಳಲ್ಲಿ ಪ್ರಕಟಿಸಿಲ್ಲ. ಕಾರಣ ಏನಾಗಿರಬಹುದು? ಆತನಿಗೆ ಸಾಮಾಜಿಕ ಒತ್ತಡಗಳು ಏನಾದರೂ ಇದ್ದವೆ? ಭೈರವನು ತಳಸಮುದಾಯದವನಾದ್ದರಿಂದ ಜನರು ಒಪ್ಪಲಿಲ್ಲವೇ? ಎನ್ನುವ ಪ್ರಶ್ನೆ ಸಹಜವಾಗಿ ಕುತೂಹಲ ಮೂಡಿಸುವಂತಿದೆ. ಆದರೆ ನಂಜುಂಡಯ್ಯನಿಗೆ ಯಾವುದೇ ರೀತಿಯ ದ್ವಂದ್ವವನ್ನು ತಾಳದೇ ಭೈರವನನ್ನು ಶಿಷ್ಯನನ್ನಾಗಿ ಸ್ವೀಕರಿಸಿದನು. ಯೌಗಿಕ ಮಹಿಮರೆಲ್ಲ ಜಾತಿ, ಮತ, ಪಂಥಗಳನ್ನು ಮೀರಿದವರು ಅವರು ಅಲೌಕಿಕ ಸಮುದ್ರದೊಳಗೆ ಈಜಾಡುವುದು ಮುಖ್ಯವೇ ಹೊರತು ಜಾತಿಯದ್ದಲ್ಲ, ಧರ್ಮದ್ದಲ್ಲ ಎಂಬುದು ಅವರ ನಿಲುವಾಗಿದ್ದಿತು. ಮರೆತು ಮೈಯನ್ನು, ಹೊರಗಿನ ಎಚ್ಚರ ತೊರೆದು ಲಿಂಗಾಂಗಳನ್ನು ಸಮರಸಗೊಳಿಸಿ ಸಮಾಧಿ ಸ್ಥಿತಿಯ ಕೈಗೊಳ್ಳಲು ಕುಳಿತನು. ಭಿಕ್ಷಾವೃತ್ತಿಯನ್ನು ಕೈಗೊಂಡು, ತಂದ ಆಹಾರವನ್ನು ಒಂದು ದಿನಕ್ಕೊಮ್ಮೆ, ಎರಡು ದಿನಕ್ಕೊಮ್ಮೆ ಒಮ್ಮೊಮ್ಮೆ ಆಹಾರ ಸೇವಿಸದೆ ನಿರ್ಲಿಪ್ತ ಸ್ಥಿತಿಯನ್ನು ಹೊಂದುತ್ತಿದ್ದನು. ಯೌವನದಲ್ಲಿಯೇ ಯೋಗ ಸಂದೇಶವ ಪಡೆದು ಅದನ್ನು ದೇಶ ವಿದೇಶಗಳಲ್ಲಿ ಸಾರಿದ ನರೇಂದ್ರ (ವಿವೇಕಾನಂದ)ರ ಮುಖದಲ್ಲಿ ಪ್ರಜ್ವಲತೆಯೂ, ಪ್ರಕಾಶಿಸುವಿಕೆಯೂ, ಪ್ರಸನ್ನತೆಯೂ ಪಸರಿಸಿರುವಂತೆ ನಂಜುಂಡಯ್ಯನ ಮುಖಛಾರ್ಯೆಯು ಊಟವಿಲ್ಲದಿದ್ದರೂ ಪ್ರಸನ್ನತೆ ಮತ್ತು ಕಾಂತಿಯು ಕಡಿಮೆಯಾಗಿರಲಿಲ್ಲವೆಂಬುದನ್ನು ಲೀಲಾಮೃತ ಪುರಾಣದಲ್ಲಿ ಚಿತ್ರಿಸಲಾಗಿದೆ. ಅನ್ನದ ಕಡೆಗೆ ಅರಿವಿಲ್ಲದ ಸ್ಥಿತಿಯನ್ನು ಕಂಡು ಊರಿನ ಜನರು ಬಂದು ನಂಜುಂಡಯ್ಯನನ್ನು ಭೈರವಯ್ಯನ ಸಲಹೆಯಂತೆ ಕರೆದರು.

"ನೆರೆದ ಭಕ್ತರೊಳೋರ್ವನೆಂದನು

ಗುರುವೆ ನಿಮ್ಮಾಸ್ಥಿತಿಯ ನರಿಯುತೆ

ಧರಿಸಿ ಚಿಂತೆಯ ಭೈರವಯ್ಯನು ನಿಮ್ಮನೆಲ್ಲರನು

ಕರೆದು ತಂದನು ನಿವಶನಮಂ

ತೊರೆಯುತಿನ್ನೇಳಂಟು ದಿನಗಳ

ವರೆಗೆ ಮಿರೆ ಜೀವಿಸುವುದೆಂತೈತಂದು ನಮ್ಮೂರೋಳ್" (ನಾಗೇಶ ಶಾಸ್ತ್ರಿಗಳು ವೈ, ಲೀಲಾಮೃತ, ಪು.೫೭)

ಅನಿವಾರ್ಯವಾಗಿ ಬೆಟ್ಟದಗವಿಯನ್ನು ಬಿಟ್ಟು, ಭೈರವಯ್ಯನು ಊರಿನ ಜನರನ್ನು ಕರೆದು ತಂದು ಚಿತ್ತಶಾಂತಿಗೆ ಭಂಗತರುವನೆಂದರಿತು ರಂಗಾಪುರಕ್ಕೆ ಬಂದದ್ದು, ನಂಜುಂಡಯ್ಯನದು ನಿಂತಲ್ಲೇ ನಿಲ್ಲುವ ಸ್ವಭಾವವಾಗಿರಲಿಲ್ಲ. ಅಲೌಕಿಕ ವಾದಿಗಳೆಲ್ಲರೂ 'ಸಾಮಾನ್ಯವಾಗಿ ಹರಿಯುವ ನದಿಯಂತೆ'ಯೇ ಹರಿದು ಸರಿದು ಹೋಗುತ್ತಾರೆ. ತುಂಡು ಪಂಚೆ ಹೊದೆಯಲು ಒಂದು ಕಂಬಳಿ ಇವೇ ಅವರ ಉಡುಗೆಗಳು ಆಗಲೇ ಅವರಿಗೆ ತಲೆತುಂಬ ಕೂದಲು, ಗಡ್ಡ ಮೀಸೆಗಳು ಬೆರಳು ತುಂಬಾ ಉಗುರುಗಳು ಬಂದಿದ್ದವು. ಅಲ್ಲಿ ಗುಡ್ಡದಲ್ಲಿದ್ದ ರಂಗ ಸ್ವಾಮಿಗಳ ಜೊತೆ ಅನುಭವಗೋಷ್ಠಿಯಲ್ಲಿ ಭಾಗವಹಿಸಿ ತಾವು ಬಯಸಿದ ಸಮಾಧಿಸಿದ್ಧಿಯನ್ನು ಪಡೆಯಬಯಸಿದರು. ಮುಖದಲ್ಲಿ ಮಿಂಚುವ ತೇಜಸ್ಸುಗಳಿಂದಾಗಿ ಒಬ್ಬ ನೈಜ ಸಾಧುವಿನ ರೂಪದಲ್ಲಿ ಅವರು ಜನರಿಗೆ ಗೋಚರಿಸಿದರು. ಅಲ್ಲಿಯ ಜನರು ಭಕ್ತಿಯಿಂದ ಶಾಸ್ತ್ರಿಗಳಿಗೆ ಕೈಮುಗಿದು ಗೌರವ ಸೂಚಿಸುತ್ತಿದ್ದರು. ಏನೂ ಹೆಸರನ್ನೇ ಹೇಳದ ಅವರನ್ನು 'ನಾಗಯ್ಯನೆಂಬ' ಹೆಸರಿಂದ ಕರೆಯಹತ್ತಿದರು.

ಪರಮ ಸ್ಥಿತಿಯ ಮಹಿಮರಿಗೆ, ಸಂಚಾರಿಶೀಲರಿಗೆ, ಸತ್ಯಾನ್ವೇಷಣಕಾರರಿಗೆ ಯಾವ ಊರು ತಾನೇ ಬೇಕೆನಿಸುತ್ತದೆ, ಸಾಕೆನಿಸುತ್ತಿದೆ ಎಂಬುದು ಅವರಿಗೂ ಸಹ ಅರಿವಾಗದು. ದಶದಿಕ್ಕುಗಳು ಅವರಿಗೆ ಹತ್ತಿರವೆಂಬಂತೆ ಕಾಣುತ್ತವೆ. ರಂಗಾಪುರ ಆ ಊರು ಸಾಕೆನಿಸಿತು. ಮುಂದೆ ಸೀದಾ ಹಿರಿಯೂರು, ನಾಣಿಕೆರೆ, ಹುಲಿಯ ತೊಟ್ಟು, ಮುದುಪುಡಿ ಮುಂತಾದ ಸ್ಥಳಗಳಲ್ಲಿ ಸ್ವಲ್ಪಕಾಲದ ವಾಸ್ತವ್ಯ ಹೂಡಿ ಸಂಚಾರಶೀಲರಾದ ಅವರು ಕಲ್ಯಾಣದುರ್ಗಕ್ಕೆ ಆಗಮಿಸಿದರು. ಅಲ್ಲಿಂದಲೇ ಅವರ ಲೀಲೆಗಳು ಜನರಿಗೆ ಪ್ರಾಪ್ತಗೊಂಡವು.

"ಜ್ಞಾನ ನಿಧಿಯಾ ಗುರುವು ಮತ್ತಾ

ಸ್ಥಾನಮಂ ಬಿಟ್ಟಾಗಮಿಸಿ ಕ

ಲ್ಯಾಣ ದುರ್ಗಕೆ' ಪೀಕಲಾಟದವರ ಮಠದ ಮುಂದೆ

ಕಾಣೆ ಬೇವಿನಕಟ್ಟೆಯದರೋಳ್

ಮೌನದಿಂದಂ ಮಲಗಿ ಬಿಟ್ಟನ

ದೇನನೊಂದಂ ಬೇಡದಂತೂರವರನೇ ನೊರೆವೇಂ" (ಅದೇ ಪು.೬೦)

ಯೋಗ ಸಾಧನೆಯಿಂದ ಮನುಷ್ಯ ಅತಿಮಾನವನಾಗಬಲ್ಲ, ಅತಿಮಾನವತೆಯ ಅನೇಕ ಶ್ರೇಣಿಗಳಲ್ಲಿ

ವಿಹಾರಿಸುತ್ತ ಈಶ್ವರತ್ವದಲ್ಲಿ ವಿಲೀನವಾಗಬಲ್ಲ. ಅದಕ್ಕಾಗಿ ಶರೀರ ಹಾಗೂ ತನ್ಮೂಲಕ ಮನಸ್ಸನ್ನು ಭೌತಿಕತೆಯೊಡನೆ ಬೆಸೆಯುವ ಇಂದ್ರಿಯಜನ್ಯ ವಾಸನೆಗಳಿಗೆ ತ್ಯಾಗ ಅತ್ಯಗತ್ಯ. ಇಲ್ಲಿ ಕಲ್ಯಾಣದುರ್ಗಕ್ಕೆ ಬಂದ ನಂತರದ ದಿನಗಳಲ್ಲಿ ನಡೆದ ಕೆಲವು ಪವಾಡಗಳು, ಲೀಲೆಗಳಿಂದ ಜನಮಾನಸದಲ್ಲಿ ನಂಬಿಕೆ ಮತ್ತು ಸಾಧ್ಯಸಾಧ್ಯತ್ಯದ ಚಿಗುರು ಬೆಳೆಯಲು ಸಹಾಯಕವಾದಂತೆ ತೋರುತ್ತದೆ. ಇಲ್ಲಿ ಎತ್ತರವಾದ ಕಟ್ಟೆಯ ಮೇಲೆ ಯೋಗನಿದ್ರೆಯಲ್ಲಿದ್ದಾಗ ಕುತ್ತಿಗೆಗೆ ಸರ್ಪವೊಂದು ಸುತ್ತಿಕೊಂಡಿದ್ದನ್ನು ಜನರು ಕಂಡು ಯಾರೋ ಹುಚ್ಚನಿರಬೇಕೆಂದು ಬೆಚ್ಚಿಬೆರಗಾದರು. ಸರ್ಪ ತಕ್ಷಣ ಮಾಯವಾದದ್ದನ್ನು ಕಂಡು ಅಸಾಧ್ಯಪುರುಷ, ದೈವೀ ಸಾಕ್ಷಾತ್ಕಾರ ಹೊಂದಿದ ಮನುಷ್ಯನೆಂದು ಪೂಜಿಸತೊಡಗಿದರು. 'ಹುಚ್ಚುತನದಿಂದ' ಚಿತ್ರಿತವಾಗಿ ತಿರುಗಾಡುತ್ತಿದ್ದಾರೆಂಬ ವಿಷಯ ತಿಳಿದು ತಾತನ ಮಡದಿ ಮಂಜುಳೆ ಮಗು ಸಮೇತ ಕಲ್ಯಾಣದುರ್ಗಕ್ಕೆ ಬರುತ್ತಾಳೆ. ಮಾತನಾಡಿಸಲು ಎಷ್ಟು ಪ್ರಯತ್ನಪಟ್ಟರೂ ತಾತನು ಮಾತನಾಡದೆ ಮೌನಿಯಾಗಿದ್ದನು. ಆತನ ಪೂರ್ಣಾವಧೂತ ಸ್ಥಿತಿಯನ್ನು ಕಂಡ ಮಂಜುಳ ಅವರನ್ನೇ ಕರೆದೊಯ್ಯುವುದು ಅಸಾಧ್ಯವೆಂದು ತಿಳಿದು ಹಿಂದಿರುಗಿ ಹೋದಳು.

ಹೀಗೆ ಸಂಸಾರದಿಂದ ಸಂಪೂರ್ಣ ಮುಕ್ತಿ ಪಡೆದ ತಾತನು ಸದಾ ಏಕಾಂತತೆಯನ್ನು ಬಯಸುತ್ತಾ ಅರಿವಿಲ್ಲದಂತೆಯಿದ್ದನು. ಮತ್ತೊಂದು ಸಲ ಅದೇ ಗ್ರಾಮದಲ್ಲಿ ಬಿರುಸಾದ ಮಳೆಗಾಳಿಗೆ ಸಿಕ್ಕ ತಾತ ಕಸಕಡ್ಡಿಗಳಲ್ಲಿ ಹೂತು ಹೋಗಿದ್ದನ್ನು ಕಂಡು.

"ಯೋಗ ನಿದ್ರಾವಶನೆನಿಸುತಾ
ಯೋಗಿ ಮಲಗಿರೆ ಬಿರುವಳೆಯ ಬರ
ಲಾಗಿ ಹರಿಯುವ ಹೊನಲ ಕಸ ಕಡ್ಡಿಗಳ ತೆಪ್ಪವದು
ಆ ಗುರುವನುರೆ ಮುಚ್ಚಿರಲು ಬೆಳೆ
ಗಾಗೆ ನೋಡಿದ ಜನರು ಹರಣವು
ಪೋಗಿರುವುದಿವನೆಲ್ಲಿಯವನೋ ತಿಳಿಯದೆಂದವರು" (ಅದೇ ಪು.೬೬)

ಈ ಎರಡೂ ಘಟನೆಗಳನ್ನು ಕಣ್ಣಾರೆ ಕಂಡ ಜನ ಆತನನ್ನು ಅದ್ವೀತಿಯ ಮಹಿಮಾ ಪುರುಷನಿರಬೇಕೆಂದು ಭಾವಿಸಿ ಮೆರವಣಿಗೆ ಮಾಡಿ ಸಂಭ್ರಮ ಪಟ್ಟರು. ಭವದ ಬಂಧನಗಳಿಂದ ಜಾರಿಕೊಂಡು ನಂಜುಂಡಶಾಸ್ತ್ರಿ ಎಂಬ ಹೆಸರು ಮಾಯವಾಗಿ ಎಲ್ಲರ ಬಾಯಲ್ಲೂ ತಾತನೆಂಬ ಹೆಸರು ಕೇಳಿ ಬಂದಿತು. ದೈವಲೀಲೆಯ ಸಾಕ್ಷಾತ್ಕಾರವಾಗಿ ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ, ಪ್ರಾಣದಲ್ಲಿ ನಿರ್ಭಯ, ಚಿತ್ತದಲ್ಲಿ ನಿರಪೇಕ್ಷೆ, ವಿಷಯಗಳಲ್ಲಿ ಉದಾಸೀನ, ಭಾವದಲ್ಲಿ ದಿಗಂಬರತ್ವ, ಜ್ಞಾನದಲ್ಲಿ ಪರಮಾನಂದ ವೆಡಗೊಂಡ ಬಳಿಕ ಸಿದ್ಧಿಯ ಸಾನಿಧ್ಯ ಹತ್ತಿರವಲ್ಲದೆ ಮತ್ತೇನು ಎಂಬಂತೆ ಏಕಾಂತತೆಯನ್ನು ಬಯಸುತ್ತಾ ತನ್ನ ಧ್ಯಾನಾಸಕ್ತಿಗೆ ಜನರಿಂದ ದೂರಯಿರುವುದು ಒಳ್ಳೆಯದೆಂದರಿತು ಆತನ ದರ್ಶನಕ್ಕೆ ಬರುತ್ತಿದ್ದ

ಜನರಿಂದ ತಪ್ಪಿಸಿಕೊಳ್ಳಲು ಹುಲಿಕಲ್ಲಿಗೆ ಬಂದನು. ಅಲ್ಲಿಯು ಆತನ ಪ್ರಚುರತೆ ಹೆಚ್ಚಿದ್ದರಿಂದ ಕಲ್ಯಾಣ ದುರ್ಗದಿಂದ ಅಲೆದಾಡುತ್ತಾ ಬೆಳಗುಪ್ಪಿಗೆ ಬಂದನು. ಹೀಗೆ ಬಂದ ತಾತನವರು ದಿಗಂಬರ ಸ್ಥಿತಿಯಲ್ಲಿ ಪೂರ್ಣ ಪರವಶರಾಗಿ ತಿರುಗಾಡುತ್ತಿರುತ್ತಾರೆ. ಇಂಥ ಸ್ಥಿತಿಯನ್ನು ಕಂಡ ಕೆಲವರು ಜ್ಞಾನಶೂನ್ಯನು, ಎರ್ರಿ(ಹುಚ್ಚ)ಯೆಂದು ಕರೆದರು". ಇಲ್ಲಿದ್ದಾಗಲೇ 'ಎರ್ರಿತಾತ' ಎಂಬ ಹೆಸರು ಕರೆಯಲ್ಪಟ್ಟು, ಆತನ ದರುಶನದಿಂದ ಪುನೀತರಾದ ಜನರೆಷ್ಟೋ. ಬೆಳಗುಪ್ಪೆ ಎಂಬ ಗ್ರಾಮದಲ್ಲಿ ಕೇವಲ ಹದಿನೈದು ಇಪ್ಪತ್ತು ದಿನಗಳು ಇದ್ದಾನೆಂಬ ಪ್ರತೀತಿಯಿದೆ. ಇಲ್ಲಿಯೇ ನಂಜುಂಡಯ್ಯ, ನಂಜುಂಡಶಾಸ್ತ್ರಿ, ನಿರಂಜನಾಮೂರ್ತಿ ಎಂಬ ಹೆಸರುಗಳೆಲ್ಲ ಗತಿಸಿಹೋಗಿ ತಾತ, ಎರ್ರಿತಾತನೆಂಬ ಹೆಸರು ಜನಮಾನಸದಲ್ಲಿ ಬೇರೂರಿತು.

ಬೆಳಗುಪ್ಪೆ ಗ್ರಾಮದ ಜನರು ಎರ್ರಿತಾತನ ವಿಚಿತ್ರವರ್ತನೆಯನ್ನು ಕಂಡು ಹೆದರಿ ಓಡಿಹೋಗುತ್ತಿದ್ದರು. ತಾತನನ್ನು ತಿರುಕನೆಂದು, ಮತಿಶೂನ್ಯನೆಂದು ತಿಳಿದಿದ್ದರು. ಒಂದು ದಿನ ಒಬ್ಬ ಹೆಂಗಸು ನೀರನ್ನು ತರುತ್ತಿದ್ದಾಗ ನಗ್ನಮೂರ್ತಿ ಎರ್ರಿತಾತನು ಬಂದು ಆಕೆಯ ಎದೆಯನ್ನು ಮುಟ್ಟಲು ಆಕೆಯಲ್ಲಿದ್ದ ಬಂಜೆತನ ಹೋಗಿ ಮಕ್ಕಳಾದದ್ದು ಅವರ ಲೀಲೆಗಳಲ್ಲಿ ಒಂದಾಗಿದೆ. ಇದನ್ನು ಶಿ.ವ.ಚನ್ನಬಸವೇಶ್ವರರು ತಮ್ಮ ಲೀಲಾವಿಲಾಸದಲ್ಲಿ ಬೆಳಗುಪ್ಪೆಯಲ್ಲಿದ್ದ ಎರ್ರಿಸ್ವಾಮಿಯೇ ಬೇರೆ, ಚೇಳಗುರಿಕೆ ಎರ್ರಿಸ್ವಾಮಿಯೇ ಬೇರೆ ಎಂದೂ, ಈ ಘಟನೆ ನಡೆದದ್ದು ಬೆಳಗುಪ್ಪೆಯ ಎರ್ರಿಸ್ವಾಮಿಗಳಿಂದ ಎಂದು ತಿಳಿಸುತ್ತಾರೆ. ಇದು ಎಷ್ಟು ಸರಿಯೋ? ತಪ್ಪೋ ನಿರ್ಧರಿಸುವುದು ಕಷ್ಟವೆನಿಸುತ್ತದೆ. ಇಲ್ಲಿಯೇ ಒಂದು ಬಾವಿಯಿಂದ ಇನ್ನೊಂದು ಬಾವಿಯಲ್ಲಿ ತೇಲುವುದು, ಕುರುಬರ ಮನೆಯಲ್ಲಿ ಹಾವನ್ನು ಬಂಗಾರವಾಗಿ ಮಾರ್ಪಡಿಸುವುದು ಇವೆಲ್ಲವುಗಳನ್ನೂ 'ಪವಾಡ' ಎನ್ನುವ ಶೀರ್ಷಿಕೆಯಡಿಯಲ್ಲಿ ಚರ್ಚಿಸಲಾಗುವುದು.

ಬೆಳಗುಪ್ಪೆಯಲ್ಲಿ ಶರಣೆ ಚಿಕ್ಕವೀರಮ್ಮನವರ ಮನೆಯಲ್ಲಿ ಇದ್ದು, ನಂತರ ಆತನಿಗೆ ಆ ಊರು ಸಾಕೆನಿಸಿತು. ಆ ಊರು ಬಿಟ್ಟು ಹೊರಡುವಾಗ ಊರಲ್ಲಿ ಕಟ್ಟುತ್ತಿದ್ದ ನಗರೇಶ್ವರ ದೇವಸ್ಥಾನ ಕಂಡು ದೇವಸ್ಥಾನದ ನಿರ್ಮಾಣಕ್ಕೆ ತನ್ನದೇ ರೂಪರೇಷೆಗಳನ್ನು ನೀಡಿ ಅದರಂತೆ ಕಟ್ಟಲು ಹೇಳಿ ಹೊರಟನಂತೆ. ಇಲ್ಲಿಂದ ಹಿರೇಮಸ್ಸೂರಿಗೆ ಬಂದು ತಿಪ್ಪಾರೆಡ್ಡಿಯವರ ಮಾವಿನತೋಟದಲ್ಲಿ ಧ್ಯಾನ ಪರವಶನಾಗಿದ್ದ ಎಂಬುದು ಕ್ಷೇತ್ರಕ್ಕೆ ಹೋದಾಗ ಸಿಕ್ಕ ಮಾಹಿತಿ. ಅಲ್ಲಿನ ಶ್ರೀ ಸಿದ್ದೇಶ್ವರ ಜಾತ್ರೆಯಲ್ಲಿ ಉತ್ಸಾಹದಿಂದ ತನ್ನನ್ನು ತಾನು ಮರೆತು ಕುಣಿಯುತ್ತಿದ್ದಾಗ ತಲೆಯ ಕೂದಲಿಗೆ ಬೆಂಕಿಹತ್ತಿ ಸುಟ್ಟವು. ಅಲ್ಲಿಯೇ ತಾತನಿಗೆ ತಲೆಬೋಳಿಸಿ ಎಣ್ಣೆಸ್ನಾನ ಮಾಡಿಸಿದರಂತೆ. ಆಸ್ನಾನ ಮಾಡಿದ ಮೇಲೆ ಆತನ ಬದುಕಿನ ರೀತಿಯು ವಿಚಿತ್ರವಾಗಿತ್ತು.

ಮುಸ್ಸೂರನ್ನು ಬಿಟ್ಟ ತಾತನು 'ಉರವಕೊಂಡ'ಕ್ಕೆ ಬಂದನು. ಉರುವಕೊಂಡ ಊರಿನವರಿಗೂ ತಾತನ ಮಹಿಮೆ ಗೊತ್ತಾಗಿತ್ತು. ಕೆಲವರು ತಾತನನ್ನು ಹುಚ್ಚನೆಂದು ತಿಳಿದರು. ಒಬ್ಬ ಮುಸ್ಲಿಂ ಯುವಕ ತಾತನನ್ನೇ ಕೆಣಕಲು ಕೈಹಾಕಿದ. ತಾತ ಬಾವಿಯಲ್ಲಿ ಈಜುತ್ತಿದ್ದಾಗ ತಾತನ ಮೇಲೆ ಆ ಹುಡುಗ ಜಿಗಿದಾಗ ತಾತನೀರಿನ ಒಳಗೆ ಹೋಗಿ ಎಷ್ಟೊತ್ತಾದರೂ ಎದ್ದು ಬರಲಿಲ್ಲ. ಯುವಕ ಗಾಬರಿಯಾದ ಗಡಬಡಿಸಿ

ಬಾವಿಯಿಂದ ಮೇಲೆದ್ದು ಊರಿನೊಳಗೆ ಓಡಿಹೋದ ದಾರಿಯಲ್ಲಿ ಬಸವಣ್ಣನ ಗುಡಿ ಆ ಗುಡಿಯಲ್ಲಿ ತಾತನು ಪೂಜೆಮಾಡುತ್ತಾ ಕುಳಿತ್ತಿದ್ದನ್ನು ಕಣ್ಣಾರೆ ಕಂಡು ಆಯುವಕನಿಗೆ ಆಶ್ಚರ್ಯವಾಯಿತು. ಅಲ್ಲಿ ಕೆಲವು ಅದ್ಭುತಗಳನ್ನು ಮಾಡಿದನು. ಉರವಕೊಂಡದಲ್ಲಿ ತಾತನು ತೊಗಟಶಾಲೆಯ ಗುರ್ರಂ ಸಂಜೀವಮ್ಮನ ಮನೆಯಲ್ಲಿ ವಾಸವಾಗಿದ್ದನೆಂಬ ಪ್ರತೀತಿಯಿದೆ.

ಅದೇ ಊರಿನಲ್ಲಿ ತಾತ ಧ್ಯಾನಾಸಕ್ತನಾಗಿದ್ದಾಗ ಕೆಲವು ಕಳ್ಳರು ತಾತನ ಹತ್ತಿರಬಂದು ತಮ್ಮ ಕಳ್ಳತನಕ್ಕೆ ಯಶಸ್ಸು ಕೋರಿದಾಗ ತಾತ ಮೌನ ಮುರಿಯದೇ ಧ್ಯಾನದಲ್ಲಿ ತೊಡಗಿದ್ದನು. ಕಳ್ಳರು ಕಂಡು ತಾತನ ತಲೆಗೆ ತೆಂಗಿನಕಾಯಿ ಕುಕ್ಕಿದರೂ ಕದಲಲಿಲ್ಲವಂತೆ. ಅಲ್ಲಿ ಕಳ್ಳರು ಕಳ್ಳತನ ಮಾಡಿ ಕಷ್ಟಕ್ಕೀಡಾದರಂತೆ ಮುಂದೆ ಅಲ್ಲಿಂದ ವೆಲಗೊಂಡಗೆ ಬಂದದ್ದು, "ಇವನಾರೋ ಹುಚ್ಚ ಹೊರಗೆ ತಳ್ಳಿ, ಊರು ಬಿಡಿಸಿರಿ ಎಂದು ಊರ ಹಳ್ಳದ ದಂಡೆಯವರೆಗೂ ಬಿಟ್ಟು ಬಂದಿದ್ದಾರೆ. ಆಗ ರಭಸವಾದ ಮಳೆಬಂದು ತೆಪ್ಪವಿಟ್ಟ ಜಾಗದಲ್ಲಿ ಹೆಣ ತೇಲಿದಂತೆ ತೇಲುತ್ತಿದ್ದರಂತೆ. ಈ ಘಟನೆ ನಡೆದ ಎರಡು ದಿನಗಳು ಕಳೆದ ಮೇಲೆ ಹತ್ತಿರಹೋಗಿ ನೋಡಿದಾಗ ಉಸಿರಾಡುತ್ತಿದ್ದ ತಾತನವರನ್ನು ಕಂಡು ಭಯಭೀತರಾಗಿ ಮೇಲಕ್ಕೆ ತಂದು ಶೈತೋಪಚಾರ ಮಾಡಿದರಂತೆ" (ಚನ್ನಬಸವೇಶ್ವರ ಶಿವ, ಎರ್ರಿಸ್ವಾಮಿಗಳ ಲೀಲಾವಿಲಾಸ, ಪು.೨೧) ಅಲ್ಲಿಂದ ಚೀಕಲುಗುರಿಕೆಯ ದಾಸಯ್ಯನ ಹೊಲದಲ್ಲಿ ಬಂದು ವಾಸವಾಗಿದ್ದ. ಹೀಗೆ ಎರ್ರಿತಾತನು ಮಹಾನಿರ್ವಾಣಾಧಾರಿಯಾಗಿ ಊರಿಂದ ಊರಿಗೆ ಸಂಚಾರಗೈದನು. ಯಾವುದೇ ಲೌಕಿಕತೆಯ ಡಂಭಚಾರವನ್ನು ಅಳವಡಿಸಿಕೊಳ್ಳದೇ ನಿರ್ವಿಕಲ್ಪತೆಯ ಮನಸ್ಸನ್ನು ತನ್ನ ಆಭರಣವೆಂಬಂತೆ ಧರಿಸಿದನು. ದಿನದಿಂದ ದಿನಕ್ಕೆ ಭಕ್ತ ಜನರ ಸಂಖ್ಯೆ ಬೆಳೆಯ ತೊಡಗಿದಾಗ ಸಮಾಧಿಸಿದ್ಧಿಯು ಸಮೀಪವಾಯಿತೆಂಬಂತೆ ಪಯಣವೆಸಗಿ ಚೇಳಗುರಿಕೆಗೆ ಬಂದು ನೆಲೆಸಿದ.

ಎರ್ರಿತಾತನು ಚೇಳಗುರಿಕೆ ಗ್ರಾಮಕ್ಕೆ ಬಂದು ನೆಲೆನಿಲ್ಲುವ ದೈವವಾಣಿಯನ್ನು ಬಳಗಾನೂರು ಮರಿಸ್ವಾಮಿಗಳು ನುಡಿದಿದ್ದಾರೆ. ಈ ಸ್ಥಳದಲ್ಲಿ ಕಲ್ಲಿನ ಮೇಲೆ ಕಲ್ಲಿಟ್ಟು ಇಲ್ಲೊಂದು ದೊಡ್ಡ ಮಠವಾಗುತ್ತದೆ. ಮಹಿಮರೊಬ್ಬರು ಇಲ್ಲಿ ವಾಸವಾಗಿರುತ್ತಾರೆ. ಮಹಾತ್ಮರ ಬದುಕನ್ನು ಮಹಾತ್ಮರೇ ಬಲ್ಲರು. ಬಳಗಾನೂರು ಮರಿಸ್ವಾಮಿಗಳು ಹೇಳಿದ ಭವಿಷ್ಯ ಸುಳ್ಳಾಗಲಿಲ್ಲ. "೧೮೭೭ ಹೇವಳಂಬ ಸಂವತ್ಸರದಲ್ಲಿ ಶ್ರೀ ಎರ್ರಿಸ್ವಾಮಿಗಳು ಚೇಳಗುರಿಕೆಗೆ ಬಂದರೆಂದು ಇಲ್ಲಿಯ ಹಿರಿಯರು ಹೇಳುತ್ತಾರೆ. ೧೮೪೮ರಲ್ಲಿ ಪ್ರಕಟವಾದ ಎರ್ರಿಸ್ವಾಮಿಗಳವರ ಚರಿತ್ರೆಯ ಸಂಪಾದಕರಾದ ಶ್ರೀ ಕೆ.ಎಂ.ಕರಿಬಸವಶಾಸ್ತ್ರಿಗಳು ಅದೇ ವರ್ಷವನ್ನು ಸಮರ್ಥಿಸುತ್ತಾರೆ" (ಜೋಳದರಾಶಿ ದೊಡ್ಡನಗೌಡರು, ಶ್ರೀ ಎರ್ರಿಸ್ವಾಮಿಗಳ ಶಿವಮಯ ಜೀವನ ಚರಿತ್ರೆ, ಪು.೫) ಖಚಿತವೆಂಬಂತೆ ಅವಧೂತರ, ಸಾಧುಸಂತರ, ಮಹಿಮಾನ್ವಿತರ ಪೂರ್ವಚರಿತ್ರೆ ನಿರ್ಧರಿಸುವುದು ಕಷ್ಟವಾಗುತ್ತದೆ. ಏಕೆಂದರೆ ಪೂರ್ವಚರಿತ್ರೆಯ ಸ್ಥಿತಿಗತಿಗಳ ಬಗ್ಗೆ ಯಾವುದೇ ಉಲ್ಲೇಖಗಳು ಸಿಗುವುದಿಲ್ಲ. ಸಿಕ್ಕರೂ ಅದು ಅಂತೆಕಂತೆಗಳ ಮೇಲೆ ನಿಂತಿರುವುದು ಕಂಡುಬರುತ್ತದೆ. ಅವರ ಮಹಿಮಾನ್ವಿತ ಉತ್ತರಭಾಗವೇ ಸಿದ್ಧಿಯ ಕಡೆವಾಲಿರುವುದರಿಂದ ಪೂರ್ವಚರಿತ್ರೆಗಿಂತಲೂ ಬಹುಮುಖ್ಯವೆನಿಸಿಬಿಡುತ್ತದೆ.

ಮಧ್ಯಕಾಲೀನ ಸಂದರ್ಭದಲ್ಲಿ ಭಕ್ತಿಯ ಗಾಳಿಯು ಇಳೆಯಲ್ಲೆಲ್ಲಾ ಪಸರಿಸಿತು. ಅಂಥಹ ಸ್ಥಿತಿಯಲ್ಲಿ ದಕ್ಷಿಣ ಕರ್ನಾಟಕದಿಂದ ಮಂಟೇಸ್ವಾಮಿ, ಮಲೆಮಹದೇಶ್ವರ ಮುಂತಾದ ಅನುಭಾವಿಗಳು ಸ್ಥಳಪಲ್ಲಟ, ಸ್ಥಾನಪಲ್ಲಟಗೊಂಡು ಉನ್ನತವರ್ಗದ ಕಪಿಮುಷ್ಠಿಯಿಂದ ದೂರಸರಿದು ಸಮಾಜದ ಅಂಧತೆಯನ್ನು, ಜನವಿರೋಧಿ ನಿಲುವನ್ನು ಎದುರಿಸಿ ತುಂಗಭದ್ರ ನದಿತೀರದ ಹಂಪೆಯ ಕಡೆಗೆ ವಲಸೆ ಬಂದರು. "ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಬಂದ ದೈವಗಳ ಒಂದು ವರ್ಗವೇ ನಮ್ಮಲ್ಲಿದೆ. ಈ ದೈವಗಳು ಯಾವುದೋ ಒಂದು ಕಾರಣಕ್ಕಾಗಿ ಬಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸ ಬಂದು ದೈವಗಳಾಗುತ್ತವೆ" (ಮಂಜುನಾಥ ಬೇವಿನಕಟ್ಟಿ, ಜಾನಪದ ಉತ್ಖನನ, ಪು.೪೫) ಹೀಗೆ ವಲಸೆ ಬಂದವರಲ್ಲಿ ಕೆಲವರು ಹಿಂದಿರುಗಿ ಹೋಗಿದ್ದಾರೆ. ಇನ್ನು ಕೆಲವರು ಇಲ್ಲೇ ನಿಂತು ಅವರ ಪವಾಡ ಸಾದೃಶ್ಯಗಳಿಂದ ಮಹಿಮಾನ್ವಿತರಾಗಿ ಭಕ್ತಜನರ ಊರು ದೈವಗಳಾಗಿ, ಗ್ರಾಮ ದೈವಗಳಾಗಿ, ಕುಲದೈವಗಳಾಗಿ ಪೂಜೆ ಪುನಸ್ಕಾರಗಳಿಂದ ಆರಾಧ್ಯ ದೈವಗಳಾಗಿದ್ದಾರೆ. ಅಂಥಹ ಅನುಭಾವಿಗಳಲ್ಲಿ ಎರ್ರಿತಾತರು ಒಬ್ಬರಾಗಿದ್ದಾರೆ. "ಎಲ್ಲಿಂದಲೋ ಬಂದು ಇಲ್ಲಿ ನೆಲೆಸಿದ ಎರ್ರಿತಾತನವರಿಂದಲೇ ಚೇಳಗುರಿಕೆಗೆ ಮಹತ್ವ ಬಂದದ್ದು ಎಂದು ಕ್ಷೇತ್ರಕಾರ್ಯಕ್ಕೆ ಹೋದಾಗ ಒಬ್ಬ ವಕ್ತೃವು ಹೇಳಿದ ಮಾತು ನಿಜವೆಂಬಂತೆ ಶಾಲೆ, ವಸತಿ, ಪ್ರತಿನಿತ್ಯ ದಾಸೋಹ ಮುಂತಾದ ಸಾಮಾಜಿಕ ಚಟುವಟಿಕೆಗಳು ಸಾಕ್ಷಿಯಾಗಿವೆ. ಸುಖಭೋಗ, ಸಾಂಸಾರಿಕ ಭೋಗ, ಹಣದ ವ್ಯಾಮೋಹದ ಜಾಲದಿಂದ ಹೊರಬಂದು ಚೇಳಗುರಿಕೆ ಗ್ರಾಮದಲ್ಲಿಯೇ ಸಮಾಧಿ ಸಿದ್ಧಿಯ ಪಡೆದ ಯೋಗಿಕ ಪುರುಷರು, ಅವಧೂತರಾಗಿದ್ದಾರೆ.

**ಅಡಿ ಟಿಪ್ಪಣಿಗಳು**

೧. ಜಾರ್ಜ್ ಕುರಿಯನ್, ಬಿ.ಎಸ್.ಫರುಖ್ ಮೂಲ ಐ.ಶ್ರೀ ಪ್ರಸಾದ್ ಅನು: ಪ್ರಾಕೃತಿಕ ಭೂಗೋಳ ಶಾಸ್ತ್ರ, ಪುಟ.೧೭೧.

೨. ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ ೧, ಪು.೩೬೪.

೩. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು, ಪು.೦೨.

೪. ಶಿವಾನಂದ ವಿರಕ್ತಮಠ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಪು.೧೦೫.

೫. ಜೋಳದರಾಶಿ ದೊಡ್ಡನಗೌಡ, ಚೇಳಗುರಿಕೆ ಎರ್ರಿತಾತನ ಶಿವಮಯ ಜೀವನ ಚರಿತ್ರೆ, ಪು.೧೫.

೬. ಅದೇ. ಪು.ಸಂ. ೧೯

೭. ಅದೇ ಪು.ಸಂ. ೧೯

೮. ನಾಗೇಶಶಾಸ್ತ್ರಿ ವೈ, ಲೀಲಾಮೃತ, ಪು.೨೪

೯. ಅದೇ ಪು. ೩೬

೧೦. ಬಸವರಾಜ್ ಬಿ.ಸಿ, ಚೇಳಗುರಿಕೆ ಎರ್ರಿಸ್ವಾಮಿಗಳು, ಪು.೧೫

೧೧. ನಾಗೇಶ ಶಾಸ್ತ್ರಿಗಳು ವೈ, ಲೀಲಾಮೃತ, ಪು.೩೨

೧೨. ಅದೇ ಪು.೩೬

೧೩. ಹರೀಶ್ ಕಶ್ಯಪ್, ಅರಿವಿನೆಡೆಗೆ, ಪು. ೨೨೪.

೧೪. ರಹಮತ್ ತರೀಕೆರೆ, ಧರ್ಮ ವಿಶ್ವಕೋಶ, ಪು.೦೨

೧೫. ಅದೇ ಪು.೨೬೧

೧೬. ಶಿವಾನಂದ ಎಸ್, ಚೇಳಗುರಿಕೆ ಎರ್ರಿತಾತ, ಪು.೦೪

೧೭. ನಾಗೇಶಶಾಸ್ತ್ರಿಗಳು ವೈ, ಲೀಲಾಮೃತ, ಸಂಧಿ.೪ ಪು.೫೨

೧೮. ಚೆನ್ನಬಸವೇಶ್ವರ ಶಿ.ವ, ಚೇಳಗುರಿಕೆ ಎರ್ರಿಸ್ವಾಮಿಗಳ ಲೀಲಾವಿಲಾಸ, ಪು.೧೭.

೧೯. ನಾಗೇಶಶಾಸ್ತ್ರಿಗಳು ವೈ, ಲೀಲಾಮೃತ, ಸಂಧಿ.೪, ಪು.೫೩

೨೦. Writtegen stein tractaces logico, Philosophicus, Trans: DF pears and B.F.Mc Gunness, Routledge and Icegan paul. London. 1961.

೨೧. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು, ಪು.೧೯೭.

೨೨. ಸಿದ್ಧಯ್ಯ ಪುರಾಣಿಕ, ಶರಣಸರಣಿ, ಪು.೬೬

೨೩. ನಾಗೇಶಶಾಸ್ತ್ರಿಗಳು ವೈ, ಲೀಲಾಮೃತ, ಪು.೫೭

೨೪. ಅದೇ ಪು.೬೦.

೨೫. ಅದೇ ಪು.೬೬

೨೬. ಚನ್ನಬಸವೇಶ್ವರ ಶಿ.ವ, ಲೀಲಾವಿಲಾಸ, ಪು.೨೧

೨೭. ಜೋಳದರಾಶಿ ದೊಡ್ಡನಗೌಡ, ಶ್ರೀ ಎರ್ರಿಸ್ವಾಮಿಗಳ ಶಿವಮಯ ಜೀವನಚರಿತ್ರೆ, ಪು.೦೫.

೨೮. ಮಂಜುನಾಥ ಬೇವಿನಕಟ್ಟಿ, ಜಾನಪದ ಉತ್ಪನನ, ಪು.೪೫.

# ಅಧ್ಯಾಯ - ೩

## ಚೇಳಗುರಿಕೆ ಎರ್ರಿತಾತ : ನಂಬಿಕೆ-ಆಚರಣೆಗಳು

೩.೧. ನಂಬಿಕೆ-ಆಚರಣೆಗಳ ಪರಿಕಲ್ಪನೆ

೩.೨. ಜೀವನಾವರ್ತನ ಆಚರಣೆಗಳು

೩.೩. ವಾರ್ಷಿಕಾವರ್ತನ ಆಚರಣೆಗಳು

## ಚೀಳಗುರಿಕೆ ಎರ್ರಿತಾತ: ನಂಬಿಕೆ-ಆಚರಣೆಗಳು

### ೩.೧. ನಂಬಿಕೆ ಆಚರಣೆಗಳ ಪರಿಕಲ್ಪನೆ

ನಂಬಿಕೆಗಳು ಬದುಕಿನ ಬಹುದೊಡ್ಡ ಆಧಾರಸ್ತಂಭಗಳು. ನಿರಂತರವಾಗಿ ನಿಸ್ಸಂದೇಹಗಳನ್ನು ದೂರಸರಿಸಿ, ಸಾರ್ಥಕತೆಯ ಜೀವನದ ಸಾರವನ್ನು ಸವಿಯಲು ಸಹಕಾರಿಯಾಗುತ್ತವೆ. ಮಾನವ ಸಮಾಜದ ಅಸ್ತಿತ್ವಕ್ಕೆ ಕಾರಣವಾದ ನಂಬಿಕೆಗಳು ಒಂದು ಕಡೆ ನೆಲೆನಿಲ್ಲದೆ ಕಾಲ ದೇಶಗಳ ಪರಿಮಿತಿಯನ್ನು ದಾಟುವ ಪ್ರತೀಕಗಳಾಗಿವೆ. ನಂಬಿಕೆ ಕೆಲವೊಮ್ಮೆ ರಕ್ಷಣೆಯನ್ನು ಒದಗಿಸಿ ಭಾತೃತ್ವವನ್ನು ನಿವೇದಿಸುತ್ತದೆ. ಮಾನವ ತನ್ನ ಉಳಿವಿಗಾಗಿ ಕೆಲವೊಂದು ನಂಬಿಕೆಗಳನ್ನು ರೂಢಿಸಿಕೊಂಡಿದ್ದಾನೆ. ಜೀವನದ ವಿವಿಧ ಹಂತಗಳಲ್ಲಿ ಈ ನಂಬಿಕೆಗಳು ಬಳಕೆಯಾಗುತ್ತಾ ಹೋಗುತ್ತವೆ. ವ್ಯಕ್ತಿಯ ಮನೋಭಾವ ಹೇಗಿರುತ್ತದೆಯೋ ಹಾಗೆಯೇ ನಂಬಿಕೆಗಳು ಜನತೆಯಲ್ಲಿ ಜನರಲ್ಲಿ ಪ್ರಭಾವ ಬೀರಬಲ್ಲವು. ನಂಬಿಕೆಯು ಒಂದು ಮಾನಸಿಕ ಸ್ಥಿತಿ, ಇದು ಸಾಂಪ್ರದಾಯಿಕವಾಗಿ ಅಂಗೀಕೃತವಾದ ಒಂದು ಪರಿಕಲ್ಪನೆಯಾಗಿದ್ದು, ಸಾಮಾನ್ಯವಾಗಿ ಅದು ಕಾರಣ ಮತ್ತು ಪರಿಣಾಮದ ಸಂಬಂಧವನ್ನು ಹಾಗೂ ಭೂತ, ವರ್ತಮಾನದ ಮತ್ತು ಭವಿಷ್ಯತ್ತಿನ ಸಂಗತಿಗಳನ್ನು ಸಂಪಾದಿಸಿಕೊಳ್ಳುತ್ತಾ ಹೋಗುತ್ತದೆ. ಕೆಲವು ಸಾರಿ ವ್ಯಕ್ತಿಯ ಬದುಕಿನಲ್ಲಿ ಶ್ರದ್ದೆಯನ್ನುಂಟು ಮಾಡುತ್ತದೆ. ನಂಬಿಕೆಗಳನ್ನು ಗಮನಿಸಿದಾಗ ಒಂದು ರೀತಿಯಲ್ಲಿ ದೈನಂದಿನ ಬದುಕಿನ ಸಮಸ್ಯೆಗಳನ್ನು ನಿವಾರಿಸಲು ಬಳಸುವ ವಿಧಾನಗಳಂತದ್ದು, ಪ್ರತಿಯೊಂದು ಕೆಲಸಕಾರ್ಯ, ಆಲೋಚನೆ, ಸಂಪ್ರದಾಯ, ರೂಢಿ ಜೀವನ ಕ್ರಮಗಳೆಲ್ಲವೂ ನಂಬಿಕೆಗಳಿಂದ ಆಧಾರಪಡೆದಿವೆ.

ನಂಬಿಕೆ ಎನ್ನುವ ಪದವನ್ನು ವಿದ್ವಾಂಸರು ವಿವರಿಸುವಾಗ ಕೆಲವು ವಿವರಣೆಗಳು ಮನುಷ್ಯನ ಮಾನಸಿಕ ಪರಿಣಾಮಗಳನ್ನು ಗುರುತಿಸಿದರೆ ಮತ್ತೆ ಕೆಲವು ಬೌದ್ಧಿಕತೆಗೆ ಒತ್ತು ಕೊಟ್ಟಿವೆ. ಇನ್ನು ಕೆಲವು ವಿವರಣೆಗಳು ಮನುಷ್ಯಗ್ರಹಿಕೆಯ ಶಕ್ತಿಗೆ ಒತ್ತುಕೊಟ್ಟಿವೆ.

#### ಕನ್ನಡ ವಿಶ್ವಕೋಶ

ಸಾಮಾನ್ಯವಾಗಿ ಯಾವುದಾದರೂ ಪ್ರಮೇಯ ಹೇಳಿಕೆ ಅಥವಾ ಸತ್ಯಾಂಶವನ್ನು ನಿಜವೆಂದು ಭಾವಿಸಿ, ಸ್ವೀಕರಿಸುವುದು ನಂಬಿಕೆ. ಇದು ವ್ಯಕ್ತಿ ಅಥವಾ ತತ್ವಶಾಸ್ತ್ರಕ್ಕೂ ಅನ್ವಯಿಸುತ್ತದೆ.

According to staandard dictionary of Folklore mythodology and legend voll:

Traditionally accepted concept of ten of a cause and effect Relationship past preset of future accepted as a result of respected and collective observation of Finally of Faith.

**ಹ್ಯೂಮ್**

ಮನುಷ್ಯನಿಗೆ ವಿಚಾರಮಾಡುವ ಶಕ್ತಿಯಿರುವುದರಿಂದ ಅವನು ಹೊಸ ಹೊಸ ಕಲ್ಪನೆಗಳನ್ನು ಕಟ್ಟುತ್ತಾನೆ. ಭಾವನೆಗಳನ್ನು ಹೊಸೆಯುತ್ತಾನೆ. ಅವು ಆತನ ಭಾಷೆ ಅಭಿವ್ಯಕ್ತಿಗೊಂಡಾಗ ಸಹಜವಾಗಿ ಹೊರಬೀಳುತ್ತವೆ. ಇಂಥ ವಿಶಿಷ್ಟ ರೀತಿಯ ಭಾವನೆಗಳೇ ಜನಪದ ನಂಬಿಕೆಗಳು.

**Bible:**

Where the is Faith

There is Glory

ಎಲ್ಲಿ ನಂಬಿಕೆಯಿರುತ್ತದೆಯೋ ಅಲ್ಲಿ ಅಸಾಧ್ಯವಾದ ಕಾರ್ಯಗಳು ಸಾಧ್ಯವಾಗಿಸುತ್ತವೆ.

**ರಾಗೌ ಮತ್ತು ವಸಂತಕುಮಾರ ಎಂ.ಸಿ.**

ನಂಬಿಕೆ ಒಂದು ಮಾನಸಿಕ ಸ್ಥಿತಿ. ಪರಂಪರಾಗತವಾಗಿ ಸ್ವೀಕೃತವಾದ ಒಂದು ಭಾವರೂಪ. ಪುನರಾವರ್ತಿತ ಹಾಗೂ ಸಂಪ್ರದಾಯಿಕ ಅಭಿಪ್ರಾಯೋಕ್ತಿ. ವಸ್ತು ಸ್ಥಿತಿಯೊಡನೆ ಅವೈಜ್ಞಾನಿಕವಾದ ಸಂಬಂಧವುಳ್ಳ ಹೇಳಿಕೆ ಇದರಲ್ಲಿ ಮಾತು ಒಂದು ಭಾಗ, ಕ್ರಿಯೆ ಒಂದು ಭಾಗ ಇವುಗಳ ಅವರ ವಿಚಿತ್ರಮಯ ಜೀವನಕ್ಕೆ ಬರೆದಿಟ್ಟ ಸಚಿತ್ರ ಶಾಸನಗಳಾಗಿವೆ.

ನಂಬಿಕೆಯು ಭೌತಿಕ ಹಾಗೂ ಬೌದ್ಧಿಕ ಸ್ಥಿತಿಯಾಗಿದ್ದು, ಅದು ಮಾನಸಿಕ ಒಪ್ಪಿಗೆಯ ಒಂದು ಚೌಕಟ್ಟನ್ನು ಒದಗಿಸುತ್ತದೆ. ಪರಂಪರಾಗತವಾಗಿ ನಂಬಿ ಅದರಂತೆ ನಡೆದುಕೊಂಡು ಬಂದಿರುವ ಭಾವರೂಪ. ಇದು ಸೂಚನೆ, ನಿರ್ದೇಶನ, ಆಗ್ರಹ ಮತ್ತು ನಿಷೇಧರೂಪದ ಒಂದು ಹೇಳಿಕೆ. ನಂಬಿಕೆಗಳಿಂದ ಜನರು ಒಬ್ಬರಿಂದ ಇನ್ನೊಬ್ಬರಲ್ಲಿ ಬಾಯಿಂದ ಬಾಯಿಗೆ, ಕಿವಿಯಿಂದ ಕಿವಿಗೆ ಹೇಳಿ ನಡೆಯಲ್ಲಿ ತಂದರು. ಮುಂದಿನವರು ಅವುಗಳನ್ನು ಕಣ್ಣಾರೆ ಕಂಡು ಸುಖದ ಆಸೆ ತಾಳಿಯೇ, ಮನಸ್ಸಿನ ಸಮಾಧಾನಕ್ಕೆ ಅನುಸರಿಸಿದರು.

ನಂಬಿಕೆಯು ಒಂದು ರೀತಿಯಲ್ಲಿ ಸೂಚನೆ, ನಿಯಮ, ನಿಷೇಧ ನಿರ್ದೇಶನ, ಆಗ್ರಹ, ಆದೇಶ ಮತ್ತು ಆಜ್ಞೆಗಳ ರೂಪಕ ಒಂದು ಹೇಳಿಕೆಯಾಗಿದೆ.

ಈ ಹೇಳಿಕೆಯನ್ನು ಜನರು ಅನುಸರಿಸುತ್ತಾರೆ. ಹಾಗೆಯೇ ನಡೆದುಕೊಳ್ಳುತ್ತಾರೆ. ಆದರೆ ಈ ನಡುವಳಿಕೆಯ ಪ್ರಜ್ಞಾಪೂರ್ವಕವಾಗಿರಬಹುದು ಅಥವಾ ಅಪ್ರಜ್ಞಾಪೂರ್ವಕವಾಗಿರಬಹುದು. ಅದು ಮನುಷ್ಯ ಧೋರಣೆ ವಿಶ್ವಾಸಕ್ಕೆ ಸಂಬಂಧಿಸಿದ್ದು. ನಂಬಿಕೆಯು ನಿಜವಾಗಿರಬಹುದು ಅಥವಾ ಸುಳ್ಳಾಗಿರಬಹುದು.

ಅದು ಮನಸ್ಸಿನ ವೈಯಕ್ತಿಕ, ಕೆಲವೊಮ್ಮೆ ಸಾಮೂಹಿಕವಾಗಿರುತ್ತದೆ. ನಂಬಿಕೆ ಜ್ಞಾನಕ್ಕಿಂತ ಭಿನ್ನವಾಗಿದ್ದು, ಸರ್ವಕ್ಷೇತ್ರಗಳಲ್ಲಿ ಅದನ್ನೇ ಕಾಣಬಹುದಾಗಿದೆ. ಇದು ಒಂದು ರೀತಿಯ ಆತ್ಮ ವಿಶ್ಲೇಷಣಾತ್ಮಕ ಬುದ್ಧಿಪೂರ್ವಕವಾದ ಕ್ರಿಯೆಯಾಗಿದೆ. ವ್ಯಕ್ತಿಯ ಅನುಭವಗಳ ವಾಸ್ತವಿಕತೆ ಮತ್ತು ಮೌಲ್ಯಗಳ ಇಲ್ಲವೇ ದೇಹಧೋರಣೆಗಳ ಒಂದು ಸ್ಥಿತಿ ಎಂಬುದು ತಿಳಿಯುತ್ತದೆ.

ನಂಬಿಕೆಗಳು ಭಯ ಮತ್ತು ಭಾವನಾತ್ಮಕತೆಯ ಹಿನ್ನೆಲೆಯಲ್ಲಿ ಬಂದಿದ್ದು ಅವು ಕಲ್ಪನೆಯ ಕಥೆಗಳ ಮೇಲೆ ಹುಟ್ಟಿರಬಹುದು. ನೈಸರ್ಗಿಕ ಚೇಷ್ಟೆಗಳ ಬಗೆಗೆ ತಳೆದ ಮನೋಭಾವ ಆಗಿರಬಹುದು. ಇದರ ಜೊತೆಗೆ ಭಯ, ಭರವಸೆ, ಪೂರ್ವಗ್ರಹ, ಭಾವೋದ್ರೇಕ, ಅನುಕರಣೆ ಜಾತಿ ಅಥವಾ ವರ್ಗದ ಒತ್ತಾಯದ ಭಾಗವಹಿಸುವಿಕೆಯ ಮುಖಾಂತರ ಹೀಗೆ ಹಲವಾರು ಕಾರಣಗಳಿಂದ ನಂಬಿಕೆ ಹುಟ್ಟಿರಬಹುದು. ಪ್ರತಿಯೊಂದು ಸಮಾಜವು, ಸಮುದಾಯವು ತನ್ನದೇ ಆದ ನಂಬಿಕೆಗಳನ್ನು ಆಚರಣೆಯಲ್ಲಿಟ್ಟುಕೊಂಡು ಬಂದಿದೆ. ಕಾಲ ದೇಶಗಳಿಗೆ ಅನುಗುಣವಾಗಿ ಅವು ಬದಲಾಗುತ್ತಿರುತ್ತವೆ. ನಂಬಿಕೆಗಳು ಮನಶಾಸ್ತ್ರೀಯ ಗುಣ, ವಾಸ್ತವಿಕತೆಯ ಅರಿವು, ಸಾಂಸ್ಕೃತಿಕ ಅಭಿವ್ಯಕ್ತಿ, ಸಾರ್ವತ್ರಿಕತೆ ಮತ್ತು ಪ್ರಾದೇಶಿಕತೆಯ ಹಿನ್ನೆಲೆಯಲ್ಲಿ, ಪ್ರಾಚೀನತೆಯ ಹಿನ್ನೆಲೆಯಲ್ಲಿ ಅನುಭವ ಮಾನಸಿಕ ಅನುಭಾವಗಳ ಮಿಳಿತ, ನೆಚ್ಚಿಕೆಯ ಮಾನಸಿಕಸ್ಥಿತಿ, ಧಾರ್ಮಿಕ ಮನೋಧರ್ಮವಾಗಿ, ಜೀವನ ನಿಯಂತ್ರಣವಾಗಿ ಇವು ಭಾಗಿಯಾಗಿದ್ದು ಹಲವು ರೀತಿಯ ಒತ್ತಡಗಳನ್ನು ನಿರ್ಲಿಪ್ತಗೊಳಿಸುವ ಮತ್ತು ಆತಂಕಗಳಿಂದ ಪಾರು ಮಾಡಲು ನಂಬಿಕೆಗಳು ಸಹಕಾರಿಯಾಗಿವೆ.

ಜನಪರ ನಂಬಿಕೆಯು ಪರಂಪರಾಗತವಾಗಿ ಅಂಗೀಕೃತವಾದ ಒಂದು ಪರಿಕಲ್ಪನೆ. ಹೀಗೆ ನಂಬಿಕೆಗಳು ಅಂಗೀಕೃತವಾಗುವಲ್ಲಿ ಪುನರಾವರ್ತನೆ ಹಾಗೂ ಸಾಮೂಹಿಕ ನಿರೀಕ್ಷೆಗಳು ಮುಖ್ಯವಾಗುತ್ತವೆ. ನಂಬಿಕೆಯು ಜನಪದರ ಜೀವನಾನುಭವದ ಉತ್ಪನ್ನ. ಮಾನವನ ಬದುಕಿಗೂ ನಂಬಿಕೆಗೂ ಬಿಡಿಸಲಾಗದ ಸಂಬಂಧ. ಈ ನಂಬಿಕೆ ಮಾನವನ ಬದುಕಿಗೆ ಸೂಚನೆ, ನಿಯಮ, ಆಜ್ಞೆ, ನಿರ್ದೇಶನ, ಆದೇಶ, ನಿಷೇಧ ಹಾಗೂ ನಿರ್ದೇಶನ ರೂಪದಲ್ಲಿ ನಿತ್ಯ ಬದುಕಿನೊಂದಿಗೆ ಸಂಬಂಧವನ್ನೇರ್ಪಡಿಸಿದೆ. ಜನಪದ ಕೆಲಸ, ಆಲೋಚನೆ, ಜೀವನಕ್ರಮ, ಆಚರಣೆ, ಸಂಪ್ರದಾಯಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಪ್ರೇರಿತವಾದವುಗಳು. ನಂಬಿಕೆಯು ಸಾಹಿತ್ಯೇತರ ಜನಪದ ಪ್ರಕಾರವಾಗಿ, ಬದುಕಿನಲ್ಲಿ ಆಕಸ್ಮಿಕ ಒಂದು ಘಟನೆ ಅಥವಾ ವಸ್ತು ಸಂಗತಿ ಮತ್ತೇ ಮತ್ತು ಪುನರಾವರ್ತನೆಗೊಂಡಾಗ ಅದು ನಂಬಿಕೆಯಾಗಿ ನಿರೀಕ್ಷೆಯನ್ನು ಹುಟ್ಟಿಸುತ್ತದೆ.

"ನಂಬಿಕೆ, ಸಂಪ್ರದಾಯ ಎರಡು ಕವಲಾಗಿ ಒಡೆಯುತ್ತದೆ. ಒಂದು ರಾಜಕೀಯ, ಮತ್ತೊಂದು ಸಾಮಾಜಿಕ ಧಾರ್ಮಿಕ. ಮೊದಲನೆಯದು ಕಾನೂನುಶಾಸ್ತ್ರವಾಗಿ ವಿಕಾಸಗೊಂಡರೆ, ಎರಡನೆಯದು ನೀತಿಶಾಸ್ತ್ರವಾಗಿ ಅರಳುತ್ತದೆ. ಗುರು-ಹಿರಿಯರು, ತಂದೆ-ಮಕ್ಕಳು ಹಾಗೂ ವ್ಯವಹಾರಗಳಿಗೆ ಸೇರುವ ಸಂಪ್ರದಾಯಗಳು ನೈತಿಕಕ್ಷೇತ್ರದ ಪರಿಧಿಯಲ್ಲಿ ಸಮಾವೇಶಗೊಳ್ಳುತ್ತವೆ. ಈ ನಂಬಿಕೆ ಸಂಪ್ರದಾಯಗಳು ಸಾಮಾಜಿಕ ಮತ್ತು ಕೌಟುಂಬಿಕ ಮೌಲ್ಯಗಳು ನಂಬಿಕೆಗಳ ಮೂಲಕ ವ್ಯಕ್ತವಾಗುತ್ತವೆ. ಅವು ಸಮಾಜದ ಅವಲಂಬಿತ ಶಾಸನಗಳು. ಇವು ಲಿಖಿತ ಶಾಸನಗಳಿಗಿಂತ ಬೆಲೆಯುಳ್ಳವು. ಅವುಗಳ ಬೆಲೆ ಅಮೇಯವಾದುದು.

ಮನುಧರ್ಮಶಾಸ್ತ್ರ ಯಾವುದು? ನಂಬಿಕೆಗಳ ಸಂಗ್ರಹ ಸಮರ್ಪಕವಾಗಿಲ್ಲದಿರಬಹುದು. ಅದರಲ್ಲಿ ನ್ಯೂನತೆಗಳೂ ಇರಬಹುದು, ಪಕ್ಷಪಾತದಿಂದ ಕೂಡಿರಬಹುದು. ನಂಬಿಕೆಗಳು ನಿಂತ ಮಡುವಲ್ಲ, ಹರಿಯುವ ನದಿ ಎನ್ನುವುದನ್ನು ಗಮನಿಸಬೇಕು. ಅವೂ ಕಾಲಕ್ಕೆ ತಕ್ಕಂತೆ ಬದಲಾಯಿಸುತ್ತವೆ. ಸಮಾಜದಲ್ಲಿ ನೀತಿಧರ್ಮ ಉಳಿದಿರುವುದು, ಈ ನಂಬಿಕೆಗಳಿಂದ ಎಂಬುದು ದೇ.ಜವರೇಗೌಡರ ಅಭಿಪ್ರಾಯವಾಗಿದೆ. (ಜವರೇಗೌಡ ದೇ: ಜಾನಪದ ಅಧ್ಯಯನ ಚರಿತ್ರೆ, ಪು.೩೨೧).

ಕೆಲವೊಮ್ಮೆ ಕೇಳಿ, ನೋಡಿ ನಂಬುತ್ತೇವೆ, ಆದರೆ ಕೆಲವು ಸಾರಿ ನೋಡದೆ ನಂಬುತ್ತೇವೆ. ಕಾರಣ ನಂಬಿಕೆಗೆ ಮನಸ್ಸು ತಕ್ಷಣವೇ ಸ್ವೀಕೃತಗುಣವನ್ನು ಪಡೆದುಕೊಳ್ಳುತ್ತದೆ. ನೋಡಿ ನಂಬುವವನಿಗಿಂತ ನೋಡದೆ ನಂಬುವವನು ಧನ್ಯನು. (ಸತ್ಯವೇದ ಹೊಸ ಒಡಂಬಡಿಕೆ) ಇಲ್ಲಿ ಎಲ್ಲವನ್ನು ಕೇವಲ ಅಪನಂಬಿಕೆಯಿಂದ ನೋಡಿದರೆ ಯಾವ ಪ್ರಯೋಜನವೂ ಇಲ್ಲ ಎಂಬುದು ತಿಳಿದುಬರುತ್ತದೆ.

ಹೀಗೆ ಚೇಳಗುರಿಕೆ ಎರ್ರಿತಾತನ ಕುರಿತು ಜನಪದರಲ್ಲಿ ಹೆಚ್ಚು ನಂಬಿಕೆಗಳಿವೆ. ಗ್ರಾಮದವರಷ್ಟೇ ಅಲ್ಲ ಸುತ್ತಮುತ್ತಲಿನ ಬಹುತೇಕ ಗ್ರಾಮಸ್ಥರು ತಾತನ ಮಠಕ್ಕೆ ಬಂದು ಇಂಥದ್ದು ಮಾಡಿದರೆ ಇಂಥ ಹರಕೆಯನ್ನು ಸಲ್ಲಿಸುತ್ತೇನೆ ಎಂಬಂತಹ ನಂಬಿಕೆಗಳು ಹೆಚ್ಚು ಪ್ರಚಲಿತದಲ್ಲಿವೆ. ವಾರ ವಾರ, ಅಮವಾಸ್ಯೆ ಅಮವಾಸ್ಯೆಗೆ ಬಂದು ಹೋಗುವುದರಿಂದ, ರೋಗ, ದೆವ್ವ ಪೀಡೆಗಳು, ಕನವರಿಕೆಗಳು, ಬಂಜೆತನ ನಿವಾರಣೆ ಮುಂತಾದ ಆಂತರ್ಯದ ತುಮುಲಗಳೊಂದಿಗೆ ಮಠಕ್ಕೆ ಅನೇಕ ಭಕ್ತ ಸಮೂಹವೇ ಹರಿದು ಬರುವುದು ಸಾಕ್ಷಿಯಾಗಿದೆ. ಆತನ ಜೀವ ಸಮಾಧಿ ಕ್ಷೇತ್ರದಲ್ಲಿ ನಿದ್ದೆ ಮಾಡಿದರೆ ಸಾಕು ಭವದ ಬಂಧನವು ಮಾಯವಾಗುತ್ತದೆ ಎನ್ನುವ ನಂಬಿಕೆಯು ಜನಮನದಲ್ಲಿ ಬೇರೂರಿದೆ. ಈ ರೀತಿಯ ಕಷ್ಟಗಳು ತೀರಿಹೋದಾಗ ಮಠಕ್ಕೆ ಕಾಣಿಕೆ ನೀಡುವುದು, ದಾಸೋಹದ ವ್ಯವಸ್ಥೆ ಮಾಡಿಸುವುದರಲ್ಲಿ ಹಾಗೂ ದವಸ-ಧಾನ್ಯಗಳನ್ನು ಅರ್ಪಿಸಿ ತಮ್ಮ ನಂಬಿಕೆಗೆ ಪುಷ್ಟೀಕರಿಸಿಕೊಂಡ ಭಕ್ತರು ಅದೆಷ್ಟೋ ಜನ.

ಸಾಲ ಸಂಕಷ್ಟಗಳು, ವಿದ್ಯಾಭ್ಯಾಸ, ಮಾಟ ಮಂತ್ರಗಳ ಪೀಡನೆ ಮುಂತಾದ ಕ್ರಿಯಾವಿಭಜನೆಗಳಿಗೆ ಸಾಧು ಸಂತರ, ಅಸಾಮಾನ್ಯ ಪುರುಷರ ಮೊರೆ ಹೋಗುವುದು ಕೇವಲ ನಂಬಿಕೆಯಿಂದಲೇ ಆಗಿರುತ್ತದೆ. ಅನಾನುಕೂಲ ಪರಿಸ್ಥಿತಿಯನ್ನು ಸೋಲಿನಭೀತಿಯನ್ನು ದೂರ ಮಾಡುತ್ತದೆ. ಅದೃಷ್ಟ ಒಲಿದರೆ ಎಂಬ ನಂಬಿಕೆ ಒಮ್ಮೊಮ್ಮೆ ಮಾನವನನ್ನು ಎಚ್ಚರಿಸುವಂತೆ ಮಾಡಿಬಿಡುತ್ತದೆ.

ನಿರ್ಲಿಪ್ತ ಸ್ಥಿತಿಯಲ್ಲಿದ್ದ ಮನುಷ್ಯನ ಬದುಕಿಗೆ ಆಶಾಕಿರಣವಾಗಿ ಒಮ್ಮೊಮ್ಮೆ ಬಹುತ್ವದ ಬದಲಾವಣೆಗಳನ್ನು ತರುತ್ತದೆ. ಏಕಮುಖಿಯಾದ ಧೋರಣೆಯಿದ್ದರು ಅದು ಸಾಮಾಜಿಕ ಸ್ಥಿತಿನಿಯಂತ್ರಣಕ್ಕೆ ಪೂರಕವೆಂಬಂತೆ ಕಾರ್ಯನಿರ್ವಹಿಸುತ್ತದೆ. ಹಾಗಾಗಿಯೇ ನಂಬಿಕೆ ಎನ್ನುವುದು ನಾವು ನಿರೀಕ್ಷಿಸುವ ವಿಷಯಗಳಲ್ಲಿ ಭರವಸೆಯಿಂದಿರುವುದು ಆಗಿದೆ. ಮನಸ್ಥಿತಿ ಸ್ಥೈರ್ಯ ಹಾಗೂ ಸ್ಥಿಮಿತಕ್ಕೆ ಬಹುದೊಡ್ಡ ಲಾಭವಾಗಿ ನಂಬಿಕೆ ನಿಲ್ಲುತ್ತದೆ. ಮೇಲೆ ತಿಳಿಸಿದಂತೆ ಸಮಾಜದ ವ್ಯಕ್ತಿ ಸ್ಥಿತಿಯ ಕುರಿತ ಪರಿಕಲ್ಪನಾತ್ಮಕ ಪರಿಚಲನೆಯನ್ನು ಪಡೆದು ಆದೇಶ ಹಾಗೂ ನಿರ್ದೇಶನಗಳಿಂದ ಬದುಕಿನ ಒಳಿತಿಗೆ ಸಮಾಜ ಮುಖಿಯಾದ

ಚಿಂತನೆಯನ್ನು ನೀಡಿ ಆ ಮೂಲಕ ಬದಲಾವಣೆಯ ಗಾಳಿಯನ್ನು ಈ ನಂಬಿಕೆಯು ಪ್ರೇರೇಪಿಸುವಂತೆ ಮಾಡುತ್ತದೆ.

**ಆಚರಣೆಗಳು**

ಮತಧರ್ಮಗಳಿಗೆ ಸಂಬಂಧಿಸಿದಂತೆ ನಡೆಸುವ ಕ್ರಿಯೆ ಹಾಗೂ ವಿಧಿಗಳಿಗೆ ನಾವು ಆಚರಣೆ ಎನ್ನಬಹುದು. ಆಚರಣೆ ಒಂದು ಸಂಸ್ಕೃತಿಯ ಪ್ರತಿಬಿಂಬ. ಒಂದು ಸಂಸ್ಕೃತಿಯನ್ನು ಅರಿತುಕೊಳ್ಳಬೇಕಾದರೆ ಆ ಸಂಸ್ಕೃತಿಗೆ ಸಂಬಂಧಿಸಿದ ಆಚರಣೆಯನ್ನು ಕೂಲಂಕುಷವಾಗಿ ತಿಳಿದುಕೊಳ್ಳುವ ಅಗತ್ಯವಿದೆ. ಆಚರಣೆಗಳು ಕಾಲದಿಂದ ಕಾಲಕ್ಕೆ ವ್ಯಕ್ತಿಯಿಂದ ವ್ಯಕ್ತಿಗೆ ಹರಿದು ಬಂದು ಆಚರಿಸಲ್ಪಡುತ್ತವೆ. ಜನಪದ ಧರ್ಮ, ನಂಬಿಕೆ, ಪುರಾಣಕಲ್ಪನೆ ಇವುಗಳೆಲ್ಲವೂ ಆಚರಣೆಯ ಆಧಾರದಿಂದಲೇ ಇಂದಿನವರೆಗೂ ನಡೆದುಕೊಂಡು ಬಂದಿವೆ. ಆಚರಣೆ ಎಂದರೆ ಅನುಸರಿಸುವುದು, ಆಚರಿಸುವುದು, ಸಂಪ್ರದಾಯದಂತೆ ನಡೆಯುವುದು ಎಂಬಂತಹ ಅರ್ಥವನ್ನು ಕೊಡುತ್ತದೆ.

ಇಂದಿನದು ವೈಜ್ಞಾನಿಕಯುಗ. ವಾಜಿಯ ವೇಗದಲ್ಲಿ ಹೊರಟ ಆಧುನಿಕ ಮಾನವನ ವಿಚಾರಧಾರೆ ಪ್ರತಿಯೊಂದು ವಿಷಯವನ್ನು ವೈಜ್ಞಾನಿಕ ಒರೆಗಲ್ಲಿಗೆ ಉಜ್ಜಿನೋಡುವ ಚಿಕಿತ್ಸಕ ಬುದ್ಧಿ. ಇವೆಲ್ಲ ಇಮ್ಮಡಿಸಿದರೂ ಮೂಲಭೂತವಾಗಿ ಮಾನವನ ಮನವನ್ನಾವರಿಸಿದ ಅಂಧಶ್ರದ್ಧೆ, ಮೂಢನಂಬಿಗೆಗಳು ಅರ್ಥಹೀನ ಸಂಪ್ರದಾಯ, ಆಚರಣೆಗಳು, ಧರ್ಮದ ಹೆಸರಿನಲ್ಲಿ ಇನ್ನೂ ಮರೆಯಾಗಿಲ್ಲ. ಇವು ಸಾಮಾನ್ಯ ಜನತೆಯಲ್ಲಿ ರಕ್ತಗತವಾಗಿ ಮತ್ತು ಆಳವಾಗಿ ಬೇರುಬಿಟ್ಟಿವೆ. ಅವುಗಳು ಧಾರ್ಮಿಕ ಭಾವನೆಗಳನ್ನು ಉದ್ದೇಶಿಸಿ, ಭಕ್ತಿ ಭಾವವನ್ನು ಪೋಷಿಸಿ, ನೈತಿಕ ಸತ್ವವನ್ನಾವಾಹಿಸಿ, ಮರ್ತ್ಯದಲ್ಲಿ ಅಮರ್ತ್ಯವನ್ನು ಕಾಣಿಸಿ ಸರ್ವತ್ರ ಧಾರ್ಮಿಕ ವಾತವರಣವನ್ನು ನೆಲೆಗೊಳಿಸುವುದೇ ಈ ಆಚರಣೆಗಳಿಂದ. ವ್ಯಷ್ಟಿ ಹಾಗೂ ಸಮಷ್ಟಿ ಹಿತಗಳನ್ನು ಏಕ ಕಾಲದಲ್ಲಿ ಸಾಧಿಸಿದಂತೆ ಭಾಸವಾಗುತ್ತದೆಯೇ ಹೊರತು ಬಿಡುಗಡೆಯ ಹಾದಿಯಿಂದ ಬಹುಬೇಗನೆ ಹಿಂದಕ್ಕೆ ಹಿಡಿದುಕೊಳ್ಳುತ್ತವೆ. ಅವುಗಳು ಅನಿಷ್ಟವಂತಿಕೆಯ ನಿವಾರಕಗಳು ಫಲವಂತಿಕೆಯ ಸಂಕೇತವಾಗಿ ಕಂಡರೂ ಒಮ್ಮೊಮ್ಮೆ ಮಾನವನನ್ನು ದಿಗಿಲು ಮುಗಿಲನ್ನಾಗಿಸಿ ಬಂಧಿಸಿಬಿಡುತ್ತವೆ.

"ಎಲ್ಲ ಧರ್ಮ ಹಾಗೂ ಪಂಥಗಳಲ್ಲೂ ತತ್ವ ಹಾಗೂ ಆಚರಣೆಗಳ ನಡುವೆ ಬಿರುಕು ಇದ್ದೇ ಇರುತ್ತದೆ. ಇದಕ್ಕೆ ಕಾರಣ ಮೂಲದರ್ಶನಕ್ಕೆ ಬೇರೆ ಬೇರೆ ಕಾಲಘಟ್ಟಗಳಲ್ಲಿ ಉಂಟಾಗುವ ಸೇರ್ಪಡೆಗಳು, ಹೊಸ ಚಾರಿತ್ರಿಕ ಸನ್ನಿವೇಶಗಳು ಮೂಲದರ್ಶನವನ್ನು ವರ್ತಮಾನದ ಅಗತ್ಯಕ್ಕೆ ತಕ್ಕಂತೆ ಬದಲಾಯಿಸಿಕೊಳ್ಳಲು ಒತ್ತಡ ಹಾಕುತ್ತವೆ. ಹೀಗೆ ಸೇರಿಸುವಿಕೆ, ಬದಲಿಸುವಿಕೆಗಳು ನಿರಂತರ ನಡೆಯುತ್ತ ಪಂಥವೊಂದರ ದರ್ಶನವು ಪರಿವರ್ತನೆ ಪಡೆಯುತ್ತ ಹೋಗುತ್ತದೆ" (ರಹಮತ್ ತರೀಕೆರೆ: ಕರ್ನಾಟಕದ ನಾಥಪಂಥ ಪು.೨೮)

ಆಚರಣೆಗಳು ಭಾವನಾತ್ಮಕ ಸಂಬಂಧಗಳನ್ನು ಗಟ್ಟಿಗೊಳಿಸುತ್ತಾ ಕೇಂದ್ರಿತ ನೆಲೆಗಳಲ್ಲಿ ಮನುಷ್ಯನನ್ನು ಕಟ್ಟಿಹಾಕುತ್ತವೆ. ಆಚರಣೆಗಳಿಂದ ಸಂಪ್ರದಾಯಬದ್ಧವಾದ ಜಾತಿಶೋಷಣೆ, ದೇವಾಲಯಗಳ ಪ್ರವೇಶಿಕೆಗೆ ತೊಡಕು ಹಾಗೂ ಸಾಮಾಜಿಕ ಅಸ್ತಿತ್ವದ ಅಲುಗಾಡುವಿಕೆಗೆ ನಾಂದಿಯಾಗಿಬಿಡುತ್ತವೆ. ಆಚರಣೆಗಳಲ್ಲಿ

ಜೀವಂತಿಕೆಯ ಲಕ್ಷಣಗಳು ಕಂಡುಬರುತ್ತವೆ ನಿಜ, ಆದರೆ ಕೆಲವು ವೇಳೆ ಅವು ಸಮ್ಮತವಾದಂತೆ ಕಂಡು ಬರುಬರುತ್ತಾ ನಿರ್ಲಿಪ್ತತೆಯನ್ನುಂಟು ಮಾಡುತ್ತವೆ. ಆಚರಣೆಯಲ್ಲಿ ವೈಯಕ್ತಿಕ ಆಚರಣೆಗಳು, ಕೌಟುಂಬಿಕ ಆಚರಣೆಗಳು, ಸಾಮೂಹಿಕ ಆಚರಣೆಗಳು, ಸಾಮಾಜಿಕ ಆಚರಣೆಗಳು, ವ್ಯವಸಾಯಾತ್ಮಕ ಆಚರಣೆಗಳು, ಧಾರ್ಮಿಕ ಆಚರಣೆಗಳು ವಿವಿಧ ಆಚರಣಾ ಪದ್ಧತಿಗಳು ಇಂಡಿಯಾದ ಸಂಸ್ಕೃತಿಯೊಳಗೆ ಬೆರತುಕೊಂಡಿವೆ.

ವೈಯಕ್ತಿಕ ಕಾರಣದಿಂದ ಅಂದರೆ ವ್ಯಕ್ತಿಗತ ನಂಬಿಕೆಯಿಂದ ನಡೆಯುವ ಆಚರಣೆಗಳಾಗಿದ್ದು, ಬಾಯಿಬೀಗ ಹಾಕುವುದು, ಕೊಂಡ ಹಾಯುವುದು ಮುಂತಾದವುಗಳು. ಕುಟುಂಬದ ಯೋಗಕ್ಷೇಮದ ಕಾರಣಕ್ಕಾಗಿ ಮುಡಿಕೊಡುವುದು ಕೌಟುಂಬಿಕ ಆಚರಣೆಗೆ ಸಂಬಂಧಿಸಿದ್ದು. ವರ್ಣ ಸಂಬಂಧಿ ಆಚರಣೆಗಳೇ ಇಲ್ಲಿ ಮುಖ್ಯವಾಗಿ ಬಿಡುತ್ತವೆ. ಬಹುತೇಕ ಆಚರಣೆಗಳಿಗೆ ಹರಕೆ ಹಾಗೂ ನಂಬಿಕೆಗಳು ಮೂಲ ಕಾರಣವಾಗಿವೆ. ಹರಕೆ ಆಚರಣೆಯ ಪ್ರಮುಖ ಅಂಗವಾದರೆ, ನಂಬಿಕೆ ಹರಕೆಯ ಅಡಿಪಾಯ ಅಥವಾ ತಳಹದಿ. ಒಟ್ಟಿನಲ್ಲಿ ಮಾನವ ನಂಬಿಕೆಯ ಆಧಾರದ ಮೇಲೆ ಹರಕೆಯನ್ನು ಕಟ್ಟುತ್ತಾನೆ. ಈ ರೀತಿಯಾಗಿ ಆಚರಣೆಗಳು ಅಸ್ತಿತ್ವಕ್ಕೆ ಬರುತ್ತವೆ. ಸಾಮಾನ್ಯವಾಗಿ ಪ್ರತಿಗ್ರಾಮದವರು ತಮ್ಮ ತಮ್ಮ ಗ್ರಾಮದೇವತೆಗೆ, ಗ್ರಾಮದೈವಕ್ಕೆ ಹರಕೆಯನ್ನು ಒಪ್ಪಿಸುವುದು ವಾಡಿಕೆಯಾಗಿದೆ. ಬಾಯಿಗೆ ಬೀಗಹಾಕುವುದು, ಕೊಂಡ ಹಾಯುವುದು, ಎಲ್ಲಮ್ಮನಿಗೆ ಹರಕೆ ಹೊತ್ತವರು ನಡೆಸಿಕೊಂಡು ಬಂದಿರುವ ಗಂಡಸು ಹೆಂಗಸಾಗುವ, ಹೆಂಗಸು ಗಂಡಸಾಗುವ ಜೋಗತಿ ಸಂಪ್ರದಾಯ ಇನ್ನು ಕೆಲವು ಸೇವೆಗಳು ಜನಪದ ದೇವತೆಗಳಿಗೆ ಸಲ್ಲುತ್ತವೆ. ಹೀಗೆ ಆಚರಣೆಗಳನ್ನೊಳಗೊಂಡ ಸಂಕೀರ್ಣ ಸ್ವರೂಪವನ್ನು ಹಬ್ಬ ಎಂದು ಕರೆಯಬಹುದು. ಸಂಪ್ರದಾಯ, ಹಬ್ಬ, ಆಚರಣೆ ಈ ಮೂರಕ್ಕೂ ನಂಬಿಕೆಯೇ ಜೀವಧಾತು. ಆಚರಣೆಗಳು ಬಹುತೇಕ ಧಾರ್ಮಿಕ ಮತ್ತು ದೈವಿಕ ಸಂಸ್ಪರ್ಶವನ್ನು ಪಡೆದಿರುತ್ತವೆ. ಇದು ನಂಬಿಕೆಯನ್ನು ಆಧರಿಸಿದ್ದು, ವಿಶೇಷ ಸಂದರ್ಭಗಳಲ್ಲಿ ಅನ್ವಯಿಸುತ್ತವೆ ಹಾಗೂ ಆಚರಿಸಲ್ಪಡುತ್ತವೆ. ನಿತ್ಯಜೀವನದಲ್ಲಿ ವ್ಯಕ್ತಿಗತ ಬದುಕು ಅನೇಕ ಸಂಕ್ರಮಣಗಳಿಗೆ ಒಳಗಾಗುತ್ತವೆ. ಇಂತಹ ಸಂಕ್ರಮಣಗಳು ಜೀವನದಲ್ಲಿ ನಡೆಯದಿರುವಂತೆ ಮಾನವ ಎಚ್ಚರವಹಿಸುತ್ತಾನೆ. ಇಂತಹ ಎಚ್ಚರಗಳು, ಕಾಳಜಿಗಳೇ ಅನೇಕ ಆಚರಣೆಗಳ ಹುಟ್ಟಿಗೆ ಕಾರಣವಾಗಿವೆ. ವ್ಯಕ್ತಿಯ ಬದುಕು ಬಾಲ್ಯದಿಂದ ಮುಪ್ಪಿನವರೆಗೂ ಅಪಾರ ನಂಬಿಕೆಗಳಿಂದ ಕೂಡಿರುತ್ತದೆ ಹಾಗೂ ಆಚರಣೆಗಳನ್ನೇ ಒಳಗೊಂಡಿರುತ್ತವೆ.

ಆಚರಣೆಗಳು ಪ್ರದೇಶದಿಂದ ಪ್ರದೇಶಕ್ಕೆ, ದೇಶದಿಂದ ದೇಶಕ್ಕೆ ಭಿನ್ನವಾಗಿ ಕಂಡರೂ ಅವುಗಳಲ್ಲಿ ಸಾಮ್ಯತೆಗಳೇ ಹೆಚ್ಚಾಗಿರುತ್ತವೆ. ನಮ್ಮ ಸಂಸ್ಕೃತಿಯ ಆಚರಣೆಗಳಲ್ಲಿ ಮುಖ್ಯವಾಗಿ ರೋಗ ನಿವಾರಕ ಆಚರಣೆಗಳು, ಮಳೆಬೆಳೆ ಭೂಮಿಗಳಿಗೆ ಸಂಬಂಧಿಸಿದ ಆಚರಣೆಗಳು, ಹಬ್ಬ ಜಾತ್ರೆ ಉತ್ಸವ ತೇರುಗಳಿಗೆ ಸಂಬಂಧಿಸಿದ ಆಚರಣೆಗಳು ಇನ್ನು ಕೆಲವು ವಿಶಿಷ್ಟ ಆಚರಣೆಗಳು ಕಂಡುಬರುತ್ತವೆ. ಅದೇ ರೀತಿಯ ವಿದೇಶಗಳಲ್ಲಿ ಕೆಲವು ಆಚರಣೆ ವೈಶಿಷ್ಟತೆಯನ್ನು ಗಮನಿಸಿದಾಗ ಈ ರೀತಿಯಾಗಿ ಕಂಡುಬರುತ್ತವೆ. "ಮಳೆಯಾಗದ ಸಂದರ್ಭದಲ್ಲಿ ಗುಲಾಮರನ್ನು ಬಲವಂತವಾಗಿ ಸುಡುವುದರ ಮೂಲಕ ಮಳೆಯನ್ನು

ಒಲಿಸಿಕೊಳ್ಳುವ ಆಚರಣೆಗಳು ಚೈನಾದೇಶದಲ್ಲಿ ರೂಢಿಯಲ್ಲಿದ್ದವು ಎಂದು ಎಫ್ ಕರೋವ್ಕಿನ್ ದಾಖಲಿಸಿದ್ದಾರೆ. ಮಳೆ ತರಿಸುವುದಕ್ಕಾಗಿ ಪ್ರಾಚೀನ ಟಿಬೇಟನ್ನರು ಬೆತ್ತಲೆಯಾದ ಹುಡುಗಿಯ ಮೇಲೆ ನೀರನ್ನು ಸುರಿಸುವ ವಿಧಿಯೊಂದನ್ನು ಆಚರಿಸುತ್ತಿದ್ದರು. ಪ್ರಾಚೀನ ಸ್ಪೇನೀಶ್ ಪುರೋಹಿತರು ಮಳೆಬರಿಸುವುದ ಕ್ಕಾಗಿ ಮರೆವಣಿಗೆಯಲ್ಲಿ ಒಂದು ಪವಿತ್ರ ಬಾವಿ ಅಥವಾ ಮಾಂತ್ರಿಕ ಚಿಲುಮೆಯ ಬಳಿಹೋಗುತ್ತಿದ್ದರು ಹಾಗೂ ನೀರಿನ ಮೇಲ್ಮೈಯನ್ನು ಕೋಲುಗಳಿಂದ ಬಡಿಯುತ್ತಿದ್ದರು. ಹೀಗೆ ಮಾಡುವುದರಿಂದ ಮಳೆ ಎಚ್ಚರಗೊಳ್ಳುವುದೆಂದು ಅವರು ನಂಬಿದ್ದರು. ಮಳೆಯನ್ನೇ ಕುರಿತಂತೆ ಇರುವ ಆಚರಣೆಗಳಲ್ಲಿ ರಕ್ತಾರ್ಪಣೆ ಮತ್ತು ಬಲಿಗಳು ಅತ್ಯಂತ ಪ್ರಧಾನ ಪಾತ್ರವಹಿಸುತ್ತಿದ್ದುದ್ದನ್ನು ಫ್ರೇಜರ್ ತಮ್ಮ ಗೋಲ್ಡನ್ ಬೋ ಪುಸ್ತಕದಲ್ಲಿ ವಿವರಿಸಿದ್ದಾರೆ. (ಮಂಜುನಾಥ ಬೇವಿನಕಟ್ಟಿ, ಜಾನಪದ ಉತ್ಪನನ ಪು.೧೧೬ ನೋಡಿ) ಇಂಥಹ ಆಚರಣೆಗಳನ್ನು ಕುರಿತು ತಿಳಿದಾಗ ವಿಸ್ಮಯ ಹಾಗೂ ವಿಪರ್ಯಾಸಗಳೆರಡು ಉಂಟಾಗುತ್ತವೆ. ಕೇವಲ ಭಾರತೀಯ ನೆಲದಲ್ಲಿಯೇ ಮಾತ್ರ ನಿಕೃಷ್ಟ ಹಾಗೂ ನಿರ್ಲಿಪ್ತ ಸ್ಥಿತಿಯ ಆಚರಣೆಗಳು ಕಂಡುಬರದೆ ಪ್ರಪಂಚದ ಮೂಲೆ ಮೂಲೆಗೂ ಆಚರಣೆಗಳಲ್ಲಿ ವಿಭಿನ್ನತೆ ಕಂಡುಬರುತ್ತದೆ.

ಸೂರ್ಯಗ್ರಹಣದ ದಿನದಲ್ಲಿ ಗುಲ್ಬರ್ಗಾದ ಒಂದು ಗ್ರಾಮದಲ್ಲಿ ಪಾರ್ಶ್ವವಾಯು ರೋಗಿಯು ಮತ್ತು ಅಂಗವಿಕಲ ಒಂದು ಆಚರಣೆಯನ್ನು ಗಮನಿಸಬಹುದು. ಪಾರ್ಶ್ವವಾಯು ರೋಗಿಯು ತನ್ನ ರೋಗ ನಿವಾರಣೆಗಾಗಿ ತನ್ನ ದೇಹದ ಭಾಗಗಳನ್ನು ಕಸದ ತಿಪ್ಪೆಯಲ್ಲಿ ಮುಚ್ಚಿಟ್ಟಿದ್ದನು. ಈ ರೀತಿಯಾದ ಆಚರಣೆಯನ್ನು ಸೂರ್ಯಗ್ರಹಣದ ದಿನದಂದು ಮಾಡಿದರೆ ಅದು ಗುಣಮುಖವಾಗುತ್ತದೆ ಎಂಬ ನಂಬಿಕೆಯು ಇಂಥಹ ಆಚರಣೆಯನ್ನೇ ಮಾಡಲು ಪ್ರೇರೇಪಿಸಿತು ಎಂದು ತಿಳಿಸಿದನು. (ಸೂರ್ಯ ಗ್ರಹಣದ ನೇರ ಪ್ರಸಾರದಲ್ಲಿ ಈಟಿವಿ ನ್ಯೂಸ್‌ನ ಮಾಹಿತಿ) ಇತ್ತೀಚಿನ ದಿನಗಳಲ್ಲಿ ಈ ರೀತಿಯ ಆಚರಣೆಗಳು ಕಂಡುಬರುತ್ತವೆ.

ಹೀಗೆ ಮಾನವನ ಬದುಕಿನುದ್ದಕ್ಕೂ ಹಲವಾರು ಆಚರಣೆಗಳಿಗೆ ಒಳಗಾಗುತ್ತಾನೆ. ಸಂಪ್ರದಾಯ ಅಂಗೀಕರಿಸಿದ ಧಾರ್ಮಿಕ ಮಾಂತ್ರಿಕ ಆಚರಣೆಗಳ ಮೊತ್ತವೇ ಆಚರಣೆ" (ಸಿದ್ಧಲಿಂಗಯ್ಯ: ಗ್ರಾಮ ದೇವತೆಗಳು ಪು.೭೧) ಇಂತಹ ನಂಬಿಕೆಯ ಸಿದ್ಧಾಂತ ಆಚರಣೆಯನ್ನು ಮುಂದುವರೆಸಿಕೊಂಡು ಹೋಗುವಂತೆ ಮಾಡುತ್ತದೆ. ಆಚರಣೆ ಹುಟ್ಟುವ ಮುನ್ನ ಅಥವಾ ಅನಂತರ ಪುರಾಣಗಳು ಹುಟ್ಟಿಕೊಳ್ಳುತ್ತವೆ. ಪುರಾಣ ಕತೆ ಮರೆತು ಹೋದ ಸಂದರ್ಭದಲ್ಲೂ ಯಾವುದೇ ಆತಂಕವಿಲ್ಲದೆ ಆಚರಣೆಗಳು ಮುಂದುವರೆಯುತ್ತಾ ಹೋಗುತ್ತದೆ.

ದೈವಗಳಲ್ಲಿಯೇ ವಿವಿಧ ರೀತಿಯ ಆಚರಣೆಗಳು ಇರುತ್ತವೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಶಿವಲಿಂಗೇಶ್ವರ ಪುರಾಣದಲ್ಲಿ ಮಾಡುವ ವರ್ಣನೆ ಕೂಡ ಇಂತಹದ್ದೇ ಆಗಿದೆ.

"ಎತ್ತ ನೋಡಲು ವೀಧಿ ಶೃಂಗಾರ ಎತ್ತನೋಡಲು ಪಾತ್ರಮೇಳವು
ಎತ್ತನೋಡಲು ಗಂಧ ಕುಸುಮವು ಎತ್ತ ಕೇಳಲು ಕೌಂಸವಾದ್ಯವು
ಎತ್ತ ನೋಡಲು ಕಂಚುಕಂಕಣ ಎತ್ತನೋಡಲು ಕಬ್ಬು ಫಲಗಳು

ಈ ವಿವರ ಕಂಡರೆ ಒಂದು ಪ್ರದೇಶದ ಜನ ತಮ್ಮ ಉಡುವ ಉಣ್ಣುವ ದುಡಿಯುವ ಬದುಕುವ ರಿವಾಜುಗಳನ್ನೆಲ್ಲ ಎರೆದು, ಉರುಸಿನ ಆಚರಣೆಗಳನ್ನು ರೂಪಿಸುತ್ತಾರೆ ಅನ್ನಿಸುತ್ತದೆ"(ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು ಪು.೧೫೦) ಇಲ್ಲಿ ಒಬ್ಬೊಬ್ಬ ಅವಧೂತರ, ಸಾಧು ಸಂತರ ಕುರಿತ ಆಚರಣೆಗಳಲ್ಲಿ ಸ್ವಲ್ಪ ವ್ಯತ್ಯಾಸಗಳನ್ನು ಕಾಣಬಹುದು. ಫಕೀರರ ದರಗಾದಲ್ಲಿ ಮಲೆನಾಡಿನ ಕೃಷಿಗೆ ಸಂಬಂಧಿಸಿದ ಆಚರಣೆಯನ್ನು ಗಮನಿಸಬಹುದು.

ಎಲ್ಲ ದೇವರಿಗೂ ಏನು ಪೂಜೆನಾದರೆ | ಹಣ್ಣು ಕಾಯಿಗಳೇ ಬಲುಪೂಜೆ

ಬುಡ್ನಾಗಿರಿ ಸ್ವಾಮಿಗೇನು ಪೂಜೆನಾದರೆ | ಲೋಬಾನದೊಗೆಯೇ ಬಲುಪೂಜೆ

ಲೋಬಾನ ದೊಗೆಯ ಬಲುಪೂಜೆನಾದರೆ | ಬುಡ್ನಾಗಿರಿ ಸ್ವಾಮಿಗೆ ಸಕ್ಕರೆ ಸೇರುಗಳೇ ಬಲುಪೂಜೆ"

(ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು ಪು.೧೫೧) 

ಸಾಧು ಸಂತರಿಗೆ ಹಣ್ಣು ಕಾಯಿಗಳೇ, ಲೋಬಾನದ ಹೊಗೆಯೇ ಬಲು ಇಷ್ಟವಾದರೆ ದೈವ ಹಾಗೂ ಮಾರಿದೇವತೆಗಳಿಗೆ ಬಲಿಪೂಜೆಯಾಗಿ ರಕ್ತದ ಮಾದರಿಯಲ್ಲಿ ಆಚರಿಸಲಾಗುತ್ತದೆ. ಆಚರಣೆಗಳು ಬದುಕಿನ ಭಾಗಗಳಾಗಿ ಇಂಥದ್ದೆ ಸಂಸ್ಕೃತಿ ಎಂದು ತಿಳಿಯಲು ಸಹಕಾರಿಯಾಗಿವೆ. ಪ್ರತಿಯೊಂದು ದೈವದ ಆಚರಣೆಗಳು ಕೆಲವೊಮ್ಮೆ ವಿಭಿನ್ನವಾಗಿದ್ದರೂ ಅವು ಪ್ರಾದೇಶಿಕ ನೆಲೆಯೊಳಗೆ ಸೇರಿಸಲ್ಪಟ್ಟಿರುತ್ತವೆ. ಹಾಗಾಗಿಯೇ ಮೇಲ್‌ಜಾತಿಯ ದೈವಗಳ ಮತ್ತು ತಳ ಸಮುದಾಯಗಳ ದೈವಗಳ ಆಚರಣೆಗಳಲ್ಲಿ ಬಹಳ ವ್ಯತ್ಯಾಸಕಾಣಬಹುದಾಗಿದೆ. ಹೀಗೆ ಆಚರಣೆಗಳಲ್ಲಿ ಪ್ರದೇಶದಿಂದ ಪ್ರದೇಶಕ್ಕೆ, ಪಂಥಗಳಿಂದ ಪಂಥಕ್ಕೆ ಅಂತರದ ಮಿತಿ ಕಡಿಮೆ ಎನ್ನಬಹುದು. 

ಮೇಲಿನ ಎಲ್ಲ ರೀತಿಯ ಆಚರಣೆಯ ಒಳನೋಟವನ್ನು ಗಮನಿಸಿದಾಗ ಪ್ರತಿಯೊಂದು ಆಚರಣೆಯ ಉದ್ದೇಶ ಭಿನ್ನವಾಗಿರುತ್ತದೆ. ವೈಯಕ್ತಿಕ ಆಚರಣೆಗಳನ್ನು ಮೊದಲುಗೊಂಡು ಮಳೆ, ಬೆಳೆಗಾಗಿ ನಡೆಸುವ ಈ ಆಚರಣೆಗಳಲ್ಲಿ ಊರುಕೇರಿಯ ಒಳತಿಗೆ ಸಂಬಂಧಿಸಿದ ಧ್ಯೇಯೋದ್ದೇಶಗಳಿವೆ. ಪ್ರಾದೇಶಿಕವಾಗಿ ಆಚರಣೆಗಳು ಭಿನ್ನವಾಗಿದ್ದರೂ, ಅವುಗಳನ್ನು ಆಚರಿಸುವ ಉದ್ದೇಶ ಒಂದೇ. ಪ್ರತಿಯೊಂದು ಆಚರಣೆಯು ಸಾಂಕೇತಿಕವಾದ ಅರ್ಥವನ್ನು ಹೊಂದಿರುತ್ತದೆ. ಸಂಸ್ಕೃತಿ ಭಿನ್ನವಾದರೂ, ಭಾಷೆ ಭಿನ್ನವಾದರೂ ಆಚರಣೆಗಳ ಮಹತ್ವ ಇಂದಿಗೂ ಪ್ರಸ್ತುತವಾಗಿದೆ. ಆ ಆಚರಣೆಗಳು ಹಲವಾರು ಕಾರಣಗಳಿಂದ ಬೇಸಿಗೆ ಕಾಲದ ಏಪ್ರಿಲ್ ಹಾಗೂ ಮೇ ತಿಂಗಳಲ್ಲಿ ನೆರವೇರುತ್ತದೆ. ಈ ತಿಂಗಳು ಹಬ್ಬ ಹಾಗೂ ಜಾತ್ರೆಗಳಿಗೆ ಪ್ರಶಸ್ತವಾಗಿದ್ದು, ಬಹುತೇಕ ಆಚರಣೆಗಳು ಹುಣ್ಣಿಮೆಯ ರಾತ್ರಿಯಲ್ಲಿ ನಡೆಸಲ್ಪಡುತ್ತವೆ. ಹುಣ್ಣಿಮೆ ರಾತ್ರಿ ಆಚರಣೆಗಳಿಗೆ ಪ್ರಶಕ್ತಕಾಲ ಬೆಳದಿಂಗಳು, ಸುಖ, ಸಮೃದ್ಧಿ, ಶಾಂತಿಯ ಸಂಕೇತವಾಗಿದೆ. ಹಳ್ಳಿಯ ಜನ ಸುಗ್ಗಿ ಆಚರಿಸುವ ಕಾಲವಿದು. ಧಾರ್ಮಿಕ ಹಾಗೂ ಸಾಂಸ್ಕೃತಿಕ ಆಚರಣೆಗಳೇ ಹೆಚ್ಚು. ಇವು ಸಂಸ್ಕೃತಿಯನ್ನು ಬಿಂಬಿಸುವುದರ ಜೊತೆಗೆ ಮನೋಲ್ಲಾಸವನ್ನು ನೀಡುತ್ತಾ ಬಂದಿವೆ. ದೇವರ ಸ್ಮರಣೆಯ ಜೊತೆ ಜೊತೆಗೆ ಬಂಧು ಬಾಂಧವರ ಸಾಮೀಪ್ಯವು ಒದಗಿಸುತ್ತವೆ.

ಒಂದರ್ಥದಲ್ಲಿ ಆಚರಣೆಗಳು ಎಷ್ಟೇ ಕಠಿಣವಾದರೂ ಅವುಗಳು ಮಾನಸಿಕ ನೆಮ್ಮದಿಯನ್ನು ಕೊಡುತ್ತವೆ ಎನ್ನುವ ನಂಬಿಕೆ ಜರೂರಾಗಿದೆ. ದುಡಿದು ಬಳಲಿಹೋದ ಮನಗಳಿಗೆ ಆನಂದ ಹಾಗೂ ಆಹ್ಲಾದವನ್ನುಂಟುಮಾಡುವ ಸುಗ್ಗಿಯ ಪರ್ವಕಾಲವಾಗಿದೆ. ಪ್ರತಿಯೊಂದು ಸಮುದಾಯಗಳು ತಮ್ಮ ತಮ್ಮ ಕುಲದೈವ, ಗ್ರಾಮದೈವ ಹಾಗೂ ಮನೆದೈವಗಳ ಆಚರಣೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಹೀಗೆ ಮನುಷ್ಯನಿಗೆ ಮಾನಸಿಕ, ಭೌತಿಕ ಅಗತ್ಯವಾದ ಭಾಗಗಳಾಗಿ ಆಚರಣೆಗಳು ಬೆಳೆದುಕೊಂಡು ಬಂದಿವೆ. ಬಾಲ್ಯದಿಂದಿಡಿದು ಮರಣದವರೆಗೂ ಕೈಗೊಳ್ಳುವ ಆಚರಣೆಗಳು ಬದುಕಿನ ಭಾಗವಾಗಿ, ಬಿಡಿಸಲಾರದ ಕಗ್ಗಂಟಾಗಿ, ಜನಪದರ ಆಶೋತ್ತರಗಳ ಈಡೇರಿಕೆಗೆ ಸಹಾಯಕವಾಗಿವೆ.

### ೩.೨. ಜೀವನಾವರ್ತನ ಆಚರಣೆಗಳು

ಮನುಷ್ಯನ ಹುಟ್ಟು, ಸಾವುಗಳ ನಡುವೆ ನಡೆಯುವ ಅನೇಕ ಚಟುವಟಿಕೆಗಳಿಗೆ ಧಾರ್ಮಿಕತೆಯು ಮೂಲ ಪ್ರೇರಕಶಕ್ತಿಯಾಗಿರುತ್ತದೆ. ಧಾರ್ಮಿಕತೆಯಿಲ್ಲದೆ ಎಲ್ಲಾ ಕಾರ್ಯಗಳು ಮೊಟಕುಗೊಂಡಂತೆ. ಪ್ರತಿ ಸಾಂದರ್ಭಿಕ ಪರಿಸ್ಥಿಯಲ್ಲಿ ಅವನು ಆಚರಿಸುವ ಆಚರಣೆಗಳಿಗೆ ಜೀವನಾವರ್ತನ ಆಚರಣೆಗಳು ಎಂದು ಕರೆಯಬಹುದಾಗಿದೆ. ಅಂಥಹವುಗಳಲ್ಲಿ ವೈಯಕ್ತಿಕವಾಗಿ, ಕೌಟುಂಬಿಕವಾಗಿ ಇಲ್ಲವೋ ಸಾಮೂಹಿಕವಾಗಿ ಆಚರಣೆಗೆ ಒಳಪಡುತ್ತವೆ. ಗ್ರಾಮ ದೈವಗಳು ಅವರ ಆಚರಣೆಯ ಕೇಂದ್ರತ್ವ ಪಡೆದುಕೊಂಡಿರುವುದು ಸಾಮಾನ್ಯ. ಪ್ರಸ್ತುತ ಅಧ್ಯಯನದಲ್ಲಿ ಚೇಳಗುರಿಕೆ ಎರ್ರಿತಾತನು ಗ್ರಾಮದ ಜನತೆಯ ವಿವಿಧ ಆಚರಣೆಗಳಿಗೆ ಮೂಲ ದೈವವಾಗಿ, ಕುಲದೈವವಾಗಿ ಹಾಗೂ ಗ್ರಾಮದೈವವಾಗಿ ಭಕ್ತ ಜನರ ಬದುಕಿನೊಳಗೆ ಪೂಜೆಗೆ ಅರ್ಹನಾಗಿರುವುದು ತಿಳಿದುಬರುತ್ತದೆ.

ತಾತನ ಆಶೀರ್ವಾದ ಪಡೆದು ಸಂತಸರಾದ ಭಕ್ತರು ಮಠಕ್ಕೆ ಬಂದು ಅನೇಕ ಹರಕೆಗಳನ್ನು ಸಲ್ಲಿಸುತ್ತಾರೆ. ಪೂಜಾವಿಧಿ ವಿಧಾನಗಳ ಜೊತೆಗೆ ಧವಸ, ಧಾನ್ಯಗಳನ್ನಿಟ್ಟು ವಾದ್ಯದವರೊಂದಿಗೆ ಮುತ್ತೈದೆಯರ ಕಳಸ, ತುಂಬಿದ ನೀರಿನ ಕೊಡ, ಪೂಜಾ ಸಾಮಾಗ್ರಿಗಳೊಂದಿಗೆ ಎರ್ರಿತಾತನ ಮಠಕ್ಕೆ ಆಗಮಿಸುತ್ತಾರೆ. ಹೂ ಹಣ್ಣು ಕರ್ಪೂರಗಳನ್ನು ಕೊಟ್ಟು ಪೂಜೆ ಮಾಡಿಸಿ ಮಂಗಳಾರತಿ ತೆಗೆದುಕೊಂಡು, ತೀರ್ಥ ಪ್ರಸಾದ ಪಡೆದು ತಮ್ಮನ್ನು ಉದ್ಧರಿಸು ಎಂದು ದೀರ್ಘದಂಡ ಪ್ರಣಾಮಗಳನ್ನು ಸಲ್ಲಿಸಿ ಮನೆಗೆ ಹಿಂದಿರುಗುತ್ತಾರೆ. ಮನೆಯಲ್ಲಿ, ಸಮುದಾಯಗಳಲ್ಲಿ ಮಂಗಳಕಾರ್ಯ ನಡೆದರೆ ಮೊದಲಿಗೆ ಪೂಜೆ ಸಲ್ಲಿಸಿ ಕಾರ್ಯವನ್ನು ಮುಂದುವರೆಸುತ್ತಾರೆ. ಅಪಾಯ ಹಾಗೂ ಸಂಕಷ್ಟದ ಪರಿಸ್ಥಿತಿಯಲ್ಲಿ ಮಾನವ ದೇವರ ಮೊರೆ ಹೋಗುವುದು ಸಾಮಾನ್ಯವಾಗಿಬಿಟ್ಟಿದೆ. ಅವರು ದೇವರಿಗೆ ಹರಕೆಗಳನ್ನು ಹೊರುತ್ತಾರೆ. ಹರಕೆ ಅಂದರೆ ಅಂದುಕೊಂಡಿದ್ದನ್ನು ತೀರಿಸುವುದು. ಒಮ್ಮೊಮ್ಮೆ ಹರಕೆ ಅಂದು ಕೊಂಡಷ್ಟು ಅವನು ಸಲ್ಲಿಸುವಾಗ ಕಷ್ಟಕರವಾಗುತ್ತದೆ. ಅದಕ್ಕಾಗಿ ಸತ್ಯವೇದದಲ್ಲಿ ಹರಕೆಗಳನ್ನು ನುಡಿಯದಿರು ನುಡಿದರೆ ಹರಕೆಗಳನ್ನು ಸಲ್ಲಿಸದೆ ಇರಬೇಡ ಎಂದು ಗ್ರಹಿಸಲಾಗಿದೆ. ಹೊತ್ತ ಹರಕೆಯನ್ನು ಒಳ್ಳೇಯ ಸಂದರ್ಭದಲ್ಲಿ ತೀರಿಸುತ್ತಾರೆ. ಜನನ, ನಾಮಕರಣ, ಜವಳಿ ಕಾರ್ಯಕ್ರಮ, ಮೈನೆರೆದಾಗ, ವಿವಾಹ ಹಾಗೂ ಮರಣ ಇಂಥಹ ಸನ್ನಿವೇಶಗಳು ಹರಕೆಯನ್ನು

ನಿಜವಾಗಿಸಲು, ತೀರಿಸಲು ಸಹಕಾರಿಯಾಗಿವೆ. ಆದರೆ ಕೆಲವೊಮ್ಮೆ ತನ್ನೂರ ಗ್ರಾಮ ದೈವಗಳಿಗೆ ಮಾಡಿಕೊಂಡ ಹರಕೆ ವಿಫಲವಾದರೆ, ಬೇರೆ ಊರಿನ ಮತ್ತೊಂದು ದೇವತೆಗೆ ಹರಕೆ ಹೊರುತ್ತಾರೆ.

ಹೀಗೆ ಹರಕೆ ಹೊರುವುದು ವಿಶೇಷವಾದ ಸಂದರ್ಭಗಳಲ್ಲಿ ಮಾತ್ರ. ಸಾಮಾನ್ಯವಾಗಿ ಊರ ದೇವರನ್ನು ಬಿಟ್ಟು ಇತರ ದೇವತೆಗೆ ಹರಕೆಹೊತ್ತರೆ ಆ ಊರಿನವರು ಅದಕ್ಕೆ ಸಮ್ಮತಿಸುವುದಿಲ್ಲ. ಆದರೆ ಒಂದು ಊರಿನ ದೇವರಿಗಿಂತ ಮತ್ತೊಂದು ಊರಿನ ದೇವರೇ ಹೆಚ್ಚು ಪ್ರಬಲ ಹಾಗೂ ಫಲದಾಯಕ ಎಂದು ತೋರಿದರೆ ಆ ದೇವರಿಗೆ ಹರಕೆ ಹೊರುತ್ತಾರೆ ಮತ್ತು ನಡೆದುಕೊಳ್ಳುತ್ತಾರೆ. ಜನಪದ ದೈವಗಳಿಗೂ, ಶಿಷ್ಟ ದೈವಗಳಿಗೂ ಹರಕೆಗಳಲ್ಲಿ ಸ್ವಲ್ಪ ಭಿನ್ನತೆ ಕಾಣಬಹುದು. ದಿಂಡುರುಳು ಸೇವೆ ಹಾಗೂ ಹೆಜ್ಜೆ ನಮಸ್ಕಾರ ಮೊದಲಾದ ಸರಳ ಸೇವೆಗಳಲ್ಲದೆ ಮೈಗೆಲ್ಲಾ ಡಬ್ಬಣ ಗಾತ್ರದ ಸರಳುಗಳನ್ನು ಚುಚ್ಚಿಕೊಂಡು ತಮಟೆ ಹೊಡೆಯುತ್ತಾ ಅದರ ಗತ್ತಿಗೆ ತಕ್ಕಂತೆ ಕುಣಿದಾಡುತ್ತಾ ಹರಕೆಗಳನ್ನು ಒಪ್ಪಿಸುತ್ತಾರೆ.

ಜನನ

ಇಡೀ ಗ್ರಾಮವೇ ಎರ್ರಿತಾತನ ಸಂಪ್ರದಾಯದೊಳಗೆ ನೆಲೆನಿಂತಂತಿದೆ. ತಾತನ ಕರುಣೆಯಿಂದ ಭಕ್ತರ ಕೋರಿಕೆಯಂತೆ ಮಕ್ಕಳು ಹುಟ್ಟಿದರೆ ಆತನ ಹೆಸರನ್ನು ಇಡಲಾಗುತ್ತದೆ. ಎರ್ರಿಸ್ವಾಮಿ, ಎರ್ರಿಗ, ಯರ್ರಪ್ಪಣ್ಣ, ಯರ್ರಪ್ಪ ಎಂಬ ಹೆಸರುಗಳನ್ನು ಗಂಡಸರಿಗೆ ಇಟ್ಟರೆ, ಹೆಂಗಸರಿಗೆ ಎರ್ರಮ್ಮ, ಎರ್ರಕ್ಕ, ಈರಮ್ಮ, ಮುಂತಾದ ಹೆಸರುಗಳನ್ನು ಕರೆಯುವುದು ಸಾಮಾನ್ಯವಾಗಿದೆ. ಪ್ರತಿಯೊಂದು ಮನೆಯಲ್ಲಿ ಒಬ್ಬರು ಇಲ್ಲವೇ ಇಬ್ಬರು ಎರ್ರಿತಾತನ ಹೆಸರನ್ನು ಹೊಂದಿರುವುದು ಕ್ಷೇತ್ರಕಾರ್ಯಕ್ಕೆ ಹೋದಾಗ ಸಿಕ್ಕ ಮಾಹಿತಿಯಿಂದ ತಿಳಿಯಬಹುದು. ಬಾಣಂತಿಯರು ಎರ್ರಿತಾತನ ಮಠಕ್ಕೆ ದೇವಾಲಯಕ್ಕೆ ಹೋಗಿ ಪೂಜೆಮಾಡಿಸಿ ತೀರ್ಥದ ನೀರು ಹಾಕುವವರೆಗೂ ಅವರು ಮಾಂಸಾಹಾರವನ್ನು ಸೇವಿಸುವಂತಿಲ್ಲ. ಒಂದು ವೇಳೆ ಸೇವನೆ ಮಾಡಿದರೆ ತಮಗೆ ಒಳ್ಳೆಯದಾಗುವುದಿಲ್ಲ ಎಂಬ ನಂಬಿಕೆ ಜನರಲ್ಲಿದೆ. ಮಗುವು ಮೂರು ತಿಂಗಳು ತುಂಬುವ ತನಕ ಮಾಂಸಾಹಾರ ಸೇವಿಸುವಂತಿಲ್ಲ. ಇಂಥಹ ಆಚರಣೆಯನ್ನೂ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುವುದನ್ನು ಗಮನಿಸಬಹುದು. ಮಗು ಜನನವಾದ ಮೂರು ತಿಂಗಳ ನಂತರ ದೇವಸ್ಥಾನಕ್ಕೆ ಹೋಗಿ ಮಗುವನ್ನು ಅಡ್ಡಮಲಗಿಸಿ ಎರ್ರಿತಾತನಿಗೆ ಪೂಜೆ ಮಾಡಿಸಿ ಮಂಡಕ್ಕಿ, ಸಕ್ಕರೆ, ಹೂ ಹಣ್ಣುಗಳನ್ನು ಮಕ್ಕಳಿಗೆ ಹಾಗೂ ಹಿರಿಯರಿಗೆ ಪ್ರಸಾದ ರೀತಿಯಲ್ಲಿ ಹಂಚಿ ಮನೆಗೆ ಬರುತ್ತಾರೆ. ಸ್ತ್ರೀ ಗರ್ಭಧರಿಸಿದಂತಹ ಸಂದರ್ಭದಲ್ಲಿ ನನಗೆ ಗಂಡು ಮಗುವಾದರೆ ನಿನ್ನ ಗುಡಿಗೆ ಬಂದು ಹರಕೆಯನ್ನು ಸಲ್ಲಿಸುತ್ತೇನೆಂದು ಮುಡುಪು ಕಟ್ಟಿಕೊಂಡಿರುತ್ತಾರೆ. ಒಂದು ವೇಳೆ ಆ ಮುಡುಪನ್ನು ಸಲ್ಲಿಸದೆ ಇದ್ದರೆ ನನಗಾಗಲೀ ನನ್ನ ಮಗುವಿಗಾಗಲಿ ಏನಾದರೂ ಆಪತ್ತು ಬರುತ್ತದೆ ಎಂಬ ನಂಬಿಕೆ ಈಗಲೂ ಸಹ ಕಾಣಬಹುದು. ಮಗುವಿಗೆ ಎದೆಯ ಹಾಲು ಇರದೇ ಇದ್ದಂತಹ ಸಂದರ್ಭದಲ್ಲಿ ಎರ್ರಿತಾತನ ಹೆಸರನ್ನು ಹೇಳಿ ಮುಡುಪನ್ನು ಕಟ್ಟುವುದು, ನಂತರ ಮಗುವು ದಷ್ಟಪುಷ್ಟವಾಗಿ ಬೆಳೆದ ನಂತರ ಹರಕೆಯನ್ನು ದೇವಸ್ಥಾನಕ್ಕೆ ಹೋಗಿ ಒಪ್ಪಿಸುವುದು. ಇದು ಹಣದ ರೂಪದಲ್ಲಿರಬಹುದು, ಆಭರಣ ರೂಪದಲ್ಲಿರಬಹುದು ಅಥವಾ ಜೋಡಿಕಾಯಿ ಹೊಡೆಯುವುದು ಇತ್ಯಾದಿ ಅವರವರ ಯೋಗ್ಯತೆಗಳಿಗೆ

ತಕ್ಕಂತೆ ಹರಕೆಗಳನ್ನು ಸಲ್ಲಿಸುತ್ತಾರೆ. ಗಂಡು ಮಕ್ಕಳಾದರೆ ದೊಡ್ಡ ಮೊತ್ತದ ಹರಕೆ ಸಲ್ಲಿಸುತ್ತಾರೆ. ಸತ್ಯವೇದದ ಒಂದು ಹರಕೆ ಇಲ್ಲಿ ಉಲ್ಲೇಖಾರ್ಹವಾಗಿದೆ. ಯಾಬಿಚೇಲನೆಂಬ ಅರಸನು ಯುದ್ಧಕ್ಕೆ ಹೋಗುತ್ತಾನೆ. ಅಲ್ಲಿ ಯುದ್ಧದ ಪರಿಸ್ಥಿತಿ ಬಹಳ ಬಿಗಡಾಗಿದ್ದರಿಂದ ಸೋಲುತ್ತೇನೆಂಬ ಭಯದಿಂದ ಯಹೋವ (Jehovah) ದೇವರಿಗೆ ಹೀಗೆ ಹರಕೆ ಮಾಡುತ್ತಾನೆ. "ಈ ಯುದ್ಧದಲ್ಲಿ ಜಯವಾಗಿ ಶತ್ರುಗಳನ್ನು ನನ್ನ ಕೈಗೆ ಒಪ್ಪಿಸಿದರೆ ನಾನು ಮನೆಗೆ ಹೋದಾಗ ಮೊದಲು ಎದುರಾಗುವ ಯಾವುದೇ ಇರಲಿ ಅದು ನಿನ್ನದು ಎಂದು ದೇವರಾದ ಯಹೋವನಿಗೆ ಹರಕೆ ಮಾಡುತ್ತಾನೆ. ಅದರ ನಂತರ ಅವನು ಮನೆಗೆ ಬಂದಾಗ ತನ್ನ ಸ್ವಂತ ಏಕೈಕ ಮಗಳು ಎದುರಿಗೆ ಬರುತ್ತಾಳೆ. ಅದನ್ನು ಕಂಡು ಮನನೊಂದು ಯಾಬಿಚೇಲನು ಗೋಳಾಡುತ್ತಾನೆ. ಆದರೆ ಹರಕೆ ಸಲ್ಲಿಸದೆ ಇರಲಾದೀತೆ ಹರಕೆ ಎಂಬುದು ಅಂದಷ್ಟು ಸುಲಭವಲ್ಲ. ಅದು ಒಮ್ಮೊಮ್ಮೆ ಹಿಮ್ಮುಖ ಮುಮ್ಮುಖತೆಗೆ ತಿರುಗಿಬಿಡುತ್ತದೆ. ಮಗಳ ಕೋರಿಕೆಯಂತೆ ಮೂರು ತಿಂಗಳು ತನ್ನ ಯೌವ್ವನವನ್ನು ಕಳೆಯಲು ತಂದೆಯ ಅಪ್ಪಣೆ ಪಡೆದು ಬೆಟ್ಟಕ್ಕೆ ತನ್ನ ಸರಿನಾರಿಯರೊಂದಿಗೆ ಹೋಗಿ ಬಂದನಂತರ ಆಕೆಯನ್ನು ದೇವರಿಗೆ ಅರ್ಪಿಸಲಾಗುತ್ತದೆ. ಆ ದಿನವನ್ನು ಇಂದಿನವರೆಗೂ ಇಸ್ರಾಯೇಲ್ ಜನಾಂಗದಲ್ಲಿ ಪವಿತ್ರ ದಿನವೆಂದು ಅದರ ಜ್ಞಾಪಕಾರ್ಥವಾಗಿ ಆಚರಿಸಲಾಗುತ್ತದೆ. (ಸತ್ಯವೇದ ಹಳೆಯ ಒಡಂಬಡಿಕೆಯ ನ್ಯಾಯಾ ಸ್ಥಾಪಕರು ಅಧ್ಯಾಯ ೧೧)

**ನಾಮಕರಣ**

ಜಗತ್ ಸೃಷ್ಟಿಯ ಸಂದರ್ಭದಲ್ಲಿ ದೇವರು ಮನುಷ್ಯನನ್ನು ಸೃಷ್ಟಿಸಿ 'ಆ್ಯಡಮ್' ಎಂದು ನಾಮಕರಣ ಮಾಡಿದ. ಆ್ಯಡಮ್ ಅಂದರೆ ಮೂಲ ಪುರುಷ. ನಂತರ ದೇವರು ಸಕಲಜೀವರಾಶಿಯನ್ನು ಉಂಟುಮಾಡಿದಾಗ ಆ್ಯಡಮನನ್ನು ಕರೆದು ಇವುಗಳಿಗೆ ಹೆಸರಿಡು ಎಂದು ಹೇಳಿದನಂತೆ, ಆಗ ಆತನು ಇಟ್ಟ ಹೆಸರುಗಳೇ ಇಂದಿಗೂ ನಾವು ಕರೆಯುತ್ತೇವೆ ಎಂಬ ನಂಬಿಕೆಯಿದೆ. (ಬೈಬಲ್ ಆದಿಕಾಂಡ ಭಾಗ ಮೊದಲ ಕೆಲವು ಅಧ್ಯಯನಗಳನ್ನು ಗಮನಿಸಬಹುದು)

ಚೇಳಗುರಿಕೆ ಎರ್ರಿತಾತನ ಭಕ್ತರು ಮಗುವಿಗೆ ನಾಮಕರಣ ಮಾಡುವಂತಹ ಸಂದರ್ಭದಲ್ಲಿ ಮೊದಲು ಪೂಜೆ ಮಾಡಿಸಿ ನಂತರ ನಾಮಕರಣ ಮಾಡುತ್ತಾರೆ. ಇಂಥಹ ಆಚರಣೆಗಳು ಗ್ರಾಮದ ಬಹುತೇಕ ಎಲ್ಲಾ ಸಮುದಾಯದವರು ಮಾಡುತ್ತಾರೆ. ಎಲ್ಲಾ ಸಮುದಾಯಗಳು ತಾತನಿಗೆ ನಡೆದುಕೊಳ್ಳುತ್ತಾರೆ ಎಂಬುದು ಗ್ರಾಮದ ಪ್ರತಿಮನೆಯಲ್ಲಿ ಕರೆಯಲ್ಪಡುವ ಆತನ ಹೆಸರಿನಿಂದಲೇ ಗುರುತಿಸಬಹುದು. ವಿಶೇಷವಾಗಿ ಚೇಳಗುರಿಕೆ ಗ್ರಾಮದವರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಹಾಗೆಯೇ ಅಕ್ಕಪಕ್ಕದ ಊರುಗಳಲ್ಲಿಯೂ ಆ ಹೆಸರುಗಳು ಕಂಡುಬರುತ್ತವೆ. ಹಗರಿ, ಶಿಡಗಿನಮೋಳೆ, ಜೋಳದರಾಶಿ, ವೀರಾಪುರ, ಮೀನಳ್ಳಿ, ಪರಮದೇವನಹಳ್ಳಿ, ಗೋಡೆಹಾಳ ಮುಂತಾದ ಗ್ರಾಮಗಳಲ್ಲಿಯೂ ಎರ್ರಿತಾತನ ಹೆಸರು ಇಡುವುದು ರೂಢಿಯಾಗಿದೆ. ತೀರ್ಥದ ನೀರು ಮಗುವಿನ ಮೇಲೆ ಸಿಂಪಡಿಸಿ ಪೂಜೆ ಮಾಡಿಸಿ ಮೊದಲು ಎರ್ರಿತಾತನ ಹೆಸರನ್ನು ಕರೆಯುತ್ತಾರೆ. ನಂತರದ ದಿನಗಳಲ್ಲಿ ಅವರಿಗೆ ಇಷ್ಟವಾದ ಜ್ಯೋತಿಷ್ಯಗಳಿಂದ ಜಾತಕ ತಿಳಿದು

ಹೆಸರು ಬದಲಾಯಿಸುತ್ತಾರೆ. ಇಂದಿನ ದಿನಮಾನಗಳಲ್ಲಿ ಅದರ ಸ್ವರೂಪ ಸ್ವಲ್ಪ ಬದಲಾದಂತಿದೆ, ಆಧುನಿಕ ಹೆಸರುಗಳನ್ನೇ ಹೆಚ್ಚಾಗಿ ಇಟ್ಟಿರುವುದು ಕಂಡುಬರುತ್ತದೆ. ನಾಮಕರಣ ಸಂದರ್ಭದಲ್ಲಿ ಮನೆಯಲ್ಲಿ ಒಮ್ಮೊಮ್ಮೆ ಮಠದಲ್ಲಿ ಊಟದ ವ್ಯವಸ್ಥೆಯನ್ನು ಮಾಡಿಸಲಾಗುತ್ತದೆ. ಬಂದ ಭಕ್ತರು ಅನ್ನ ಸಂತಾರ್ಪಣೆಯ ಜೊತೆಗೆ ಸಿಹಿ ಊಟವನ್ನು ಮಾಡಿ ಹೋಗುತ್ತಾರೆ ಎಂದು ಅಲ್ಲಿನ ಕೆಲವು ಭಕ್ತರನ್ನು ವಿಚಾರಿಸಿದಾಗ ತಿಳಿದು ಬಂದಿದೆ.

**ಜವಳ ಕಾರ್ಯ**

ನಾಮಕರಣಗೊಂಡು ಒಂದು ವರ್ಷ ತುಂಬುವುದರೊಳಗೆ ಇಲ್ಲವೇ ಮೂರು, ಐದು ವರ್ಷಗಳು ತುಂಬುವುದರೊಳಗಾಗಿ ಜವಳ ಕಾರ್ಯವನ್ನು ಮಾಡುವುದುಂಟು. ಈ ಕಾರ್ಯಕ್ರಮವನ್ನು ಮಾಡುವ ಸಂದರ್ಭದಲ್ಲಿ ಎಲ್ಲ ಬಂಧು-ಬಳಗದವರನ್ನು ಬರಮಾಡಿಕೊಂಡು ವಿಶೇಷ ಪೂಜೆ ಸಲ್ಲಿಸಲು ಎರ್ರಿತಾತನ ಮಠಕ್ಕೆ ಆಗಮಿಸುತ್ತಾರೆ. ಪೂಜೆ ಮಾಡಿಸಿ ತೀರ್ಥದ ನೀರನ್ನು ಹಾಕಿಸಿದ ನಂತರ ಅರ್ಚಕರಿಂದ 'ಎಲೆಗತ್ರಿ' ಹಾಕಿಸುತ್ತಾರೆ. ಅಂದರೆ ವೀಳ್ಯದೆಲೆಯನ್ನು ಕತ್ತರಿಯ ರೀತಿಯಲ್ಲಿ ಮಾಡಿ ಅರ್ಚಕರು ಮಗುವಿನ ಕೂದಲನ್ನು ಎಡಗೈಲಿ ಹಿಡಿದು ಬಲಗೈಲಿ ವೀಳ್ಯದೆಲೆಯ ಕತ್ತರಿಯಿಂದ ಶಾಸ್ತ್ರ ಪ್ರಕಾರವಾಗಿ ಕತ್ತರಿಸುವ ನೆಪ ಮಾಡುತ್ತಾರೆ. ಇದಾದ ನಂತರ ಮಗುವಿನ ಸೋದರ ಮಾವನಿಂದ ಕೂದಲನ್ನು ಕತ್ತರಿಸುತ್ತಾರೆ. ಕೂದಲನ್ನು ಕತ್ತರಿಸುವಂಥಹ ಸಂದರ್ಭದಲ್ಲಿ ಸೋದರಮಾವನಿಗೆ ಪೂಜೆಯ ಸಾಮಗ್ರಿಗಳಾದ ಎಲೆ, ಅಡಿಕೆ, ಅಕ್ಕಿ, ಬೆಲ್ಲ, ದಕ್ಷಿಣೆ ಇಟ್ಟು ಕಾರ್ಯವನ್ನು ಮುಗಿಸುತ್ತಾರೆ. ಕತ್ತರಿಸಿದ ಕೂದಲನ್ನು ಒಂದು ಬುಟ್ಟಿಯಲ್ಲಿಟ್ಟುಕೊಂಡು ಹೋಗಿ ಕೂದಲನ್ನು ಗಂಗೆಗೆ ಬಿಡುತ್ತಾರೆ. ಆ ದಿನದಂದು ಮಗುವಿಗೆ ಹೊಸಬಟ್ಟೆ ಹಾಕುತ್ತಾರೆ. ತಂದೆ ತಾಯಿಗಳೂ ಹೊಸಬಟ್ಟೆ ಧರಿಸುತ್ತಾರೆ. ಬಂಧುಗಳು ಮಗುವಿಗೆ ಹಣ, ಬಟ್ಟೆ, ವಸ್ತು, ಆಭರಣ ಮುಂತಾದ ರೀತಿಯಲ್ಲಿ ಮುಯ್ಯಿ ಮಾಡಿ, ಸಿಹಿ ಊಟ ಮಾಡಿ ಸಂತೋಷವಾಗಿ ಈ ಕಾರ್ಯವನ್ನು ಮುಗಿಸುತ್ತಾರೆ.

ಜವಳ ಕಾರ್ಯವು ಮಗುವಿನ ಮೇಲೆ ಯಾವುದೇ ದುಷ್ಟಶಕ್ತಿಗಳಾಗಲೀ ಮತ್ತು ದುಷ್ಟವ್ಯಕ್ತಿಗಳ ಕಪಿಮುಷ್ಟಿಯಿಂದ ರಕ್ಷಿಸಲು ಶಾಸ್ತ್ರಬದ್ಧವಾಗಿ ಮಾಡಲಾಗುವುದು. "ತಮ್ಮ ಪ್ರಿಯ ಸಂತರನ್ನು ಭಕ್ತರು ಕುದುರೆ ಸವಾರನ ರೂಪದಲ್ಲಿ ಆಹ್ವಾನಿಸುತ್ತಾರೆ. ಪ್ರಭುತ್ವ ಸಂಬಂಧಿಯಾದ ಈ ಪ್ರಾಣಿ ಕಂದನ ಜವಳಿ ಇಳಿಸುವ ಕಾರ್ಯಕ್ಕೆ ಸಂತನನ್ನು ಕರೆತರುವ ಕೆಲಸವನ್ನು ಮಾಡಬೇಕಾಗುತ್ತದೆ.

ಬಿಳಿಕುದುರೆ ಏರಿಕ್ಕೊಂಡು ಬಾರೊನ್ನೊರು ಸ್ವಾಮಿ
ಮಾಎದಿ ನನ್ನ ಮಾನಿಯಾಗ
ಮಾಲುದಿಯ್ಯ ನನ್ನ ಮನಿಯಾಗೊನ್ನೂರು ಸ್ವಾಮಿ
ಕಂದಾನ ಜವಳಿ ಇಳಿವೇನು

(ರಹಮತ್ ತರೀಕೆರೆ: ಕರ್ನಾಟಕದ ಸೂಫಿಗಳು ಪು.೧೪೯)

ಸಂತರ, ಅವಧೂತರ ಪರಂಪರೆಯಲ್ಲಿಯು ಸಹ ಜವಳಿಕಾರ್ಯಕ್ಕೆ ಹೆಚ್ಚಿನ ಪ್ರಾಮುಖ್ಯತೆಯಿರುವುದು ತಿಳಿದುಬರುತ್ತದೆ. ಮನುಷ್ಯನ ಬದುಕು ಎಷ್ಟು ಪರಿವರ್ತನೆಯಾದರೂ ಬದುಕಿಗೆ ಬುನಾದಿಯಂತಿದ್ದ ಆಚರಣೆಗಳು ರೂಪಿಕೆಹೊಂದುತ್ತವೆ ಹೊರತು ಅವುಗಳಿಗೆ ಯಾವತ್ತಿಗೂ ಕೊನೆಯೆಂಬುದಿಲ್ಲ. ಹಾಗಾಗಿಯೇ ಜನಪದರ ಆಚರಣೆಗಳು ಜೀವಂತಿಕೆಯ ಸ್ವರೂಪವನ್ನು ಪಡೆದು ಅನೇಕ ರೂಪಾಂತರಗಳಾಗಿ ಹಳ್ಳಿ ಗ್ರಾಮಗಳಿಗೂ ಅದರ ಪ್ರಖರತೆ ಕಂಡುಬರುತ್ತದೆ.

**ಮೈನೆರೆದ ಕಾರ್ಯ**

ಹುಡಿಗಿ ಹೆಣ್ಣಾಗುವ ಕಾಲವೇ ಮೈನೆರೆಯುವುದು. ಈ ಹಂತವನ್ನೇ ಪುಷ್ಪವತಿಯಾದಳು, ದೊಡ್ಡವಳಾದಳೆಂದು ಕರೆಯುವುದು ಸಾಮಾನ್ಯ. ಅಂದರೆ ವಿವಾಹಕ್ಕೆ ಅರ್ಹಳಾದವಳು ಎಂದರ್ಥ. ಬಾಲ್ಯ ವಿವಾಹ ಪದ್ಧತಿಯು ಸಹ ಅಲ್ಲಲ್ಲಿ ಇರುವುದು ಕಂಡುಬರುತ್ತದೆ. ಆ ದಿನದಂದು ಅವಳಿಗೆ ಹಾಲು, ತುಪ್ಪ ಎಣ್ಣೆ ಹಾಕಿ ತಲೆಸ್ನಾನ ಮಾಡಿಸಿ ಸಾಯಂಕಾಲ ಕುಳ್ಳಿರಿಸಿ ವಠಾರದಲ್ಲಿನ ಮುತ್ತೈದೆಯರು ಸೇರಿ ಆರತಿ ಮಾಡುವುದು. ಸೋಬಾನದ ಪದಗಳನ್ನು ಹಾಡುವುದು. ಋತುಮತಿಯಾದ ಒಂಭತ್ತು ಇಲ್ಲವೇ ಹದಿಮೂರನೆಯ ದಿವಸದಲ್ಲಿ ಆ ಹೆಣ್ಣು ಮಗಳಿಗೆ ತಲೆಸ್ನಾನ ಮಾಡಿಸಿ, ಎರ್ರಿತಾತನ ಮಠಕ್ಕೆ ಹೋಗಿ ವಿಶೇಷ ಪೂಜೆ ಸಲ್ಲಿಸಿ ತನಗೆ ಬೇಗ ಮದುವೆಯಾಗಲಿ, ಒಳ್ಳೆಯ ಗಂಡ ಲಭಿಸಲಿ ಎಂದು ಬೇಡಿಕೊಳ್ಳುತ್ತಾರೆ. ನಂತರ ಬಂಧುಗಳೆಲ್ಲ ಸೇರಿ ಸಿಹಿಯಾದ ಊಟಮಾಡಿ ಸಂತೋಷದಿಂದ ಈ ಕಾರ್ಯವನ್ನು ಮುಗಿಸುತ್ತಾರೆ. ಋತುಮತಿಯಾದ ದಿವಸವು (ಸಮಯವು) ಒಳ್ಳೆಯದಾಗಿದ್ದರೆ ಸರಿ, ಸಮಯ ಒಳ್ಳೆಯದಾಗದಿದ್ದಲ್ಲಿ ಪೂಜೆಮಾಡಿಸಿ ಶಾಂತಿ ಮಾಡುತ್ತಾರೆ.

ಕೆಲವು ಹೆಣ್ಣುಮಗಳು ಮೈನೆರೆದ ಸಂದರ್ಭದಲ್ಲಿ ಆ ಸಮಯವು ದೋಷಪೂರಿತವಾಗಿದ್ದರೆ ಅದರ ನಿವಾರಣೆಗೆ ದೇವರಿಗೆ ಮುಡಿ ಇಲ್ಲವೆ ತಲೆಕೂದಲನ್ನು ಒಪ್ಪಿಸುವುದು ಅನೇಕ ಶತಮಾನಗಳಿಂದ ರೂಢಿಯಲ್ಲಿದೆ. ಇದಕ್ಕೆ ಜನ್ನನ ಒಂದು ಕಾವ್ಯದ ಉಲ್ಲೇಖವನ್ನು ಕಲಬುರ್ಗಿ ಎಂ.ಎಂ.ಅವರು ಮಾಡಿದ್ದಾರೆ.

ತರುಣಿಯರ ಕರುಳಾ ನೀತಿಪಲ್
ಬೆರಲಂ ಕೊಳಲುರದ ಮೇಲೆ ಪೆಸರಕ್ಕರಮಂ
ಬರೆಯಲ್ಕಿಲ್ಲದ ಸಮಯಂ
ನೆರೆಯಲ್ಕಿಲ್ಲೆನಿಪ ಸೊಬಗಿನಭಿನವಮದನಂ|

ದೇವರಿಗೆ ತಲೆ ಕೂದಲನ್ನು ಅರ್ಪಿಸುವ, ಎದೆಯ ಮೇಲೆ ದೇವರ ಹೆಸರನ್ನು ಬರೆಯಿಸಿಕೊಳ್ಳುವ ಜನಪದ ಆಚರಣೆಗಳು ಸಮರ್ಪಣ ಭಾವವನ್ನು ಸೂಚಿಸುತ್ತವೆ. ದೇವರ ಹೆಸರನ್ನು ಎದೆಯ ಮೇಲೆ ಬರೆಯಿಸಿಕೊಳ್ಳುವ ಮತ್ತು ತಲೆಕೂದಲನ್ನು ಅರ್ಪಿಸುವುದು ಇಲ್ಲಿ ವಿಶೇಷವಾಗಿದೆ. ಏಕೆಂದರೆ ಮದುವೆ ಬೇಗ ಆಗಲಿ ಎಂದು. ಬಹಳ ವರ್ಷಗಳು ಮದುವೆ ಆಗದ ಪರಿಸ್ಥಿತಿ ಬಾರದಿರಲೆಂದು ಮೈನೆರೆದ ಕೆಲವು

ದಿನಗಳಲ್ಲಿ ಕೂದಲನ್ನು ಕೊಡುತ್ತಾರೆ ಎಂದು ಇಲ್ಲಿನ ಒಬ್ಬ ವಕ್ತೃವಿನ ಮಾತು ಕೇಳಿ ಆಶ್ಚರ್ಯವಾಯಿತು. ಹಣ್ಣು ಫಲಭರಿತ ಮರಗಿಡಗಳಂತೆ ಇಗಲು ಅಂಥಹ ಅನೇಕ ಧಾರ್ಮಿಕ ಆಚರಣೆಗಳು ಸಮಾಜದಲ್ಲಿ ಬೇರೂರಿವೆ.

**ಮದುವೆ**

ಮದುವೆಯೆಂಬುದು ಸ್ವರ್ಗದಲ್ಲಿ ನಿಶ್ಚಯಿಸಲಾಗಿರುತ್ತದೆ ಎಂಬುದು ಜನಪದರ ನಂಬಿಕೆ. ಗೃಹಸ್ಥಾಶ್ರಮಕ್ಕೆ ಕಾಲಿಡುವ ಹಂತವಾಗಿದ್ದು ಹಾಗೂ ಜೀವನದ ಎರಡನೆಯ ಅತೀಮುಖ್ಯ ಘಟ್ಟವಾಗಿದೆ. ದಾಂಪತ್ಯವು ಎಲ್ಲಾ ವಿಷಯಗಳಲ್ಲಿ ಘನವಾದದ್ದು ಎಂದು ಧರ್ಮಗ್ರಂಥಗಳು ತಿಳಿಸುತ್ತವೆ. ಏಕೆಂದರೆ ಜೀವನದ ಮತ್ತು ವಂಶವೃದ್ಧಿಗೆ ಬಹುಮುಖ್ಯವಾಗಿರುವುದರಿಂದ ಮದುವೆಯ ಕಾಲದಲ್ಲಿ ಎರ್ರಿತಾತನ ಮಠದಲ್ಲಿ ಸಮಾರಂಭಗಳು ಜರುಗುತ್ತವೆ. ಮದುವೆಯ ಸಂದರ್ಭದಲ್ಲಿ ವಿಶೇಷ ಪೂಜೆ ಪುನಸ್ಕಾರಗಳನ್ನು ಮಾಡುತ್ತಾರೆ. ಮದುಮಗನು ಮಠಕ್ಕೆ ಹೋಗಿ ಮೊದಲು ಪೂಜೆಮಾಡಿ ನಂತರ ಉಳಿದ ದೇವರಿಗೆಲ್ಲಾ ಪೂಜೆ ಸಲ್ಲಿಸುವ ಪದ್ಧತಿಯಿದೆ. ಇಲ್ಲಿ ಹೆಚ್ಚಾಗಿ ವೀರಶೈವ ಸಮುದಾಯದವರು ಮದುಮಗನಿಗೆ ಶಾಸ್ತ್ರೋಕ್ತವಾಗಿ, ಸಂಪ್ರದಾಯವಾಗಿ ಕಾರ್ಯಕ್ರಮಗಳನ್ನು ಮಾಡುತ್ತಾರೆ. ಮಠದಲ್ಲಿ ಮದುಮಗನಿಗೆ ಅರಿಸಿನ ಹಚ್ಚಿ ಕೈಗೆ ಕಂಕಣವನ್ನು ಮಠಾಧಿಪತಿಗಳು ಕಟ್ಟುತ್ತಾರೆ. ಶಾಲುಹೊದಿಸುತ್ತಾರೆ. ಕೈಯಲ್ಲಿ ಒಂದು ನಿಂಬೆಹಣ್ಣು ಕೊಟ್ಟು ಅತ್ತಿತ್ತ ತಿರುಗಾಡದಂತೆ ಸೂಚಿಸುತ್ತಾರೆ. ನಂತರ ಮನೆದೇವರಿಗೆ ಪೂಜೆ ಸಲ್ಲಿಸಿ ದೇವರ ಆಶೀರ್ವಾದ ಪಡೆದು ನಂತರ ಇತರೆ ದೇವರಿಗೆ ಹೋಗುತ್ತಾರೆ. ಆ ನಂತರ ಮದುವೆಯ ಶಾಸ್ತ್ರಗಳನ್ನು ಮಾಡುತ್ತಾರೆ. ಅನೇಕರು ಮನೆಯ ದೇವರಿಗೆ ಪೂಜೆಸಲ್ಲಿಸಿ ನಂತರ ಉಳಿದ ದೇವರಿಗೆ, ಮಠಕ್ಕೆ ಪೂಜೆ ಸಲ್ಲಿಸುತ್ತಾರೆಂದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ.

ಚೇಳ್ಳಗುರಿಕೆ ಗ್ರಾಮದ ಎಲ್ಲಾ ಸಮುದಾಯದವರು ಮುಹೂರ್ತಕ್ಕೆ ಹೋಗುವಂತಹ ಸಂದರ್ಭದಲ್ಲಿ ಎರ್ರಿತಾತನ ಮಠಕ್ಕೆ ಬಂದು ಹಣ್ಣು ಕಾಯಿ ಮಾಡಿಸಿ ನಂತರ ತೀರ್ಥವನ್ನು ವಧು ವರರ ಮೇಲೆ ಚಿಮ್ಮಿಸಿ ನಂತರ ಮುಹೂರ್ತದ ಕಾರ್ಯಕ್ರಮ ನಡೆಯುತ್ತದೆ. ಮುಹೂರ್ತ ಆದ ಮೇಲೆ ರಾತ್ರಿ ಸಮಯದಲ್ಲಿ ಮೆರವಣಿಗೆ ಮಾಡಿ ಊರಲ್ಲಿರುವ ಎಲ್ಲಾ ದೇವರುಗಳಿಗೂ, ಮನೆಯ ದೇವರಿಗೂ ಹಣ್ಣು ಕಾಯಿ ಕರ್ಪೂರ ಮಾಡಿಸುತ್ತಾರೆ. ಈ ರೀತಿಯ ಆಚರಣೆಗಳನ್ನು ಎಲ್ಲಾ ಸಮುದಾಯದವರಲ್ಲಿ ಕಾಣಬಹುದು. ಆದರೆ ಮಾದಿಗ ಸಮುದಾಯದಲ್ಲಿ ಸ್ವಲ್ಪ ವ್ಯತ್ಯಾಸವನ್ನು ಕಾಣುತ್ತೇವೆ. ಈ ಜನಾಂಗದ ಹಿರಿಯರು ಮಠದೊಳಗೆ ಹೋಗಲು ಹಿಂಜರಿಯುತ್ತಾರೆ. ಏಕೆಂದರೆ ದೇವರು ಒಳ್ಳೆಯದು ಮಾಡುವುದಿಲ್ಲ ಎಂಬ ಭಾವನೆ, ಅರ್ಚಕರು ಒಳಗೆ ಪ್ರವೇಶಿಸುವಂತೆ ಕರೆದರೂ ಅವರು ಪ್ರವೇಶ ಮಾಡುವುದಿಲ್ಲ ಎಂದು ಎರ್ರಪ್ಪ ಎಂಬ ಅರವತ್ತೈದು ವಯಸ್ಸಿನ ವಕ್ತೃವು ನೀಡಿದ ಮಾಹಿತಿ. ಆದರೆ ಇಂದಿನ ದಿನಮಾನಗಳಲ್ಲಿ ಗ್ರಾಮದ ಯುವಕರು ಯಾವುದೇ ರೀತಿಯ ಒತ್ತಡಗಳಿಗೆ ಒಳಗಾಗದೇ ಮಠದೊಳಗೆ ಪ್ರವೇಶಮಾಡುತ್ತಾರೆ ಎಂಬುದು ತಿಳಿದುಬಂದಿದೆ.

**ಮರಣ**

ಪ್ರತಿಯೊಬ್ಬ ಮನುಷ್ಯನು ಹುಟ್ಟಿದ ಮೇಲೆ ಸಾಯಲೇಬೇಕೆಂಬುದು ಪ್ರಕೃತಿಯ ನಿಯಮ. ಆದರೆ

ಈ ಹುಟ್ಟು ಸಾವಿನ ನಡುವೆ ಇರುವ ಜೀವಿತದ ಕಾಲವು ಬಹುಮುಖ್ಯವಾದದ್ದು. ಈ ಜೀವಿತಾವಧಿಯಲ್ಲಿ ಮನುಷ್ಯ ಒಳ್ಳೆಯ ಸಾಧನೆಗಳನ್ನು ಸಾಧಿಸಲು ಪ್ರಯತ್ನಿಸುತ್ತಾನೆ. ಈ ಪ್ರಯತ್ನಗಳು ಫಲಿಸಬೇಕಾದರೆ ಮನುಷ್ಯ ಒಂದಲ್ಲ ಒಂದು ರೀತಿಯ ದೈವಶಕ್ತಿಯನ್ನು ಆರಾಧಿಸುತ್ತಾನೆ. ಏಕೆಂದರೆ ದೇವರನ್ನು ನಂಬಿದಷ್ಟು ಈ ವೈಜ್ಞಾನಿಕತೆಯನ್ನು ನಂಬಲಾರ. ಇಂತಹ ನಂಬಿಕೆಯನ್ನು ಮುಖ್ಯವಾಗಿ ಗ್ರಾಮೀಣ ಪ್ರದೇಶದ ಜನರಲ್ಲಿ ಹೆಚ್ಚಾಗಿ ಕಾಣಬಹುದು. ಚೇಳಗುರಿಕಿ ಗ್ರಾಮದಲ್ಲಿ ಎರ್ರಿತಾತನು ದೇವರು ಎಂಬ ನಂಬಿಕೆ ಮನದಟ್ಟಾಗಿ ಬಿಟ್ಟಿದೆ. ವಿಶೇಷವಾಗಿ ವೀರಶೈವ ಸಮುದಾಯದಲ್ಲಿ ಮರಣ ಹೊಂದಿದರೆ, ಅವರ ಸಂಪ್ರದಾಯದಂತೆ ಶವಸಂಸ್ಕಾರವನ್ನು ಮಾಡುತ್ತಾರೆ. ಸತ್ತಂತಹ ವ್ಯಕ್ತಿಯನ್ನು ಸ್ನಾನ ಮಾಡಿಸಿ ಹೊಸಬಟ್ಟೆ ತೊಡಿಸಿ ವಿಭೂತಿ ಹಚ್ಚಿ ಹೂವಿನಹಾರವನ್ನು ಹಾಕಿ ದೇವರಿಗೆ ಸಮಾನವೆಂದು ಪೂಜಿಸಿ ಶವಸಂಸ್ಕಾರ ಮಾಡುತ್ತಾರೆ. ಈ ಶವಸಂಸ್ಕಾರ ಮಾಡುವಂತಹ ಪದ್ಧತಿ ಎಲ್ಲಾ ಸಮುದಾಯದವರ ವಿರುದ್ಧವಾಗಿರುತ್ತದೆ. ಏಕೆಂದರೆ ಸತ್ತಂತಹ ವ್ಯಕ್ತಿಯನ್ನು ಊಳುವಾಗ ತಪಸ್ಸಿನ ರೀತಿಯಲ್ಲಿ ಆ ಶವವನ್ನು ಕುಳ್ಳಿರಿಸಿ ಸುತ್ತಲೂ ಸುಮಾರು ೫೦೦ ರಿಂದ ೬೦೦ ವಿಭೂತಿ ಕಟ್ಟುಗಳನ್ನು ಹಾಕಿ ಊದುಬತ್ತಿ ಹಚ್ಚಿ ಶವಸಂಸ್ಕಾರ ಮಾಡುತ್ತಾರೆ. ಇನ್ನು ಕೆಲವು ಸಮುದಾಯದವರು ಶವವನ್ನು ಸುಡುತ್ತಾರೆ. ಆದರೆ ವೀರಶೈವರು ಭೂಮಿಯನ್ನು ಅಗೆದು ಮನೆಮಾಡಿ ಊಳುತ್ತಾರೆ. ಆದರೆ ಮುಸ್ಲಿಂ ಸಮುದಾಯದಲ್ಲಿ ಶವಸಂಸ್ಕಾರ ಮಾಡುವ ಪದ್ಧತಿ ಹಿಂದೂಗಳ ಪದ್ಧತಿಗೆ ವಿರುದ್ಧವಾಗಿದೆ.

ಹಿಂದೂಗಳ ಶವಸಂಸ್ಕಾರ ಮುಗಿದ ನಂತರ ಹೊಳೆ, ಬಾವಿ, ಕೆರೆ, ಹಳ್ಳಗಳಲ್ಲಿ ಇಲ್ಲವೇ ಮನೆಯಲ್ಲಿ ಸ್ನಾನ ಮಾಡುತ್ತಾರೆ. ಆದರೆ ಮುಸ್ಲಿಂ ಸಮುದಾಯದವರು ಶವಸಂಸ್ಕಾರಕ್ಕೆ ಹೋಗುವ ಮುನ್ನವೇ ಸ್ನಾನ ಮಾಡಿ ದೇವರಲ್ಲಿ ವಂದಿಸಿ ಶವಸಂಸ್ಕಾರಕ್ಕೆ ಹೋಗುವ ಪದ್ಧತಿಯಿದೆ. ವೀರಶೈವ ಸಮುದಾಯದವರ ಮನೆಯಲ್ಲಿ ಮರಣಹೊಂದಿದ ಮನೆಗೆ ಹಾಗೂ ಅವರ ಸಂಬಂಧಿಕರ ಮನೆಗಳಿಗೆ ಬೇರೆಯವರು ಪ್ರವೇಶಿಸುವಂತಿಲ್ಲ. ಏಕೆಂದರೆ ಅವರ ಮನೆಯು ಮುಟ್ಟಾಗಿದೆ ಎಂದು ತಿಳಿದು ಮನೆಯನ್ನು ಸುಣ್ಣ ಬಣ್ಣಗಳಿಂದ ಬಳಿದು ದೀಪ ಹಾಕಿ ಎಡೆ ಹಾಕಿದ ನಂತರ ಅವರ ಮನೆಗಳಿಗೆ ಪ್ರವೇಶಿಸುತ್ತಾರೆ. ಊರಿನ ಕೆಲವು ಜನರಿಗೆ, ಬಂಧುಗಳಿಗೆ ಊಟ ಮಾಡಿಸುತ್ತಾರೆ. ಅಲ್ಲಿಯವರೆಗೂ ಆ ಮನೆಯವರು ದೇವಸ್ಥಾನದ ಒಳಗೆ ಹೋಗುವಂತಿಲ್ಲ, ಪೂಜೆ ಸಲ್ಲಿಸುವಂತಿಲ್ಲ. ಒಂದು ವೇಳೆ ದೇವಸ್ಥಾನಕ್ಕೆ ಹೋಗಿ ಪೂಜೆ ಸಲ್ಲಿಸಿದರೆ ಅದರಿಂದ ದೇವರು ಕೋಪಗೊಂಡು ಶಾಪ ಹಾಕಬಹುದೆಂಬ ಇಲ್ಲವೇ, ಆಪತ್ತು ಬಂದೊದಗುತ್ತದೆ ಎಂಬ ಭಯ ಜನರಲ್ಲಿ ಬೇರೂರಿದೆ. ಆದ್ದರಿಂದ ಈ ಎಲ್ಲಾ ಕಾರ್ಯಗಳನ್ನು ಮಾಡುವ ಪದ್ಧತಿಗಳಿವೆ.

ಎರ್ರಿತಾತನ ಮಠದ ಅರ್ಚಕರು ಮರಣಹೊಂದಿದಾಗ ಅವರನ್ನು ವಿಶೇಷವಾದ ರೀತಿಯಲ್ಲಿ ಶವಸಂಸ್ಕಾರ ಮಾಡುತ್ತಾರೆ. ಕೇವಲ ಬಂಧು ಬಳಗದವರು ಮಾತ್ರ ಶವ ಸಂಸ್ಕಾರಕ್ಕೆ ಬರುವುದಲ್ಲದೇ ಭಕ್ತರೆಲ್ಲರೂ ಜಾತಿ ಭೇದಗಳಿಲ್ಲದೇ ಲಿಂಗ ಭೇದಗಳಿಲ್ಲದೇ ಅವರ ಶವಸಂಸ್ಕಾರಕ್ಕೆ ಬರುತ್ತಾರೆ. ಅವರ ಸವಿನೆನಪಿಗಾಗಿ ಸಮಾಧಿಯನ್ನು ಕಟ್ಟಿಸುತ್ತಾರೆ. ಎರ್ರಿತಾತನ ಸಮಾಧಿಕ್ಷೇತ್ರದ ಹಿಂದೆ ಮಠಕ್ಕಾಗಿ ದುಡಿದು ಮರಣಹೊಂದಿದ

ಶಾಮಣ್ಣನವರ ಸಮಾಧಿ ಅದರ ಹಿಂದುಗಡೆ ಕಟ್ಟಿಸಲಾಗಿದೆ. ಇಂಥಹ ಸಮಾಧಿಗಳನ್ನು ದೇವರ ಮನೋಭಾವನೆಯಿಂದ ಪೂಜಿಸುತ್ತಾರೆ.

### ೩.೩. ವಾರ್ಷಿಕಾವರ್ತನ ಆಚರಣೆಗಳು

#### ದೈನಂದಿನ ಆಚರಣೆ

ದಿನಚರಿಯಂತೆ ಅರ್ಚಕ ಬೆಳಿಗ್ಗೆ ಐದುಗಂಟೆಗೆ ಎದ್ದು ಮೊದಲು ತಾನು ಶುದ್ಧವಾಗಿ ನಂತರ ದೇವಸ್ಥಾನದ ಗರ್ಭಗುಡಿಯಿಂದ ಹೊರಗಿನವರೆಗೂ ಶುಭ್ರವಾಗಿ ಕಸಗುಡಿಸಿ ನೀರನ್ನು ಚಿಮ್ಮಿಸಿ ದೇವರಿಗೆ ಮುಖ ತೊಳೆದು ಊದುಬತ್ತಿಯನ್ನು ಹಚ್ಚಿ ನಂತರ ಸುಪ್ರಭಾತ ಮತ್ತು ಭಕ್ತಿಗೀತೆಗಳನ್ನು ಹಾಕುತ್ತಾರೆ. ಅದರಿಂದ ಗ್ರಾಮದ ಜನ ಬೆಳಗಾಗಿದೆಯೆಂದು ಎದ್ದು ತಮ್ಮ ದಿನ ನಿತ್ಯದ ಕಾರ್ಯಗಳಲ್ಲಿ ತೊಡಗುತ್ತಾರೆ. ಗ್ರಾಮದ ಜನರನ್ನು ನಿದ್ರೆಯಿಂದ ಎದ್ದೇಳಿಸುವ ಕೆಲಸ ಧ್ವನಿವರ್ಧಕ ಮಾಡುತ್ತದೆ. ಜನರು ಯಾವ ಯಾವ ಕೆಲಸಗಳಿಗೆ ಆಧಾರದ ಮೇಲೆ ಇರುವರೋ ಅವರು, ಆಯಾಯ ಕೆಲಸಗಳಿಗೆ ಮಗ್ನರಾಗಲು ಮುಂದಾಗುತ್ತಾರೆ. ಅದೊಂದು ರೀತಿಯ ಗಡಿಯಾರವಿದ್ದಂತೆ. ಗ್ರಾಮೀಣ ಜನರು ಹಗಲೆಲ್ಲಾ ಕಷ್ಟಪಟ್ಟು ಬೆವರು ಸುರಿಸಿ ದುಡಿದು ದೇಹದಣಿವಾರಿಸಿಕೊಳ್ಳುವಂಥಹ ಸಂದರ್ಭ. ಅಂದರೆ ಸಾಯಂಕಾಲ ಆರು ಗಂಟೆಗೆ ಗುಡಿಯ ಒಳಗಿನಿಂದ ಹೊರಗಿನವರೆಗೆ ಶುದ್ಧಮಾಡಿ, ನೀರನ್ನು ಚಿಮ್ಮಿಸಿ ದೇವರಿಗೆ ದೀಪ, ಊದುಬತ್ತಿ ಹಚ್ಚಿ ಮತ್ತೆ ಭಕ್ತಿಗೀತೆಗಳನ್ನು ಹಚ್ಚುವುದು. ಅದರಿಂದ ಹೊಲಗಳಲ್ಲಿ ಕೆಲಸ ಮಾಡುವಂತಹ ಜನರು ಕೆಲಸ ಕಾರ್ಯಗಳನ್ನು ಮುಗಿಸಿ ದನ, ಕರು, ಆಡು ಇತ್ಯಾದಿ ಪ್ರಾಣಿಗಳು ಸಹ ಮನೆಗೆ ಹಿಂದಿರುಗುವುದು. ಅಂಥಹ ಸಂದರ್ಭದಲ್ಲಿ ದಣಿದು ಬಂದ ರೈತರು, ಕಾರ್ಮಿಕರು, ಕೂಲಿಕಾರರು ಮಠದಲ್ಲಿ ಕುಳಿತು ಹಾಡು, ಭಕ್ತಿಗೀತೆಗಳನ್ನು, ಜನಪದ ಗೀತೆಗಳನ್ನು, ದೇವರ ಸ್ತುತಿ ಗೀತೆಗಳನ್ನು ಕೇಳುತ್ತಾರೆ.

#### ವಾರದ ಪೂಜೆ

ಪ್ರತಿವಾರದ ಸಂದರ್ಭದಲ್ಲಿಯೂ ಸ್ವಲ್ಪ ವಿಶೇಷವಾಗಿ ಪೂಜೆ ಪುನಸ್ಕಾರವನ್ನು ಮಾಡುತ್ತಾರೆ. ಎರ್ರಿತಾತನನ್ನು ಹೆಚ್ಚಾಗಿ ಜನರು ಸೋಮವಾರ ಬಂದು ಪೂಜೆ ಅಭಿಷೇಕ ಮಾಡಿಸುತ್ತಾರೆ. ಆ ದಿನದಂದು ಎರ್ರಿತಾತನ ವಿಗ್ರಹಕ್ಕೆ ತುಂಬಿದ ಕೊಡದ ನೀರಿನಿಂದ ಮುಖತೊಳೆದು ವಿಭೂತಿ, ಕುಂಕುಮ, ಗಂಧ, ಹೂವಿನಹಾರಗಳಿಂದ ಪೂಜಿಸಿ ಪ್ರಸಾದ ಹಾಗೂ ತೀರ್ಥದ ನೀರನ್ನು ಬಂದ ಭಕ್ತಾಧಿಗಳೆಲ್ಲರಿಗೂ ಕೊಡುತ್ತಾರೆ. ಆ ದಿನದಲ್ಲಿ ಉಡುಗೆಗಳನ್ನು ಮಾರ್ಪಡಿಸಲಾಗುತ್ತದೆ. ಶುಭ್ರವಾಗಿ ತೊಳೆದ ಮಡಿಬಟ್ಟೆಯಿಂದ ಮಾತ್ರ ಹೊದಿಸುತ್ತಾರೆ.

ಆ ದಿನದಂದು ಚೇಳಗುರಿಕೆ ಗ್ರಾಮವಷ್ಟೇ ಅಲ್ಲ ಅಕ್ಕಪಕ್ಕದ ವಿವಿಧ ಗ್ರಾಮಗಳ ಭಕ್ತರು ಬಂದು ಪೂಜೆ ಪುನಸ್ಕಾರಗಳನ್ನು ಮಾಡಿಸುವುದು ಸಾಮಾನ್ಯವಾಗಿದೆ. ಆ ನಂತರ ರೈತರು ಮಠಕ್ಕೆ ಬಂದು ಪೂಜೆಗಳನ್ನು ಮಾಡಿಸುತ್ತಾರೆ. ಅಲ್ಲಿ ನೆರೆದಿದ್ದ ಭಕ್ತ ಸಮೂಹಕ್ಕೆ ಕೆಲವೊಮ್ಮೆ ಪುರಾಣಗಳನ್ನು, ಎರ್ರಿತಾತನ ಕುರಿತ ವಿಶೇಷ ಶಕ್ತಿ ಹಾಗೂ ಭಕ್ತಿಯನ್ನು ಕುರಿತು ಮಾಹಿತಿ ನೀಡುತ್ತಾರೆ. ಗ್ರಾಮದ ಹೆಂಗಸರು ಕೆಲವೊಬ್ಬರು ವಿಶೇಷ ಪೂಜೆಗೆ ಕುಟುಂಬ ಸಮೇತರಾಗಿ ಬಂದು ಹೋಗುತ್ತಾರೆ.

**ಅಮಾವಾಸ್ಯೆ ದಿನದ ಆಚರಣೆ**

ಅಮಾವಾಸ್ಯೆ ದಿನದಂದು ಎರ್ರಿತಾತನಿಗೆ ವಿಶೇಷವಾದ ಪೂಜೆಯು ನಡೆಯುತ್ತದೆ. ಅಂದು ಹರಕೆ ಹೊತ್ತ ಭಕ್ತರು ಅಭಿಷೇಕ ಮಾಡಿಸುತ್ತಾರೆ. ಅಭಿಷೇಕಕ್ಕೆ ಬೇಕಾದ ಎಲ್ಲಾ ಪೂಜಾ ಸಾಮಾಗ್ರಿಗಳನ್ನು ಕ್ರೋಢೀಕರಿಸಿಕೊಂಡು ಮಡಿಯಿಂದ ದೇವಸ್ಥಾನವನ್ನೆಲ್ಲಾ ತೊಳೆದು ತುಂಬಿದ ಕೊಡದ ನೀರಿನಿಂದ ದೇವರ ವಿಗ್ರಹವನ್ನು ತೊಳೆದು ಶೃಂಗಾರ ಮಾಡಿ ಅಭಿಷೇಕಕಾರ್ಯವನ್ನು ಮಾಡುತ್ತಾರೆ. ಅಭಿಷೇಕ ಮುಗಿಯುವವರೆಗೂ ಭಕ್ತಾದಿಗಳು ಉಪವಾಸ ವ್ರತವನ್ನು ಮಾಡುತ್ತಾರೆ. ಅಲ್ಲಿಯವರೆಗೂ ಬಾಯಲ್ಲಿ ಒಂದು ಹನಿ ನೀರನ್ನು ಸಹ ಹಾಕದೆ ಪೂಜೆ ಮುಗಿದ ನಂತರ ತಾತನ ಪ್ರಸಾದವನ್ನು ತೆಗೆದುಕೊಳ್ಳುತ್ತಾರೆ. ಆ ದಿನದಂದು ಸುತ್ತಮುತ್ತಲಿನ ಗ್ರಾಮಗಳ ಭಕ್ತಾದಿಗಳು ನಡೆದುಕೊಂಡು ಎರ್ರಿತಾತನ ಮಠಕ್ಕೆ ಬಂದು ತಮ್ಮ ಭಯಭಕ್ತಿಯನ್ನು ದೇವರಿಗೆ ಅರ್ಪಿಸುತ್ತಾರೆ. ಹೂವು, ಹಣ್ಣು, ಕರ್ಪೂರ, ಊದುಬತ್ತಿಯನ್ನು ತಾತನ ಸಮಾಧಿಗೆ ಅರ್ಪಿಸಿ, ನಂತರ ಪ್ರಸಾದಕ್ಕಾಗಿ ಸಿಹಿಯಾದ ಹುಗ್ಗಿ, ಹೋಳಿಗೆ, ಅನ್ನ, ಪಲ್ಯ, ಇತರೇ ಅಡಿಗೆಯನ್ನು ಮಾಡಿ ಅರ್ಪಿಸುವುದು ಹಿಂದಿನಿಂದಲೂ ಬಂದ ಸಂಪ್ರದಾಯವಾಗಿದೆ. ಅಲ್ಲಿ ದಾಸೋಹದ ಪ್ರಸಾದವನ್ನು ಸ್ವೀಕರಿಸುತ್ತಾರೆ.

ಅಮವಾಸ್ಯೆಯಂದು ಚಂದ್ರಮ ಉದಯಿಸುವುದಿಲ್ಲವಾದ್ದರಿಂದ ರಾತ್ರಿ ಕತ್ತಲೆ ಆವರಿಸುತ್ತದೆ. ಆ ದಿನದಂದು ಮಠದಲ್ಲಿ ಔಡಲ ಎಣ್ಣೆಯಿಂದ ದೀಪವನ್ನು ಹಚ್ಚಿ ಇಡೀ ರಾತ್ರಿ ದೀಪ ಆರದಂತೆ ಎಚ್ಚರವಹಿಸುತ್ತಾರೆ. ಯಾವುದೇ ಕಾರಣಕ್ಕೂ ದೀಪ ಆರಬಾರದು. ದೀಪ ಆರಿದರೆ ಆ ಊರಿಗೆ ಅನಿಷ್ಟ ಬರುತ್ತದೆ ಎಂಬ ನಂಬಿಕೆ ಆ ಭಕ್ತಾದಿಗಳಲ್ಲಿ ಹಿಂದಿನಿಂದಲೂ ಬೆಳೆದು ಬಂದಿರುವುದರಿಂದ ಇಡೀ ರಾತ್ರಿ ದೀಪ ಆರದಂತೆ ನೋಡಿಕೊಳ್ಳುವುದು ಭಕ್ತಾದಿಗಳ ಮುಖ್ಯ ಜವಾಬ್ದಾರಿಯಾಗಿದೆ. ಆ ಕತ್ತಲೆಯ ರಾತ್ರಿಯಲ್ಲಿ ದೀಪದ ಬೆಳಕಿಗೆ ಎರ್ರಿತಾತನ ಮೂರ್ತಿ ಹೊಳೆಯುತ್ತಿರುತ್ತದೆ. ಅಮಾವಾಸ್ಯೆ ದಿನವು ಮಾಟ, ಮೋಡಿ, ಮಂತ್ರ ಮಾಡುವವರಿಗೆ ಒಳ್ಳೆಯ ದಿನವಾಗಿರುತ್ತದೆ. ಅಂದು ಆ ಗ್ರಾಮದ ಜನರಿಗೆ ವಿಶೇಷವಾಗಿ ಮಕ್ಕಳಿಗೆ ಆರೋಗ್ಯ ಸರಿಯಿಲ್ಲದಿದ್ದರೆ ಮಠಕ್ಕೆ ಬಂದು ತಾಯತ ಕಟ್ಟಿಸುವುದು, ನಿಂಬೆ ಹಣ್ಣನ್ನು ಮಂತ್ರಿಸಿ ಕೊಡುವುದು, ಮನೆಯ ಶಾಂತಿಗಾಗಿ ಅಂತರಕಟ್ಟಿಸುವುದು. ಇಂಥಹ ಹಲವಾರು ಆಚರಣ ವಿಧಿ ವಿಧಾನಗಳು ಅಮಾವಾಸ್ಯೆಯ ದಿನದಂದು ಜರುಗುತ್ತವೆ.

**ಹುಣ್ಣಿಮೆ ದಿನದ ಆಚರಣೆ**

ಸಾಮಾನ್ಯವಾಗಿ ಅಮಾವಾಸ್ಯೆಯ ದಿನದಂದು ಮಾಡುವ ಆಚರಣೆಯು ಹುಣ್ಣಿಮೆಯ ದಿನದಂದೂ ನಡೆಯುತ್ತದೆ. ಪೂಜೆ ಪುನಸ್ಕಾರಗಳು, ವಿಶೇಷ ಹರಕೆಗಳಿದ್ದರೆ ಹುಣ್ಣಿಮೆ ದಿನವು ಸಹ ಸಲ್ಲಿಸುತ್ತಾರೆ. ಆ ದಿನದಂದು ಅರ್ಚಕರು ಮಠವನ್ನು ಸ್ವಚ್ಛಗೊಳಿಸಿ ದೀರ್ಘದಂಡ ನಮಸ್ಕಾರಗಳನ್ನು ಹಾಕುತ್ತಾರೆ. ಮಾಸಿಕದಲ್ಲಿ ಎರಡು ಭಾರಿ ಮಠವನ್ನು ಶುಚಿಗೊಳಿಸುತ್ತಾರೆ. ಅಲ್ಲಿ ಯಾವುದೇ ರೀತಿ ಮೇಲು ಕೀಳು ಎಂಬ ಭೇದವಿಲ್ಲದೆ ಒಂದಾಗಿ ತಾತನ ಅರ್ಚನೆಗೆ ಶುದ್ಧವಾದ ಮನಸ್ಸಿನಿಂದ ತಾತನ ಸನ್ನಿಧಿಗೆ ಬಂದು ಹೋಗುತ್ತಾರೆ.

## ಬನ್ನಿ ಮತ್ತು ಆಯುಧ ಪೂಜೆ

ಅಶ್ವಯುಜ ಮಾಸದ ಶುದ್ಧ ಪಾಡ್ಯಮಿಯಿಂದ ದಶಮಿಯವರೆಗೂ ಹತ್ತುದಿನಗಳು ಬಹುಪ್ರಾಶಸ್ತ್ಯವಾದವುಗಳು. ಮೊದಲ ಒಂಭತ್ತು ದಿನಗಳನ್ನು ನವರಾತ್ರಿಯೆಂದು ಹತ್ತನೆಯ ದಿನವನ್ನು ವಿಜಯದಶಮಿಯೆಂದು ಕರೆಯುವುದುಂಟು. ಶರದ್ ಋತುವಿನಲ್ಲಿ ಬರುವುದರಿಂದ ಶರನ್ನವರಾತ್ರಿ ಎಂದು ಹೇಳುವರು. ಈ ಹತ್ತು ದಿನಗಳಲ್ಲಿಯೂ ಹಿಂದುಗಳು ಶಕ್ತಿಪೂಜಾ ಸಂಬಂಧದ ಉಪಾಸನೆಯನ್ನು ನಡೆಸುವರು. ಈ ನವರಾತ್ರಿ ಸಂದರ್ಭದಲ್ಲಿ ಅನೇಕರು ನಾಡಹಬ್ಬ ಆಚರಿಸುವುದುಂಟು. ನವರಾತ್ರಿಗೂ ನಾಡಹಬ್ಬಕ್ಕೂ ನೇರವಾದ ಸಂಬಂಧವಿಲ್ಲದಿದ್ದರೂ ನಾಡಹಬ್ಬವನ್ನು ಆಚರಿಸುವುದಕ್ಕೆ ಈ ಅಶ್ವಯುಜ ಮಾಸದ ನವರಾತ್ರಿಯ ಶರದೋತ್ಸವ ಕಾಲ ಬಹುಯೋಗ್ಯವಾದುದ್ದಾಗಿದೆ.

ವಿಜಯದಶಮಿಯೆಂದು ಊರದೈವರೆಲ್ಲರೂ ಸೇರಿ ಹೂಜಿ, ಒನಕೆ ಮುಂತಾದವುಗಳನ್ನು ಪಲ್ಲಕ್ಕಿಯಲ್ಲಿಟ್ಟುಕೊಂಡು ಉತ್ಸವದೊಂದಿಗೆ ಬನ್ನಿಮರಕ್ಕೆ ತೆರಳಿ, ಅಲ್ಲಿ ಪೂಜೆ ಸಲ್ಲಿಸಿ ಪರಸ್ಪರರು ಬನ್ನಿಯನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಆಯುಧ ಪೂಜೆ. ಈ ಆಚರಣೆಯಲ್ಲಿ ಗದೆ, ಚಕ್ರ, ತ್ರಿಶೂಲ, ಪಂಜು, ಖಡ್ಗ ಮುಂತಾದ ಆಯುಧಗಳಲ್ಲಿ ಒಂದೊಂದು ವಿಶೇಷತೆ ಇದೆ. ಶಿವನ ತ್ರಿಶೂಲವು ಸತ್ವ ರಜೋತಮೋ ಗುಣಗಳನ್ನು ಹೊಂದಿ, ದೈವೀಶಕ್ತಿಯನ್ನು ಹೊಂದಿರುತ್ತದೆಂದು ಹೇಳಲಾಗುತ್ತದೆ. ತ್ರಿಶೂಲವು ಶಿವನ ಆಯುಧವಾದರೆ, ಪರಶು ಶಿವನ ಆಯುಧ ಮತ್ತು ಪರಶುರಾಮನ ಆಯುಧವಾಗಿರುತ್ತದೆ. ಇಂದಿಗೂ ತ್ರಿಶೂಲಧರ ಶಿವನ ಉಪಾಸನೆಯಂತೆ ಪರಶುಧರ ಶಿವನ ಉಪಾಸನೆಯನ್ನು ಮಾಡಲಾಗುತ್ತದೆ.

ಚೇಳಗುರಿಕೆ ಗ್ರಾಮದ ಮಠದಲ್ಲಿ ಅಂದು ವಿಶೇಷವಾಗಿ ಹಬ್ಬವನ್ನು ಆಚರಿಸುತ್ತಾರೆ. ಎಲ್ಲಾ ಸಮುದಾಯದವರು ಭೇದ ಭಾವನೆಯಿಲ್ಲದೆ ಮಠಕ್ಕೆ ಬಂದು ಪೂಜಿಸುತ್ತಾರೆ. ಈ ಹಬ್ಬದಂದು ಜನರು ಮನೋರಂಜನೆಗಾಗಿ ಗುಂಡು ಎತ್ತುವುದು, ನಿಂಬೆಕಾಯಿ ಎಸೆಯುವುದು, ತೆಂಗಿನಕಾಯಿ ಒಡೆಸುವುದು, ಕಬಡ್ಡಿ ಆಡುವುದು ಇನ್ನೂ ಅನೇಕ ರೀತಿಯ ಜನಪದ ಕ್ರೀಡೆಗಳನ್ನು ನಮ್ಮ ಜನಪದರಲ್ಲಿ ಕಾಣಬಹುದು. ಅಂದು ಸಂತೋಷವಾಗಿ ಕಷ್ಟ ದುಃಖಗಳನ್ನು ಮರೆಯಲು ಈ ತರಹದ ಹಬ್ಬಗಳನ್ನು ಆಚರಿಸುತ್ತಾರೆ. ಮನೆಯಲ್ಲಿ ಹಿರಿಯರನ್ನು ಅವರ ಭಾವಚಿತ್ರದ ರೂಪದಲ್ಲಿ ಒಂದು ಹೊಸ ತಂಬಿಗೆ ನೀರನ್ನು ಇಟ್ಟು ಅದರ ಮೇಲೆ ಹೊಸಬಟ್ಟೆ ಹಾಕಿ ಆಯುಧಗಳನ್ನಿಟ್ಟು ಪೂಜೆ ಮಾಡುವರು. ಆಂದಿನ ಎಲ್ಲರನ್ನೂ ಮನೆಗೆ ಕರೆದು ಅವರೊಂದಿಗೆ ಊಟೋಪಚಾರ ನಡೆಸುವರು. ಹಾಗೆಯೇ ಮಠದ ಅನ್ನದಾಸೋಹವು ಸಹ ವಿಶೇಷವಾಗಿ ನಡೆಸುವರು.

## ಛಟ್ಟಿ ಪೂಜೆ

ಕಾರ್ತಿಕ ಮಾಸದ ಛಟ್ಟಿ ಅಮಾವಾಸ್ಯೆಯಾದ ಐದನೆಯ ದಿನದಂದು ಛಟ್ಟಿಪೂಜೆ ಆಚರಣೆ ಇಲ್ಲಿ ನಡೆಯುತ್ತದೆ. ಪಲ್ಲಕ್ಕಿಯ ಉತ್ಸವವು ಜರುಗುತ್ತದೆ. ಅಂದು ಮಠದ ಸುತ್ತ ಪ್ರದಕ್ಷಿಣೆ ಹಾಕಲಾಗುತ್ತದೆ.

ಈ ಸಂದರ್ಭದಲ್ಲಿ ನೆರೆದ ಭಕ್ತಜನರಿಗೆ ಸಾಮೂಹಿಕವಾಗಿ ಭಟ್ಟಿಯ ಊಟ ವಿತರಿಸಲಾಗುವುದು. ಅಂದಿನ ಪ್ರಸಾದದಲ್ಲಿ ವಿಶೇಷವಾಗಿ ಸಜ್ಜೆರೊಟ್ಟಿ, ಬಾಜ್ಜಿ (ಪಲ್ಲೆ), ಮೊದಲಾದವುಗಳನ್ನು ನೀಡಲಾಗುತ್ತದೆ. ಮಳೆಗಾಲ ಮುಗಿದು ಚಳಿಗಾಲ ಹೆಜ್ಜೆ ಹಾಕುವ ಕಾಲ ಇದಾದುದರಿಂದ ಬದಲಾಗುತ್ತಿರುವ ನೈಸರ್ಗಿಕ ವ್ಯತ್ಯಾಸಗಳಿಗೆ ಹೊಂದಿಕೊಂಡು ಮನುಷ್ಯನ ಬದುಕು ನಡೆಯಬೇಕಾಗುತ್ತದೆ. ಅದಕ್ಕಾಗಿಯೇ ಈ ಪ್ರಸಾದದ ಸಿದ್ಧತೆಯೆಂಬಂತೆ ಕಾಣುತ್ತದೆ.

**ಸಂಕ್ರಮಣ ಆಚರಣೆ**

ಸಂಕ್ರಮಣ ಭಾರತೀಯರಿಗೆ ಅತ್ಯಂತ ಮಹತ್ವದ ದಿನ. ಸೂರ್ಯ ತನ್ನ ಪಥ ಚಲನದ ದಿಕ್ಕನ್ನು ಈ ದಿನ ಬದಲಿಸುವುದರಿಂದ ನಿಸರ್ಗವು ತನ್ನ ಕ್ರಮದಲ್ಲಿ ವ್ಯತ್ಯಾಸವನ್ನು ತಂದುಕೊಳ್ಳುತ್ತದೆ. ಚಳಿಗಾಲ ಹಿಮ್ಮೆಟ್ಟಿ ಬೇಸಿಗೆ ನಿಧಾನವಾಗಿ ಹೆಜ್ಜೆ ಹಾಕುತ್ತಲಿರುವ ಸಂದರ್ಭದಲ್ಲಿ ಈ ಆಚರಣೆ ಜರುಗುತ್ತದೆ. ಅಂದು ಊರ ದೈವವೆಲ್ಲ ಸೇರಿ ಪಲ್ಲಕ್ಕಿ ಉತ್ಸವದೊಂದಿಗೆ ನದಿ ಸ್ಥಳಕ್ಕೆ ಹೋಗುತ್ತಾರೆ. ಭಕ್ತರೆಲ್ಲರು ಎಳ್ಳು, ಅರಿಸಿನ ಪುಡಿಯನ್ನು ಮೈಗೆ ಲೇಪಿಸಿಕೊಂಡು ನದಿಯಲ್ಲಿ ಪುಣ್ಯಸ್ನಾನ ಮಾಡುತ್ತಾರೆ. ಹೀಗೆ ಮಾಡುವುದರಿಂದ 'ಸಂಕ್ರಮಣ ಪೀಡೆ' ಕಳೆಯಿತೆಂಬ ಭಾವನೆ ಅವರದು. ಎಲ್ಲರೂ ಮಠಕ್ಕೆ ಆಗಮಿಸಿ ಎರ್ರಿತಾತನ ಸಾನ್ನಿಧ್ಯದಲ್ಲಿ ಎಳ್ಳು ಸಕ್ಕರೆಯ ವಿನಿಮಯ ಮಾಡಿಕೊಳ್ಳುವರು. ಅಂದು ಸಹ ಪ್ರಸಾದದ ವ್ಯವಸ್ಥೆಯು ವಿಶೇಷವಾಗಿರುವುದು.

ಧಾರ್ಮಿಕವಾಗಿ, ನೈಸರ್ಗಿಕವಾಗಿ, ಸಾಮಾಜಿಕವಾಗಿ ನಡೆಯುವ ಇಲ್ಲಿಯ ಆಚರಣೆಗಳು ಸಂಕೀರ್ಣತೆಯಿಂದ ಕೂಡಿಕೊಂಡಿದ್ದು, ಅವುಗಳ ಹಿಂದಿರುವ ನಂಬಿಕೆ, ಸಂಕೇತಗಳನ್ನು ಇನ್ನು ಬಿಡಿಸಬೇಕೆನಿಸುತ್ತದೆ. ವರ್ಷದುದ್ದಕ್ಕೂ ಧಾರ್ಮಿಕ ಆಚರಣೆಗಳಿಂದ ತುಂಬಾ ಚಟುವಟಿಕೆಗಳಿಂದ ಕೂಡಿರುತ್ತದೆ.

**ಯುಗಾದಿ ಆಚರಣೆ**

ಹಳೆಯ ಮತ್ತು ಹೊಸದನ್ನು ಜೋಡಿಸುವ ಸುವರ್ಣ ಸೇತುವೆಯೇ ಯುಗಾದಿ. ಪಾಲ್ಗುಣ ಬಹುಳ ಅಮಾವಾಸ್ಯೆಯೆಂದು ಹಳೆಯ ವರ್ಷಕ್ಕೆ ವಿದಾಯ ಹೇಳಿ ಮರುದಿನ ಚೈತ್ರಶುಕ್ಲ ಬಾದ್ರಪದದಂದು ಎರ್ರಿತಾತನ ಸಾನಿಧ್ಯದಲ್ಲಿ ವಿಶೇಷವಾದ ಪೂಜಾ ವಿಧಿ ವಿಧಾನಗಳು ನಡೆಯುತ್ತವೆ. ಹೊಸವರ್ಷವನ್ನು ಸ್ವಾಗತಿಸುವ ಯುಗಾದಿಯನ್ನು ಬಹಳ ಜಾಗೃತಿಯಿಂದ ಕಹಿ-ಸಿಹಿಗಳ ಸಮ್ಮಿಲನವೆಂಬಂತೆ ಆಚರಿಸಲಾಗುತ್ತದೆ. ಸುಖ ದುಃಖಗಳ ಸಂಕೇತವಾಗಿ ಬೇವು-ಬೆಲ್ಲ ಇವರೆಡನ್ನು ಬದುಕಿನ ಪ್ರತೀಕಗಳಂತೆ ಒಳಪಡಿಸಲಾಗುತ್ತದೆ. ಆರ್ಯುವೇದದ ಪ್ರಕಾರ ವಸಂತಕಾಲದಲ್ಲಿ ತಲೆದೋರುವ ಶಾರೀರಿಕ ರೋಗ ರುಜಿನಗಳಿಗೆ ಬೇವು ಒಳ್ಳೇಯ ಔಷಧವಂತೆ ಇಂತಹ ಶ್ರೇಷ್ಠವಾದ ಹಬ್ಬವನ್ನು ಮಠದಲ್ಲಿ ಆಚರಿಸುತ್ತಾರೆ.

ಎರ್ರಿತಾತನಿಗೆ ವಿಶೇಷವಾದ ಅಭಿಷೇಕವನ್ನು ಪೂಜೆಯನ್ನು ಮಾಡಲಾಗುತ್ತದೆ. ಮೊದಲನೆಯ ದಿನ ನಿತ್ಯ ಪೂಜೈ ನಡೆಯುತ್ತದೆ. ಅಂದು ಎಲ್ಲರೂ ಹೊಸ ವಸ್ತ್ರಗಳನ್ನು ಧರಿಸಿಕೊಂಡು ಮಠಕ್ಕೆ ಬರುತ್ತಾರೆ.

ಅಂದಿನ ರಾತ್ರಿ ಮನೆಯಲ್ಲಿಯೂ ವಿಶೇಷ ಪೂಜೆ ಮಾಡುವುದರ ಮೂಲಕ ಒಳ್ಳೊಳ್ಳೆ ಊಟೋಪಚಾರಗಳು ನಡೆಯುತ್ತವೆ. ಯುಗಾದಿಯ ಸಂಪ್ರದಾಯದಂತೆ ಬೇವು ಬೆಲ್ಲದ ಮಿಶ್ರಣದಿಂದ ಮಾಡಿದ ಸಿಹಿಯನ್ನು ಯುಗಾದಿಯ ದಿನದಂದು ಬಂದ ಭಕ್ತಾದಿಗಳಿಗೆಲ್ಲಾ ಮಠದಲ್ಲಿ ಹಂಚಲಾಗುತ್ತದೆ.

ಎರಡನೆಯ ದಿನದಂದು ಎಲ್ಲರೂ ಕೂಡಿ ಓಕಳಿ ಕಾರ್ಯವನ್ನು ಹಮ್ಮಿಕೊಳ್ಳುತ್ತಾರೆ. ಇದರ ಸಂಕೇತ ನಮ್ಮ ಜೀವನದುದ್ದಕ್ಕೂ ಬದುಕು ಬಣ್ಣದಂತೆ ಕಂಗೊಳಿಸಲು ಹಿಂದಿನ ಘಟನೆಗಳನ್ನು ಮರೆತು ಹೊಸ ಬದುಕನ್ನು ಪ್ರಾರಂಭಿಸೋಣ ಎಂಬ 'ಸಂಕೇತ'ವನ್ನು ಸೂಚಿಸುವುದಾಗಿದೆ. ಇದನ್ನು ಎಲ್ಲಾ ಸಮುದಾಯದವರು ಆಚರಿಸುತ್ತಾರೆ. ವಿನೋದಪ್ರಿಯರಾದ ಧಾರ್ಮಿಕ ಜನಪದರು ವಿವಿಧ ಕ್ರೀಡೆಗಳನ್ನು ಆಡುವುದರ ಮೂಲಕ ಮನಸ್ಸನ್ನು ಹಗುರಮಾಡಿಕೊಳ್ಳುತ್ತಾರೆ. ಜೂಜು ಆಡುವುದು, ನಿಂಬೆಕಾಯಿ ಎಸೆಯುವುದು, ತೆಂಗಿನಕಾಯಿ, ಬೆಂಕಿ ಪೊಟ್ಟಣ ಹೊಡೆಯುವುದು, ಕಬಡ್ಡಿ ಆಡುವುದು ಹೀಗೆ ಹಲವಾರು ಮನೋರಂಜನೆಯ ಕ್ರೀಡೆಗಳಲ್ಲಿ ಭಾಗವಹಿಸುತ್ತಾರೆ. ಯುಗಾದಿ ಹಬ್ಬದ ಸಮಯದಲ್ಲಿ ಎರಡು ತಿಂಗಳು ಮುಂಚಿತವಾಗಿಯೇ ನಾಟಕದ ತಾಲೀಮು ನಡೆದು ಯುಗಾದಿ ಹಬ್ಬದ ಸಂದರ್ಭದಲ್ಲಿ ನಾಟಕವನ್ನು ಪ್ರದರ್ಶಿಸುತ್ತಾರೆ.

**ಗೌರಿವ್ರತ**

ಚೈತ್ರ ಶುದ್ಧ ತದಿಗೆಯಂದು ಹಿಂದೆ ಶುಂಭ-ನಿಶುಂಭರ ವಧೆಯ ಕಾಲದಲ್ಲಿ ಆದಿಶಕ್ತಿಯೇ ಸರಸ್ವತಿರೂಪದಲ್ಲಿ ಅವತರಿಸಿ, ಹಿಮಪರ್ವತದ ದಕ್ಷಿಣ ಭಾಗದಲ್ಲಿ ಒಂದು ಮರಕ್ಕೆ ಉಯ್ಯಾಲೆ ಕಟ್ಟಿ ಹದಿನೈದು ವರ್ಷದ ಸ್ತ್ರೀ ರೂಪದಲ್ಲಿ ತೂಗಿಕೊಳ್ಳುತ್ತಾ ಇದ್ದಳೆಂದು ಉಲ್ಲೇಖವಿದೆ. ಚೈತ್ರಶುದ್ಧ ತದಿಯಿಂದ ವೈಶಾಖ ತದಿಗೆಯವರೆಗೂ ಈ ವ್ರತ ಆಚರಿಸುವುದುಂಟು. ಸ್ತ್ರೀಯರಿಗೆ ಮಂಗಳವನ್ನುಂಟು ಮಾಡುವ ವ್ರತವಿದು. ತೊಟ್ಟಿಲಲ್ಲಿ ಕಲಶವನ್ನಿಟ್ಟು ಖಣ, ಅಂಗನೂಲು, ಗಂಧಾಕ್ಷತೆಗಳಿಂದ ಅಲಂಕರಿಸಿ ಪೂಜಿಸುವರು. ಗ್ರಾಮೀಣ ಪ್ರದೇಶದಲ್ಲಿ ಶ್ರೀಮತಿಯವರು ಸಹ ಇಂಥಹ ಒಂದು ಆಚರಣೆಗಳನ್ನು ಬಹಳ ಅದ್ದೂರಿಯಾಗಿ ಮಾಡುತ್ತಾರೆ. ಗೌರಿಮಕ್ಕಳೆಂದು ಅಂದು ಎಲ್ಲಾರು ಹೊಸ ಉಡುಪುಗಳನ್ನು ಧರಿಸಿಕೊಂಡು ಗೌರಿಮಕ್ಕಳಾಗುತ್ತಾರೆ. "ಕಾರಹುಣ್ಣಿಮೆಯಲ್ಲಿ ಎತ್ತು ನೋಡಲು ಹೋಗಬಾರದು, ಕನ್ಯಾ ನೋಡಲು ಗೌರಿ ಹುಣ್ಣಿಮೆಯಂದು ಹೋಗಬಾರದು" ಎಂಬ ಜನಪದರ ಹೇಳಿಕೆಗಳಲ್ಲಿ ಉರುಳಿಲ್ಲ.

ಗ್ರಾಮದಲ್ಲಿ ಯುವತಿಯರು ಮತ್ತು ಸ್ತ್ರೀಯರು ಸುಮಾರು ಒಂಭತ್ತು ದಿನಗಳ ಕಾಲ ಗೌರಿಮಕ್ಕಳಾಗಿ ಬೇರೆ ಊರಿಂದ ಬಂದಂತಹ ನೆಂಟರಿಂದ ಕಾಣಿಕೆರೂಪದಲ್ಲಿ ಹಣವನ್ನು ಪ್ರೀತಿಯಿಂದ ತೆಗೆದುಕೊಂಡು ಹಬ್ಬ ಆಚರಿಸುತ್ತಾರೆ. ಅಂದು ಸಕ್ಕರೆ ದೀಪವನ್ನು ಬೆಳಗಿಸುವುದುದರ ಮೂಲಕ ಎರ್ರಿತಾತನ ಮಠಕ್ಕೆ ಹಾಗೂ ಗ್ರಾಮದ ವಿವಿಧ ದೇವಾಲಯಗಳಿಗೆ ಹೋಗುತ್ತಾರೆ. ಅಲ್ಲಿ ಪೂಜೆ ಮಾಡಿಸಿ ಗೌರಿಯನ್ನು ತಮಟೆ ವಾದ್ಯಗಳೊಂದಿಗೆ ಜನಸಂದಣಿಯ ಮೂಲಕ ಪಟಾಕಿಗಳನ್ನು ಹಾರಿಸುತ್ತಾ ಮೆರವಣಿಗೆಯ ಮೂಲಕ ಗಂಗೆಯಲ್ಲಿ ಬಿಟ್ಟು ಬರುತ್ತಾರೆ. ಇಂಥಹ ಆಚರಣೆಗಳು ಗ್ರಾಮಾಂತರ ಪ್ರದೇಶಗಳಲ್ಲಿ ರೂಢಿಯಿದ್ದು ಒಟ್ಟು ಭಾರತ ಸಂಸ್ಕೃತಿಯ ಪ್ರತೀಕಗಳೆಂಬಂತೆ ಇಂದಿಗೂ ಆಚರಣೆಯಲ್ಲಿರುವುದು ತಿಳಿದುಬರುತ್ತದೆ.

ಹಾಗಾಗಿಯೇ ಗ್ರಾಮದೈವಗಳು ಭಕ್ತ ಜನರ ಬದುಕಿನ ಬವಣೆಗಳನ್ನು ನಿವಾರಿಸಿ ಅವರಿಗೆ ಆರೋಗ್ಯಭಾಗ್ಯವನ್ನು ದಯಪಾಲಿಸುತ್ತವೆ.

### ಜಾತ್ರೆ

ಧರ್ಮ ಮತ್ತು ಹಬ್ಬಗಳಿಗೆ ಇರುವ ಗಾಢ ಸಂಬಂಧವೆ ಮುಂದುವರೆದು ಜಾತ್ರೆಗಳಲ್ಲಿ ವ್ಯಕ್ತಗೊಂಡಿದೆ. ಧರ್ಮ ಎಂದು ನಾವು ಇಂದು ಬಳಸುತ್ತಿರುವುದು ಒಂದು ವ್ಯವಸ್ಥಿತ ಸಮಾಜದ ಪರಿಕಲ್ಪನೆ. ಆದಿಮಾನವನ ಕಾಲದಿಂದ ಬಂದ ಜನಪದ ವೃಂದಗಳಿದ್ದು ಒಂದು ವ್ಯವಸ್ಥೆಗೆ ಒಳಪಡದ, ಅನಿಯಂತ್ರಿತವಾಗಿ ಚದುರಿದ ವಿಭಿನ್ನ ಸಂಸ್ಕೃತಿಗಳ ಬಹುಮುಖಿ ಸಮಾಜವಾಗಿರುವುದರಿಂದ, ವ್ಯವಸ್ಥಿತ ಸಮಾಜದ ಈ ಪರಿಕಲ್ಪನೆಯನ್ನು ನೇರವಾಗಿ ಜನಪದ ಸಮಾಜಕ್ಕೆ ಅನ್ವಯಿಸಲು ಬಾರದು. ಆದರೆ ಅದೇ ಕಾಲಕ್ಕೆ ಶಿಷ್ಟಪದ ಸಮಾಜದ 'ಧರ್ಮ' ಪರಿಕಲ್ಪನೆಗೆ ಆಧಾರವಾಗಿರುವ ಜನಪದ ನಡವಳಿಕೆಗಳಲ್ಲಿ ತೊಡಗಿ ಪರಿಚಲನಗೊಳ್ಳುತ್ತಾ ಬಂದ ನಂಬಿಕೆ, ಆಚರಣೆ, ಸಂಜ್ಞೆ, ಸಂಕೇತ, ದೇವತೆ, ಕುಲದೇವತೆಗಳು, ಪಂಥ, ಆರಾಧನೆ, ಉತ್ಸವ, ಹಬ್ಬ, ಜಾತ್ರೆ, ಧಾರ್ಮಿಕ ಕಟ್ಟು ಕಟ್ಟಳೆ, ವಿಧಿ ಕ್ರಿಯೆಗಳು, ಮಂತ್ರ, ಮಾಟ, ಕಾರ್ಣಿಕ, ಅರ್ಚಕ, ಗೊರವ, ಪುರವಂತ, ಗೊಂದಲಿಗ, ಬಯಲಾಟ, ಯಕ್ಷಗಾನ ಇತ್ಯಾದಿ ವಿವಿಧ ಮಾದರಿಗಳಲ್ಲಿ ಜನಪದ ಧರ್ಮ ಮತ್ತು ಅದರ ಒಡಲಲ್ಲಿ ಗರಿಗೆದರಿದ ಜನಪದ ಕಲೆಗಳ ರೂಪಾಂಶಗಳನ್ನು ಕಾಣಬಹುದು.

### ಜಾತ್ರೆ ಪದದ ನಿಷ್ಪತ್ತಿ

'ಜಾತ್ರೆ' ಎನ್ನುವುದು 'ಯಾತ್ರಾ' ಎಂಬ ಸಂಸ್ಕೃತ ಪದದಿಂದ ಮೂಡಿಬಂದಿದೆ. ಪ್ರಸಿದ್ಧ ಕ್ಷೇತ್ರದರ್ಶನ ಮಾಡಲು ಜನಯಾತ್ರೆ ಹೋಗುತ್ತಾರೆ. ಸಾಮಾನ್ಯವಾಗಿ ವರ್ಷದ ಯಾವುದೇ ಒಂದು ನಿಯಮಿತ ಸಂದರ್ಭದಲ್ಲಿ ಪುಣ್ಯಕ್ಷೇತ್ರಗಳಲ್ಲಿ ಜನರ ಜಾತ್ರೆ ಸೇರುತ್ತದೆ.

ಕನ್ನಡ ನಿಘಂಟು ಪ್ರಕಾರ

ಪುಣ್ಯಕ್ಷೇತ್ರ ದರ್ಶನವೇ ಮೊದಲಾದ ಧಾರ್ಮಿಕ ಉದ್ದೇಶಗಳಿಂದ ಮಾಡುವ ಪ್ರಯಾಣ; ಯಾತ್ರೆ. ಯಾವುದಾದರೊಂದು ದೇವತೆಯ ರಥೋತ್ಸವವೇ ಮೊದಲಾದ ವಿಶೇಷ ಕಾರ್ಯಕ್ರಮ. ದೇವರ ರಥೋತ್ಸವ ಮುಂತಾದ ಸಂದರ್ಭಗಳಲ್ಲಿ ಸೇರುವ ಜನರ ಗುಂಪು; ಸಮೂಹ, ಪರಿಸೆ.

ಬ್ರಹ್ಮಶಿವನ ಸಮಯ ಪರೀಕ್ಷೆ

'ಉಕ್ಕಲ ಹಿಂದಿನಿಂದ ದೇವಿಗೆ ಮಾಮೂಲಕ್ಕನಿಗಂ ಜಾತ್ರೆ ಮಾಳ್ಪಂ ಮೊಕ್ಕಳಿಗಂ' ಜಾತ್ರೆ, ಪರಿಸ, ತೇರು ಎಂದರ್ಥವಿದೆ.

ಯಾವುದೋ ಒಂದು ನಿಗದಿತ ವೇಳೆಯಲ್ಲಿ ಜನರೆಲ್ಲ ಸೇರಿ ದೇವರನ್ನು ಆರಾಧಿಸುವುದು. ಜಾತ್ರೆ ಎಂಬುದು ವರ್ಷಕ್ಕೆ ನಿಗದಿಯಾದ ಇನ್ನಿತರ ಅವಧಿ ಗೊತ್ತಾದ ಸ್ಥಳದಲ್ಲಿ ಒಂದು ದಿನವೂ, ಇನ್ನೂ ಹೆಚ್ಚಿನ ದಿನಗಳವರೆಗೂ ಜನರು ಸೇರಿ ನಡೆಸುವ ಉತ್ಸವ, ಜಾತ್ರೆಗಳು ಸಾಮಾನ್ಯವಾಗಿ ಪುಣ್ಯಕ್ಷೇತ್ರಗಳಲ್ಲಿ

ಜರುಗುವುದು. ಅವುಗಳ ಸ್ಮಾರಕವಾಗಿ ರಥೋತ್ಸವ ನಡೆಯುವುದು. ಜಾತ್ರೆಗಳ ಉದ್ದೇಶ, ಪ್ರಕಾರ ಹಾಗೂ ಅವುಗಳಿಂದ ಅವಿರ್ಭವಿಸುವ ಧಾರ್ಮಿಕ ಪದ್ಧತಿಗಳಿಗೆ ಪೂರಕವಾಗಿ ಜಾತ್ರೆಗಳು ಹುಟ್ಟಿಕೊಂಡು ಬಂದವು. ಶ್ರಾವಣಮಾಸ, ಅಮಾವಾಸ್ಯೆಗಳ, ಹಬ್ಬ ಹರಿದಿನಗಳ, ರಥೋತ್ಸವಗಳಲ್ಲಿ, ಭಕ್ತರ ಆಶಯಗಳಿಗನುಗುಣವಾಗಿ ಪೂಜಾಕಾರ್ಯಗಳು ನಡೆಯುವುದೇ ಇಂತಿಷ್ಟು ನಿಯಮಗಳಿಲ್ಲ ಅವು ಬಹುಕೇಂದ್ರಿತ ನೆಲೆಗಳನ್ನು ಹೊಂದಿವೆ.

ಜಾತ್ರೆಯ ಮೂಲಪದವಾದ ಯಾತ್ರೆಗೆ ಚಲನೆ, ಪ್ರಯಾಣ, ಸೈನ್ಯಾಕ್ರಮಣ, ತೀರ್ಥಯಾತ್ರೆ, ಹಬ್ಬ, ಸಂತತೆ, ಮೆರವಣಿಗೆ, ರಸ್ತೆ, ಮರಣ, ವಾಡಿಕೆ, ವಾಹನ, ನಾಟಕೀಯ, ಮನರಂಜನೆ ಎಂಬ ಅರ್ಥಗಳನ್ನು ಗುರುತಿಸಿದ್ದಾರೆ. ಜಾತ್ರೆಗಳ ಇತಿಹಾಸ ಸುಮಾರು ಒಂದು ಸಾವಿರ ವರ್ಷಗಳ ಹಿಂದಕ್ಕೆ ಬಿತ್ತರಿಸಲು ಸಾಧ್ಯವಿದೆ. ಜನಪದ ಸಂಸ್ಕೃತಿ ಮತ್ತು ನಾಗರಿಕ ಸಂಸ್ಕೃತಿಯಲ್ಲಿ ವ್ಯತ್ಯಾಸವಿಲ್ಲದಿದ್ದರೂ ಅವು ಸಮಾನಾಂತರವಾಗಿ ವಿಕಾಸಹೊಂದುತ್ತವೆ.

ಜಾತ್ರೆಗಳು ಸಾಮಾನ್ಯವಾಗಿ ಮಾಘ ಮಾಸದಿಂದ ಚೈತ್ರ ಮಾಸದ ಅವಧಿಯೊಳಗೆ ಜರುಗುವುದೇ ವಿಶೇಷ. ಮಿಕ್ಕ ಅವಧಿಯಲ್ಲಿ ಮಳೆ ಬರಬಹುದಾದ್ದರಿಂದ ಜಾತ್ರೆಗಳಿಗೆ ಅಡ್ಡಿ ಆತಂಕಗಳು ಉಂಟಾಗಬಹುದೆಂದು ಭಾವಿಸಲಾಗಿದೆ. ಅಲ್ಲದೇ ಮೇಲೆ ವಿವರಿಸಿದ ಅವಧಿಗಳಲ್ಲಿ ಜನರಿಗೆ ಸ್ವಲ್ಪ ವಿಶ್ರಾಂತಿವಿರುವುದರಿಂದ ಮತ್ತು ಅವರ ಬಳಿ ಹಣ ಇರುವುದು ಸಹ ಒಂದು ಕಾರಣ. ಸಾಮಾನ್ಯವಾಗಿ ಮಳೆ, ಬೆಳೆ ಚೆನ್ನಾಗಿ ಆದಾಗ ಜನರು ಹುರುಪು, ಹುಮ್ಮಸ್ಸಿನಿಂದ ಜಾತ್ರೆಗಳಲ್ಲಿ ಭಾಗವಹಿಸಿ ಅವುಗಳಿಗೆ ಹೆಚ್ಚಿನ ಕಳೆತರುತ್ತಾರೆ. "ಜೀವರಥೋತ್ಸವವಿದ್ದು ಇದ ಅಣಕಿಸದಿರು ಎಲೆ ಸನ್ಯಾಸಿ" (ವೆಂಕಟೇಶ ಇಂದ್ವಾಡಿ, ಮಂಟೇಸ್ವಾಮಿ ಕಾವ್ಯ ಸಾಂಸ್ಕೃತಿಕ ಮುಖಾಮುಖಿ ಪು.೪೮) ಎಂಬ ಕುವೆಂಪು ಅವರ ಧ್ವನಿಯಲ್ಲಿ ಜಾತ್ರೆಯ, ರಥೋತ್ಸವದ ಮಹತ್ವವನ್ನು ಕಾಣಬಹುದು. ಜೀವನದ ಚೈತ್ರದ ಮಾದರಿಯಲ್ಲಿ ಅದರ ಪ್ರಖರತೆಯನ್ನು ಜನಸಮೂಹ, ಸಮುದಾಯಗಳ ಮೇಲೆ ಬೀರಿದೆ. ಜನಪದ ಅರ್ಥ ಕಳೆದುಕೊಳ್ಳುತ್ತಿದೆ, ನಾಶಗೊಳ್ಳುತ್ತಾ ಇದೆ ಎನ್ನುತ್ತಾರೆ. ಹಾಗೆ ಅದು ನಾಶವಾಗುತ್ತಿಲ್ಲ. ಜಾತ್ರೆ ಹಬ್ಬ ಹರಿದಿನಗಳು ತೇರು, ಆಚರಣೆಗಳ ಮೂಲಕ ಬದುಕಿನೊಳಗೆ ಬೆರೆತುಕೊಂಡು ಬಿಡಿಸಲಾಗಿರದಷ್ಟು ರಕ್ತಗತವಾದ ಮೇಲೆ ಅದರ ಅಗಲಿಸುವಿಕೆ ಸಾಧ್ಯವೇ ಇಲ್ಲ. ಆದುದರಿಂದ ಜಾತ್ರೆಗಳು ಜನಪದರ ಕಡೆ ಕರುಳುಬಳ್ಳಿ ಸಂಬಂಧದ ಗುಣವನ್ನು ಪಡೆದಿವೆ ಎನ್ನಬಹುದು

ಎಳ್ರಿತಾತನ ಜಾತ್ರೆಯು ಸಂಪ್ರದಾಯ ಹಾಗೂ ಆಚರಣೆಗಳಲ್ಲಿ ಬಹಳ ವಿಶಿಷ್ಟತೆಯಿಂದ ಕೂಡಿದೆ. ಪೂಜೆಗೆಂದು ಎಳ್ರಿತಾತನು ಇರುವ ಭಾವಚಿತ್ರವನ್ನೇ ಧ್ವನಿವರ್ಧಕಗಳ ಜೊತೆಗೆ ಗಂಗೆಗೆ ಬರುತ್ತಾರೆ. ಕೆಲವು ದೇವತೆಗಳಿಗಿದ್ದಂತೆ ಬಲಿಕೊಡುವ ಸಂಪ್ರದಾಯ ಎಳ್ರಿತಾತನಿಗೆ ಇರುವುದಿಲ್ಲ. ಗಂಗೆಯಿಂದ ಪೂಜೆ ಮುಗಿಸಿಕೊಂಡು ಮಠಕ್ಕೆ ಬರುತ್ತಾರೆ. ಇಂಥಹ ಸಂದರ್ಭದಲ್ಲಿ ಒಂಬತ್ತು ಜನ ಮುತ್ತೈದೆಯರು ಕಳಸವನ್ನು ಹಿಡಿಯುವುದರ ಜೊತೆಗೆ ಐದು ಜನರು ಅಷ್ಟಹರಿ (ಗಂಗೆಯಿಂದ ತಂದ ನೀರು) ನೀರು ತುಂಬಿದ ಕೊಡವನ್ನು ಹೊತ್ತು ತರುತ್ತಾರೆ. ಈ ಎಲ್ಲಾ ಕಾರ್ಯಗಳನ್ನು ಹೆಚ್ಚಾಗಿ ಗ್ರಾಮದ ಲಿಂಗಾಯತ

ಸಮುದಾಯದವರು ಮಾಡುತ್ತಾರೆ. ಆದರೆ ಎಲ್ಲಾ ಸಮುದಾಯದವರು ಭಾಗವಹಿಸುತ್ತಾರೆ. ಜಾತ್ರೆಯ ಮುಂಚಿತವಾಗಿ ತೇರು ಕಟ್ಟುವ ಕಾರ್ಯವನ್ನು ಮಾಡುತ್ತಾರೆ.

ತೇರಿಗೆ ಬಂಡಿ, ಕುರ್ಚಿ, ವಾನ್ಯೇವು ಎಂಬ ಹೆಸರುಗಳಿವೆ. ತೇರು ದ್ರಾವಿಡ ಶಬ್ದ. ಅದಕ್ಕೆ ತಮಿಳು, ತೆಲುಗು, ಮಲೆಯಾಳಂ, ತುಳುಭಾಷೆಗಳಲ್ಲಿ ಜ್ಞಾತಿ ಪದಗಳಿವೆ. ಮೇಲಿನ ವಿವರಗಳಲ್ಲಿ ಚಕ್ರ, ಅಲಂಕಾರ ಭಾಗ ಶಿಖರ, ಕಳಸಗಳಿದ್ದು ಗೋಪುರಕಾರದ ಶೈಲಿಯ ರಥ ವಿಜಯನಗರದಿಂದೀಚೆಗೆ ಬಳಕೆಗೆ ಬಂದಿರಬೇಕೆಂದು ಹಂಪನಾ ಅವರ ವಾದ. “ರಥವೆಂದರೆ ಸಾಮಾನ್ಯವಾಗಿ ನಾವು ಏರಿ ಹೋಗುವುದು. ವಾಹನ ಆದರೆ ಪದದ ಮೂಲಾರ್ಥ ಆಟವಾಡುವುದು.

ಅರ್ಥಗಳ ಹಿನ್ನೆಲೆಯಲ್ಲಿ ‘ಕುರು’ ಎಂದರೆ ಕಿರುಬೆಟ್ಟ, ದಿಣ್ಣೆ ಎಂದರ್ಥ. ಎಷ್ಟೋ ಕುರುಹುಗಳಿದ್ದರೂ ಕನ್ನಡಿಗರು ಕೃತರಾಗಿ ಬಯಲುಗಳಲ್ಲಿ ನೆಲೆ ನಿಂತು ನಂತರ ಕುರುಹುಗಳನ್ನು ನೆನಪಿಸುವ ತೇರು ಶಿಖರಗಳನ್ನು ನಿರ್ಮಿಸಿದರೆ? ಕುರುಜು ಎಂಬಲ್ಲಿಯ ‘ಕುರು’ ಈ ಊಹೆಗೆ ಆಧಾರವಾಗಿದೆ. ಕುರುಗಳಿಂದ ಬಯಲಿಗೆ ಬಂದದ್ದನ್ನು ಸಂಕೇತಿಸಲು ತೆರೆ ತೇರೆಳೆಯಲಾಗುವುದೇ? ಪಾಲಕರ ಜೊತೆ ಸಮನ್ವಯವನ್ನು ಸಾಧಿಸಿದ ನಂತರ ಕೈಗೆ ತೊಡಗಿಸಿದಾಗ ರಾಶಿಯ ಸಂಕೇತವಾಗಿ ತೇರನ್ನು ರಚಿಸಿರಬಹುದೇ? ಜಾತ್ರೆ ಸಮೃದ್ಧಿಗೆ ಆಶಿಸಿ ಮಾಡುವ ಆಚರಣೆಯಾದ್ದರಿಂದ ಇಂಥಹ ಊಹೆಗಳಿಗೆ ಅವಕಾಶವಿದೆ.

ತೇರಿನಲ್ಲಿ ಸಾಮಾನ್ಯವಾಗಿ ಮೂರು ಪ್ರಕಾರಗಳಿವೆ. ಸಾದಾತೇರು, ಗಡ್ಡಿತೇರು ಹಾಗೂ ತೆಪ್ಪದ ತೇರು. ಗಡ್ಡಿತೇರು ಹುಟ್ಟುವ ಪೂರ್ವದಲ್ಲಿ ಎಲ್ಲಾ ಊರುಗಳಲ್ಲಿಯೂ ರಥೋತ್ಸವಕ್ಕೆ ಪೂರ್ವಭಾವಿಯಾಗಿ ತೇರು ಜೋಡಿಸಲಾಗುತ್ತಿತ್ತು. ಈ ಕಾರ್ಯವನ್ನು ಊರಿನ ಬಡಿಗ ನೆರವೇರಿಸಿ ಆ ಮೂಲಕ ಯೋಗ್ಯ ಸಂಭಾವನೆ ಪಡೆಯುತ್ತಿದ್ದ. ಈಚೆಗೆ ತೇರು ಸಿದ್ಧಪಡಿಸುವುದಕ್ಕೆ ಬೇಕಾಗುವ ಸಮಯ ಹಾಗೂ ಕಟ್ಟಿಗೆಯ ಕೊರತೆಯಿಂದಾಗಿ ಗಡ್ಡಿತೇರಿಗೆ ಪ್ರಾಮುಖ್ಯತೆ ಬಂದಿದೆ. ಗಡ್ಡಿ ತೇರನ್ನು ಸಾಮಾನ್ಯವಾಗಿ ದೇವಸ್ಥಾನ ಇಲ್ಲವೇ ಮಠದ ಪಕ್ಕದಲ್ಲಿರುವ ಮನೆಯಲ್ಲಿ ಸುರಕ್ಷಿತವಾಗಿಡಲಾಗುತ್ತದೆ. ಇದು ತೇರಿನ ಮನೆಯೆಂದೇ ಹೆಸರು. ಈ ಹಿಂದೆ ರಥಗಳನ್ನು ಯುದ್ಧಗಳಲ್ಲಿ ಬಳಸಲಾಗುತ್ತಿತ್ತು. ಆದರೆ ಕ್ರಿಸ್ತಶಕದ ಆರಂಭದಿಂದೀಚೆಗೆ ಯುದ್ಧಗಳಲ್ಲಿ ಇದರ ಬಳಕೆ ತಪ್ಪಿತು. ಗುಪ್ತರ ಕಾಲಕ್ಕೆ ಅವು ಕೇವಲ ವಸ್ತುಗಳನ್ನು ಸಾಗಿಸಲು ಸಾಧನಗಳಾಗಿ ಪರಿಣಮಿಸಿದವು ಎಂದು (ಎಂ.ಚಿದಾನಂದ ಮೂರ್ತಿ ಕರ್ನಾಟಕ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೨೯೦).

ತೇರನ್ನು ಕಟ್ಟುವ ಕಾರ್ಯವನ್ನು ಗ್ರಾಮದ ಬಡಿಗರು ಮಾಡುತ್ತಾರೆ. ಆ ದಿನದಲಿ ಸಹಾಯಕ್ಕಾಗಿ ತನ್ನ ಮಕ್ಕಳನ್ನಾಗಲಿ ಬೇರೆ ಯಾರನ್ನಾದರೂ ತೆಗೆದುಕೊಂಡು ಕೆಲಸವನ್ನು ಪೂರ್ಣಗೊಳಿಸುತ್ತಾರೆ. ಅದಕ್ಕೆ ಪ್ರತಿಯಾಗಿ ಅವರು ಹಣವನ್ನು ಪಡೆಯುವುದಿಲ್ಲ. ಏಕೆಂದರೆ ಅದು ಪವಿತ್ರವಾದ ಕೆಲಸವೆಂದು ತಿಳಿಸುತ್ತಾರೆ. ದೇವರ ಕೆಲಸ ಮಾಡುವುದೆಂದರೆ ಪುಣ್ಯದ ನಂಬಿಕೆ ಅವರದಾಗಿರುವುದರಿಂದ ಹಾಗೂ ಆ ಕೆಲಸ ಮಾಡುವುದರಿಂದ ದೇವರಿಗೆ ತಮ್ಮ ಭಕ್ತಿಯನ್ನು ಮುಟ್ಟಿಸಿದಂತಾಗುತ್ತದೆ. ಜೀವನದಲ್ಲಿ ತಾವು ಅಂದುಕೊಂಡ ಕೆಲಸಗಳು ಈಡೇರುತ್ತವೆ. ಈ ರೀತಿಯ ನಂಬಿಕೆಗಳು ಹಿಂದಿನಿಂದಲೂ ಅವರ ಪೂರ್ವಜರಲ್ಲಿ ನಡೆದುಕೊಂಡು

ಬಂದಿದೆ. ತೇರು ಕಟ್ಟುವ ಮುನ್ನ ತನ್ನ ಸಾಮಾಗ್ರಿಗಳನ್ನು ದೇವರ ಮುಂದೆ ಪೂಜೆಗಿಟ್ಟು ಅಕ್ಕಿ, ಬೇಳೆ, ಎಲೆ, ಅಡಿಕೆ ಇತ್ಯಾದಿ (ಉಲ್ಪಿ)ಗಳನ್ನಿಟ್ಟು ಪೂಜೆ ಮಾಡಿಸಿ ನಂತರ ತೇರು ಕಟ್ಟುವ ಕೆಲಸ ಪ್ರಾರಂಭಿಸುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಕಬ್ಬಿಣದ ತೇರುಗಳು ಹೆಚ್ಚಾಗಿವೆ.

ಚೇಳಗುರಿಕೆ ಎರ್ರಿತಾತನ ತೇರು ಉತ್ಸವಕ್ಕೆ ಬಣ್ಣ, ಸೀರೆ ಇತ್ಯಾದಿಗಳಿಂದ ಅಲಂಕಾರವನ್ನು ಆ ಗ್ರಾಮದ ಹಿರಿಯರು ಸೇರಿ ಶೃಂಗರಿಸುತ್ತಾರೆ. ಅದೇ ರೀತಿ ತೇರು ಸಂದರ್ಭದಲ್ಲಿ ದೀಪದ ಬೆಳಕನ್ನು ಪಂಜು ಹಿಡಿಯುವುದರ ಮೂಲಕ ನಿರ್ವಹಿಸುತ್ತಾರೆ. ತೇರಿನಲ್ಲಿ ಇಟ್ಟಿರುವ ಎರ್ರಿತಾತನ ವಿಗ್ರಹಕ್ಕೆ ರುಮಾಲು, ಪಂಚೆ, ಕಿರೀಟ, ಕೊರಳು ಆಭರಣದ ವಸ್ತುಗಳನ್ನು ಹಾಕಿ ಮುಂದೆ ಆ ದೇವರ ಅರ್ಚಕರು ಕೊರಳಲ್ಲಿ ಆಭರಣ, ತಲೆಗೆ ಕೆಂಪು ವಸ್ತ್ರದ ರುಮಾಲು ಕೈಯಲ್ಲಿ ಕೋಲನ್ನು ಹಿಡಿದು ಇಬ್ಬರು ತರುಣರು ಚಾಮರವನ್ನು ಬೀಸುತ್ತಾ ಸುಮಾರು ೨೦೦ ಮೀಟರ್ ಹಗ್ಗದ ಸಹಾಯದಿಂದ ಜನರು ತೇರನ್ನು ಎಳೆಯುತ್ತಾರೆ. ಮೆರವಣಿಗೆ, ಡೊಳ್ಳು, ಮೇಳ, ಹಿಂದೆ ಮೇಳ ಹಾಗೂ ಭಜನಾ ಮೇಳಗಳಿರುತ್ತವೆ. ತೇರಿನ ಹಿಂದೆ ಮುತ್ತೈದೆಯರು ಆರತಿಯನ್ನು ಹಿಡಿದಿದ್ದಾರೆ, ಎರ್ರಿತಾತನ ಕುರಿತು ಯುವಕರು ಕೋಲಾಟದ ಪದಗಳನ್ನು ಹಾಡುತ್ತಾರೆ. ಈ ರೀತಿಯಾಗಿ ರಥೋತ್ಸವವು ಜನಪದ ಕಲೆಗಳಿಂದ ನಡೆಯುತ್ತದೆ.

### ಜಾತ್ರೆಯ ವಿಧಿ ವಿಧಾನಗಳು

ಪ್ರತಿವರ್ಷ ಚೈತ್ರಶುದ್ಧ ಪೌರ್ಣಮಿಯಂದು ಬಲವಂತದಿಂದ ತಾತನನ್ನು ಎತ್ತಿ ತಂದು ಕೂಡಿಸಿ ಉತ್ಸವ ಮಾಡುತ್ತಿದ್ದರು. ಅನೇಕ ಭಕ್ತರುದ್ಧಾರದ ಲೀಲೆಗಳಿಲ್ಲಿದ್ದ ತಾತನು ೧೯೨೨ರಲ್ಲಿ ಲಿಂಗೈಕ್ಯನಾದಾಗ ಮೊದಲೇ ನಿರ್ಮಿಸಿದ ಶ್ರೀಮಠದ ಒಳಗಿನ ಯೋಗಮಂಡಲದಲ್ಲಿ ಶಾಲಿವಾಹನ ಶಕೆ ೧೮೬೩ ದುಂದುಭಿ ಸಂವತ್ಸರ ಜ್ಯೇಷ್ಠಶುದ್ಧ ಷಷ್ಠಿಯಲ್ಲಿ ಜೀವಸಮಾಧಿ ಮಾಡಿದರು. ಈ ದಿನಾಂಕದ ಸ್ಮರಣಾರ್ಥವಾಗಿ ಪ್ರತಿವರ್ಷ ಮಹಾರಥೋತ್ಸವ ನಡೆಯುತ್ತದೆ. ತಾತನು ಚೇಳಗುರಿಕೆಯಲ್ಲಿ ಹತ್ತುವರ್ಷ, ಮಠದಲ್ಲಿ ಹದಿನೈದು ವರ್ಷ ಒಟ್ಟು ಇಪ್ಪತ್ತು ವರ್ಷಗಳಲ್ಲಿ ಇಲ್ಲಿ ಜೀವಿಸಿದ್ದನು. ಇದನ್ನು ಮುತ್ತಿನ ತೇರು ಎಂದು ಕರೆಯುತ್ತಾರೆ. ಪ್ರತಿ ಕಾರ್ತಿಕ ಮಾಸದಲ್ಲಿ ಶುದ್ಧ ೧ ರಿಂದ ಕಾರ್ತಿಕ ಬಹುಳ ೨೦ರವರೆಗೆ ಪ್ರತಿದಿನ ೨೫ಪೂಜೆಗಳಿಂದ ಹೂವಿನ ತೇರು ನಡೆಯುತ್ತದೆ. ಹೀಗೆ ಇಲ್ಲಿ ಎರಡು ಜಾತ್ರೆ ತೇರು ಎಳೆಯಲಾಗುವುದು ವಿಶಿಷ್ಟವಾಗಿದೆ.

ಗ್ರಾಮದಲ್ಲಿ ಜಾತ್ರೆ ಆರಂಭಗೊಳ್ಳುವ ಸೂಚನೆಯಾಗಿ ಪ್ರಥಮದಿನ, ಮಠದ ಆಡಳಿತದವರು ಊರು ಜನರಿಗೆಲ್ಲಾ ಸಿಹಿ ಊಟಹಾಕುತ್ತಾರೆ. ಅದಕ್ಕಾಗಿ ಅವರು ಪೂರ್ವಭಾವಿಯಾಗಿದ್ದ ದೇಣಿಗೆ ಪಡೆದಿರುತ್ತಾರೆ. ಪ್ರಾರಂಭದ ಸೂಚನೆಯಾಗಿ ಸಂಜೆ 'ಹುಚ್ಚಾಯ' ಸಿದ್ಧಗೊಳಿಸಲಾಗುತ್ತದೆ. ಎತ್ತಿನ ಬಂಡಿಯ ಮೇಲೆ ಮಂಚವಿಟ್ಟು, ಮಂಚದಿಂದ ಬಂಡಿಯ ಉದ್ದಿಗೆಯವರೆಗೆ ಭತ್ತದ ಹುಲ್ಲಿನಿಂದ ಆನೆಯ ಸೊಂಡಿಲಿನಾಕಾರದ ಮುಖವನ್ನು ಸಿದ್ಧಗೊಳಿಸಿ ಅದಕ್ಕೆ ಬಿಳಿ ಅರಿವೆ ಸುತ್ತಿ, ಕರಿಯ ಹಾಳಿಯನ್ನು ಕಣ್ಣುಗಳಿಗಾಗಿ ಹಾಗೂ ಧಾನ್ಯಕೇರುವ ಮೊರಗಳನ್ನು ಕಿವಿಗಳಾಗಿ ಉಪಯೋಗಿಸಲಾಗುತ್ತದೆ. ಹಿಂದಿನ ದಿನಗಳಲ್ಲಿ ಕೆಲವು ಗ್ರಾಮಗಳಲ್ಲಿ ಆನೆಗಳನ್ನು ಊರಲ್ಲಿ ಮೆರೆಯಿಸಿ ಆ ಮೂಲಕ ಜನರನ್ನು ಜಾತ್ರೆಯ ಕಡೆಗೆ ಆಕರ್ಷಿಸುವುದು

ಕೆಲವು ಉಲ್ಲೇಖಗಳಲ್ಲಿ ಕಾಣಬಹುದು. ಇದೀಗ ಆನೆಯನ್ನು ಕೊಳ್ಳುವುದಾಗಲೀ ಅಥವಾ ಅದನ್ನು ಸಂರಕ್ಷಿಸುವುದಾಗಲೀ ಬಹುದುಬಾರಿ ಹಾಗೂ ಕಷ್ಟದ ಕೆಲಸವಾದುದರಿಂದ ಆನೆಯ ಸಂಕೇತವಾಗಿ 'ಹುಚ್ಚಾಯ' ಎಳೆಯುವ ಪದ್ಧತಿ ಬಳಕೆಯಲ್ಲಿ ಬಂದಂತೆ ತೋರುತ್ತದೆ.

ಹುಚ್ಚಾಯದ ಮೆರವಣಿಗೆಗೆ ಪೂರ್ವಭಾವಿಯಾಗಿ ಬಂಡಿಯ ಮೇಲಿರುವ ಮಂಚದ ಮೇಲೆ ಕುರ್ಚಿಯನ್ನು ಇಟ್ಟು ಅದರಲ್ಲಿ ತಾತನ ಭಾವಚಿತ್ರವನ್ನು ಕೂಡಿಸಿ, ಅದರ ಎರಡು ಬದಿಗೆ ತಲೆಗೆ ರುಮಾಲು, ಕೊರಳಲ್ಲಿ ದಾಗೀನ (ಆಭರಣ) ಹಸಿರು ಸೀರೆಉಟ್ಟು ನಿಂತಿರುವ ಇಬ್ಬರು ತರುಣರು ಚರ್ಮ ಬೀಸಲು ಪ್ರಾರಂಭಿಸುತ್ತಾರೆ. ಬಂಡಿಗೆ ಎತ್ತು ಹೂಡಿದೊಡನೆ ಮೆರವಣಿಗೆ ಮುಂದೆ ಸಾಗುತ್ತದೆ. ಮೆರವಣಿಗೆಯ ಮುಂಚೂಣಿಯಲ್ಲಿ ಡೊಳ್ಳು, ಮೇಳ ಹಿಂದೆ ಶಹನಾಯಿ, ಮೇಳ ಹಾಗೂ ಹಿಂದೆ ಹೆಂಗೆಳೆಯರು ಆರತಿ ಹಿಡಿದು ಹಾಡುತ್ತಾ ಬರುತ್ತಾರೆ. ಮೆರವಣಿಗೆಯುದ್ದಕ್ಕೂ ಮದ್ದು ಸುಡಲಾಗುತ್ತದೆ. ಗ್ಯಾಸು ಹಾಗೂ ಪಂಜಿನ ಬೆಳಕಿನಿಂದಾಗಿ ಮೆರವಣಿಗೆಗೆ ವಿಶೇಷ ಕಳೆ ಬಂದಿರುತ್ತದೆ.

ಮರುದಿನ ಮಹಾರಥೋತ್ಸವವಿರುತ್ತದೆ. ಅಂದು ಮಠದ ಮುಂದಿರುವ ತೇರನ್ನು ವಿಶೇಷವಾಗಿ ಶೃಂಗರಿಸುತ್ತಾರೆ. ಗುರುಹಿರಿಯರ ಆಗಮನದ ನಂತರ ತೇರು ಅದರಲ್ಲಿರುವ ಎರ್ರಿತಾತನ ಭಾವಚಿತ್ರಗಳನ್ನು ಪೂಜೆಮಾಡಿ ಸುಮಂಗಲಿಯರಿಂದ ಆರತಿ ಬೆಳಗಿಸಿದ ಮೇಲೆ ಜನರು ಹರಹರ ಮಹಾದೇವ, ಎರ್ರಿತಾತ ನಮಃ ಓಂ ಎನ್ನುವ ಮಂತ್ರಗಳನ್ನು ನುಡಿದ ಮೇಲೆ ತೇರು ಎಳೆಯಲು ಪ್ರಾರಂಭಿಸುತ್ತಾರೆ. ತೇರು ಸಾಗುಸುತ್ತಿದ್ದಂತೆ ನೆರೆದವರು ತೇರಿನೆಡೆಗೆ ಬಾಳೆಯ ಹಣ್ಣು ಹಾಗೂ ಉತ್ತುತ್ತಿಯನ್ನು ಭಕ್ತಿಗೌರವ ಸೂಚನೆಯಾಗಿ ಎಸೆಯುತ್ತಾರೆ. ತೇರಿನ ಮೆರವಣಿಗೆಯ ಮುಂಚೂಣಿಯಲ್ಲಿ ಡೊಳ್ಳು, ಮೇಳ ಅದರ ಹಿಂಭಾಗ ಶಹನಾಯಿ ಮೇಳ, ಭಜನಾ ಮೇಳ ಹಾಗೂ ಸಹಸ್ರಾರು ಸಂಖ್ಯೆಯಲ್ಲಿ ನೆರೆದಿರುವ ಭಾವುಕರು ಇದ್ದರೆ, ತೇರಿನ ಹಿಂದೆ ಸಾವಿರಾರು ಮಹಿಳೆಯರು ತೇರಿಗೆ ಅಭಿಮುಖವಾಗಿ ಕೈಮುಗಿದುಕೊಂಡು ಬರುತ್ತಾರೆ. ರಥೋತ್ಸವದ ಮರುದಿನ ಸಂಜೆ ವಾದ್ಯ ವೈಭವಗಳೊಂದಿಗೆ ಎರ್ರಿತಾತನ ಭಾವಚಿತ್ರವನ್ನು ಇಟ್ಟು ರಥದ ಪ್ರದಕ್ಷಿಣೆ ಮಾಡುತ್ತಾರೆ. ಪ್ರದಕ್ಷಿಣೆಯುದ್ಧಕ್ಕೂ ಅವರು ನೆರೆದವರೆಡೆಗೆ 'ಉಂಡು ಗಡುಬು'ಗಳನ್ನು ಎಸೆಯುತ್ತಾರೆ. ಭಾವುಕರು ಅವುಗಳನ್ನು ಆಯ್ದುಕೊಂಡು ತಿನ್ನುವುದುಂಟು. ಈ ಒಟ್ಟು ಕ್ರಿಯೆಗೆ ಕಡುಬಿನ ಕಾಳಗವೆಂದು ಕರೆಯಲಾಗಿದೆ. ಸಾಮಾನ್ಯವಾಗಿ ಕಡಬಿನ ಕಾಳಗದೊಂದಿಗೆ ರಥೋತ್ಸವದ ಕಾರ್ಯಗಳು ಪೂರ್ತಿಗೊಳ್ಳುವವು ಎಂಬ ಭಾವನೆ ಜನರಲ್ಲಿ ಮೂಡಿಬಂದಿರುತ್ತದೆ.

ಮಠದ ಹೊರಾಂಗಣದಲ್ಲಿ ಜನಜಾತ್ರೆ ಸೇರುತ್ತದೆ. ಜನ ತಂಡೋಪತಂಡವಾಗಿ ಬಂದು ಬಿಡಾರ ಹೂಡಿರುತ್ತಾರೆ. ನಿರ್ದಿಷ್ಟಪಡಿಸಿದ ಸ್ಥಳಗಳಲ್ಲಿ, ಬೇರೆ ಬೇರೆ ಅಂಗಡಿಗಳು ಹುಟ್ಟಿಕೊಳ್ಳುತ್ತವೆ. ತೆಂಗು, ಹಣ್ಣು, ಹೂವು, ಕುಂಕುಮ, ಮಿಠಾಯಿ, ಬಳೆ, ಪುಸ್ತಕ, ಫೋಟೋ, ಭಾಂಡೆಸಾಮಾನು, ಬಟ್ಟೆ, ಆಟಿಕೆ ಸಾಮಾನು ಹೀಗೆ ಅನೇಕ ವಸ್ತುಗಳ ಅಂಗಡಿ ಸಾಲುಗಳು, ಜಾತ್ರೆಗೆಂದು ಆಗಮಿಸಿದ ಜನಜಂಗುಳಿ ತಮ ತಮಗೆ ಬೇಕಾದ ವ್ಯಾಪಾರ ವಹಿವಾಟುಗಳಲ್ಲಿ ತೊಡಗುತ್ತಾರೆ. ಈ ಜಾತ್ರೆಯಲ್ಲಿ ಜನವರ್ಗ, ವರ್ಣ

ಭೇದವಿಲ್ಲದೆ ಮನರಂಜನಾ ಸಾಧನಗಳಾದ ನಾಟಕ, ಸಿನಿಮಾಗಳ, ಹಾವಾಡಿಗರ, ದೊಂಬರ, ಮಂಗನಾಟದವರ ಪ್ರದರ್ಶನಗಳು, ತೊಟ್ಟಿಲಾಟ, ಮುಂತಾದವುಗಳ ಪ್ರದರ್ಶನ ಇಲ್ಲಿ ನಡೆದಿರುತ್ತದೆ. 'ಹಬ್ಬದೂಟ ಚೆಂದ ಜಾತ್ರೆಯ ನೋಟ ಚೆಂದ' ಎಂಬಂತೆ ರಂಗುರಂಗಿನ ಉಡುಪು ಧರಿಸಿಕೊಂಡ ಯಾತ್ರಾರ್ಥಿಗಳು ಜಾತ್ರೆಯ ಮೋಜಿನಲ್ಲಿ ತೊಡಗಿರುತ್ತಾರೆ. ಅಲ್ಲಲ್ಲಿ ಭಜನಾ ಮಂಡಳಿಗಳು ಡೇರೆ ಹಾಕಿಕೊಂಡು ಪಾರಮಾರ್ಥಿಕ ಗೀತೆಗಳನ್ನು ಹಾಡುವುದರಲ್ಲಿ ತಲ್ಲೀನವಾಗಿರುತ್ತವೆ. ಹೆಣ್ಣು ಮಕ್ಕಳು ಗುಂಪುಗೂಡಿ ಎರ್ರಿತಾತನ ಕುರಿತಾದ ಹಾಡುಗಳನ್ನು ತಾವು ಇಳಿದುಕೊಂಡ ಬಿಡಾರಗಳಲ್ಲಿಯೇ ಹಾಡುವರು. ತಾತನ ಪುಣ್ಯದರ್ಶನ ಮಾಡಿಕೊಳ್ಳಲು ಆಗಮಿಸಿದ ಭಕ್ತ ಸಾಗರಕ್ಕೆ ನಿತ್ಯದಾಸೋಹದ ವ್ಯವಸ್ಥೆಯಿರುತ್ತದೆ. ಇಂಥ ಜಾತ್ರೆಗೆ ಸಡಗರ ಹಾಗೂ ಸಂಭ್ರಮದಿಂದ ಭಕ್ತರು ಆಗಮಿಸುತ್ತಾರೆಂಬುದನ್ನು ಅವರ ಹಾಡಿನ ಮುಖಾಂತರವಾಗಿ ತಿಳಿದುಕೊಳ್ಳಬಹುದು.

ಜಾತರಿಗ್ಹೋಗಲಾಕ ಸವಾರಿ ಗಾಡಿಬೇಕು
ಜೋಡೆರಡು ಎತ್ತು ಹೂಡಬೇಕು | ತಾತಯ್ಯಗ
ಜಾತರಿ ಮಾಡಿ ಬರಬೇಕು ||

ಚೇಳಗುರಿಕೆ ಪುರಹರ ವರಗುರು ತಾತಗ
ಜಾತ್ರಿಗಿ ಹೋಗೋಣ ಬಾ ಶರಣರ ಸಂಗದೋಳಾಡೋಣ ಬಾ
ಅವರ ಲೀಲೆಯೊಳಾಡೋಣ ಬಾ ||ಪ||

ಧರೆಯೊಳು ಮೆರೆಯುವ ಚೇಳ್ಳಗುರಿಕೆ
ಎತ್ತ ನೋಡಿದಲ್ಲಿ ಆನಂದಕಿರಣ
ಸಹಬಾಳದೊಳು ಸಾಧು ಭಕ್ತರಿಗೆ
ಮುಂದಿಗೆ ತೋರಿದ ತಾತ
ಮರ್ತ್ಯ ಲೋಕದೊಳ್ ಬೆಳಗಿನದ ಸ್ನೇಹನ
(ಹಾಡಿದವರು: ರಾಮಯ್ಯ ಚೇಳಗುರಿಕೆ ಗ್ರಾಮ).

ಎರ್ರಿತಾತನ ಜಾತ್ರೆಯು ಸುತ್ತ ಮುತ್ತಲಿನ ಗ್ರಾಮಗಳಲ್ಲಿ ಭಕ್ತಿ ಸಂಚಲನವನ್ನು ಉಂಟು ಮಾಡುತ್ತದೆ. ಧಾರ್ಮಿಕ ಹಿನ್ನೆಲೆಯಲ್ಲಿ ಜರುಗುವ ಈ ಜಾತ್ರೆ ಮೊದಲು ಹನ್ನೊಂದು ದಿನಗಳವರೆಗೂ ನಡೆಯುತ್ತಿದ್ದು, ಇಂದು ಮೂರು ದಿನ ವಿಶೇಷವಾದ ಪೂಜೆಗಳಿಂದ ಜಾತ್ರೆ ನಡೆಯುತ್ತದೆ. ಮಠವನ್ನೇ ಕೇಂದ್ರವಾಗಿಟ್ಟು ಇಲ್ಲಿಯ ಎಲ್ಲಾ ಚಟುವಟಿಕೆಗಳು ಪ್ರಾರಂಭವಾಗುತ್ತದೆ. ಮಠವನ್ನು ಸ್ವಚ್ಛಗೊಳಿಸಿ ಸುಣ್ಣ ಬಣ್ಣಗಳಿಂದ ಅಲಂಕರಿಸಿ, ಅದಕ್ಕೆ ವಿದ್ಯುತ್‌ದೀಪಗಳ ಅಲಂಕಾರ ಮಾಡುವರು. ಸೆಲೆಯಲ್ಲಿ ಪಾಲ್ಗೊಳ್ಳಬೇಕಾದ ಭಕ್ತಜನ ಮಡಿವಸ್ತ್ರದಿಂದ ಸಜ್ಜಾಗಿರುತ್ತಾರೆ. ಪ್ರಧಾನ ಅರ್ಚಕರು, ಆಡಳಿತ ವರ್ಗದವರು, ಪಲ್ಲಕ್ಕಿ ಸೇವೆಯವರು, ನಂದಿಕೋಲಿನ ಸೇವೆಯವರು, ಪುರವಂತರು, ಪುರೋಹಿತರು, ದೀವಟಿಗೆಯವರು, ಭಜಂತ್ರಿಯವರು, ಪ್ರಸಾದ ಸೇವೆ ಸಲ್ಲಿಸುವವರು, ಊರ ಪ್ರಮುಖರು ಹೀಗೆ ಎಲ್ಲಾರು ಮಠದ ಆಚರಣೆಯ ಎಲ್ಲಾ ವಿಧಿ

ವಿಧಾನಗಳಲ್ಲಿ ಪಾಲ್ಗೊಳ್ಳುತ್ತಾರೆ. ಎಲ್ಲವೂ ಕ್ರಮವತ್ತಾಗಿಯೇ ನಡೆಯಬೇಕು. ಒಂದೂಕ್ರಮವು ತಪ್ಪದಂತೆ ಎಚ್ಚರಿಕೆ ವಹಿಸುತ್ತಾರೆ. ಮಠದ ಒಳಾಂಗಣದಲಿ ಸಂಗೀತ, ಸಾಹಿತ್ಯತ್ವಗಳ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುವವು. ನಿತ್ಯ ಪೂಜೆಯ ಜೊತೆಗೆ ಮಠದಲ್ಲಿ ವರ್ಷದಲ್ಲಿ ನಡೆಯುವ ವಿಶೇಷ ಪೂಜಾ ಕಾರ್ಯಗಳು ಈ ರೀತಿ ಇವೆ.

೧. ಧನುರ್ಮಾಸ ಪೂಜೆ

೨. ಪ್ರತಿಮಾಸದ ಶುದ್ಧ ಷಷ್ಠಿಯಂದು ವಿಶೇಷಪೂಜೆ

೩. ಪ್ರತಿ ಅಮಾವಾಸ್ಯೆಯಲ್ಲಿ ಪೂಜೆಯ ಜೊತೆಗೆ, ಶ್ರೀಮಠದ ಒಳಾಂಗಣದಲ್ಲಿ ಪಲ್ಲಕ್ಕಿ ಉತ್ಸವ ನಡೆಯುತ್ತದೆ.

೪. ಪ್ರತಿ ಹುಣ್ಣಿಮೆಯ ಶ್ರೀಮಠದಿಂದ ಬೆಟ್ಟಕ್ಕೆ (ತಾತನು ಚೇಳಗುರಿಕೆಗೆ ಬರುವಾಗ ಕುಳಿತು ಕೊಂಡಿದ್ದ ಬೆಟ್ಟ) ಪಲ್ಲಕ್ಕಿ ಉತ್ಸವ ಹೋಗಿಬರುತ್ತದೆ.

೫. ಪ್ರತಿ ಶ್ರಾವಣ ಮಾಸದಲ್ಲಿ ಪುರಾಣ ಪ್ರವಚನಗಳು, ವಿಶೇಷ ಪೂಜಾ ಕಾರ್ಯಕ್ರಮಗಳು ನಡೆಯುತ್ತವೆ.

೬. ಜಾತ್ರೆ ಉತ್ಸವಗಳು ವಿಶೇಷ ಪೂಜೆಗಳು ನಡೆಯುತ್ತವೆ.

ಪೂಜಾ ವಿಧಿ ವಿಧಾನಗಳ ಕ್ರಮದಲ್ಲಿ ಸ್ವಲ್ಪ ವ್ಯತ್ಯಾಸ ಕಂಡು ಬಂದರೂ ಸಾಮಾನ್ಯವಾಗಿ ಎಲ್ಲಾ ಮಠಗಳಲ್ಲಿ ತದೇಕತೆಯೇ ಹೆಚ್ಚಾಗಿರುತ್ತದೆ. ವಿವಿಧ ರೀತಿಯ ಅಭಿಷೇಕ ಪೂಜೆಗಳು ನಡೆಯುತ್ತವೆ. ಚಿರಕಾಲ ರುದ್ರಾಭಿಷೇಕ, ಪಂಚಾಮೃತ ಅಭಿಷೇಕ, ಸಹಸ್ರ ಬಿಲ್ವಾರ್ಚನೆ, ಪಲ್ಲಕ್ಕಿಯ ಉತ್ಸವ, ಕರ್ಪೂರದಾರತಿ, ಮಂಗಳಾರತಿ, ಮಹಾಭಿಷೇಕ ಹಾಗೂ ಮಹಾದಾಸೋಹದ ವ್ಯವಸ್ಥೆ ಇರುತ್ತದೆ. ಬಹುತೇಕ ಮಠಮಾನ್ಯಗಳಲ್ಲಿ ವಿಭಿನ್ನತೆಗಿಂತ ಸಾಮ್ಯತೆ ಹೆಚ್ಚು ಇರುವುದು ಕಂಡುಬರುತ್ತದೆ. ಅದಕ್ಕಾಗಿಯೇ ಧಾರ್ಮಿಕತೆಯು ಸಮಾಜದಲ್ಲಿ ಏಕತೆಯನ್ನು ಬೆಳೆಸುವ ಕೊಂಡಿಯಂತೆ ಕೆಲಸ ಮಾಡುತ್ತದೆ ಎನ್ನಬಹುದು.

ಎರ್ರಿತಾತನ ಜಾತ್ರೆ ಜರುಗಲು ಒಂದು ನಿಯಮವನ್ನು ಹಾಕಿಕೊಂಡಿರುತ್ತಾರೆ. ಯಾವುದೇ ತಿಥಿ ಹೆಚ್ಚು ಕಡಿಮೆಯಾಗದಂತೆ ಹಲವು ದಿನಗಳಿಂದ ಮಾಡಿಕೊಂಡು ಬಂದ ಆಚರಣೆ ಜಾತ್ರೆಯ ಮೂರು ದಿನಗಳಲ್ಲಿ ವಿಶೇಷ ಪೂಜೆಗಳು ತಾತನ ಜೀವಸಮಾಧಿ ಕ್ಷೇತ್ರದಲ್ಲಿ ನಡೆಯುತ್ತವೆ. ಪ್ರತಿಷಷ್ಠಿ ಜ್ಯೇಷ್ಠಮಾಸದ ಶುದ್ಧ ಷಷ್ಠಿಯಂದು ಅತ್ಯಂತ ವೈಭವದಿಂದ ಜರುಗುವ ಜಾತ್ರೆ ಅಂಗವಾಗಿ ವಿವಿಧ ಕಾರ್ಯಕ್ರಮಗಳು ನಡೆಯುತ್ತವೆ.

ಹೂವಿನ ರಥೋತ್ಸವ

ಮಹಾರಥೋತ್ಸವ ಮತ್ತು ಕರ್ಪೂರದ ಆರತಿ

ಮಂಗಳಾರತಿ ಮತ್ತು ಸಪ್ತ ಭಜನಾ ಕಾರ್ಯಕ್ರಮ

ನಂದಿ ಧ್ವಜಾರೋಹಣ

ಬಸವನೋತ್ಸವ ಹಾಗೂ ವಟುಗಳ ದೀಕ್ಷಾ ಕಾರ್ಯ

ಶಿವಾನುಭವ ಗೋಷ್ಠಿ

ಮಹಾದಾಸೋಹದ ವ್ಯವಸ್ಥೆ.

ಪ್ರತಿ ಕಾರ್ತಿಕ ಮಾಸದಲ್ಲಿ ಶುದ್ಧ ೧ ರಿಂದ ಕಾರ್ತಿಕ ಬಹುಳ ೨೦ರ ವರೆಗೆ ಪ್ರತಿ ದಿನ ತಾತನವರಿಗೆ ವಿಶೇಷ ಅಭಿಷೇಕ, ಅರ್ಚನೆ ಮತ್ತು ದೀಪಾರಾಧನೆ ನಡೆಯುವುವು ಅದರ ಪ್ರಯುಕ್ತ ದೀಪೋತ್ಸವ, ಅಷ್ಟೋತ್ಸವ, ಕುಂಭಾಭಿಷೇಕ, ಪೂಜೆ ಪುರಾಣ ಪ್ರವಚನ, ಮುತ್ತಿನ ಪಲ್ಲಕ್ಕಿ ಉತ್ಸವ ಮತ್ತು ಮಹಾದಾಸೋಹದ ವ್ಯವಸ್ಥೆ ಇರುತ್ತದೆ. ಪ್ರತಿ ಆಚರಣೆಯು ಜೀವತುಂಬಿದ ರೀತಿಯಲ್ಲಿ ತುಂಬ ಜಾಗರೂಕತೆಯಿಂದ ನಡೆಯುತ್ತವೆ. ಎಲ್ಲಿಯೂ ಅಭಾಸವಾಗದಂತೆ ತಾತನವರನ್ನು ಮಠಾಧಿಪತಿಗಳು, ಪೂಜಾರಿಗಳು, ಆಡಳಿತ ವರ್ಗದವರು ಹಾಗೂ ಭಕ್ತಸಮೂಹವು ಸಹಕಾರಿಯಾಗಿ ನಿಲ್ಲುತ್ತದೆ.

**ಮಂಗಳ ಗೀತೆ**

ಮಂಗಳವು ಚಿಜ್ಯೋತಿ ರೂಪಗೆ

ಮಂಗಳವು ಪರಿಪೂತ ತಾತಗೆ

ಮಂಗಳವು ಲಿಂಗಾಂಗ ಸಮರಸ ಸೌಖ್ಯ ವಾರಿಧಿಗೆ

ಮಂಗಳವು ಸತ್ಪುಣ್ಯ ಗಾತ್ರಗ

ಮಂಗಳವು ಮಂಗಳಾಶಾತಗ

ಮಂಗಳವು ಮರೆವೊಕ್ಕ ಭಕ್ತರ ಪಮರಮ ಹೀರುಹಗೆ.

**ಧ್ವಜಾರೋಹಣ**

ಜಾತ್ರೆ ಪ್ರಾರಂಭವಾಗುವುದರ ಸಂಕೇತವೇ 'ಧ್ವಜಾರೋಹಣ ಮಠದ ಗರ್ಭ ಗುಡಿಯ ಎದುರಿಗೆ ಧ್ವಜ ಸ್ತಂಭವನ್ನು ನೆಡುವುದರಿಂದ ಶಿಷ್ಟ ಸಂಪ್ರದಾಯದೊಳಗೆ ನಡೆಯುವ ಅನೇಕ ಆಚರಣೆಗಳಿಗೆ ಒತ್ತು ನೀಡಿ, ಚಾಲನೆ ಇತ್ತಂತಾಗುತ್ತದೆ. ಉತ್ಸವದ ಯಶಸ್ಸಿಗೆ ಇದೇ ಕಾರಣ ಎಂದು ನಂಬಲಾಗಿದೆ. ಮೊದಲಿಗೆ ಈ ಧ್ವಜಕಂಬಕ್ಕೆ ಪುರೋಹಿತರು ಕಂಕಣ ಕಟ್ಟುತ್ತಾರೆ. ಈ ಕಂಕಣ ಪಾವಿತ್ರ್ಯತೆಯ ಸಂಕೇತವಾಗಿದೆ. ಧ್ವಜಕಂಬವನ್ನು ಮೊದಲಿಗೆ ಗೋಮಯದಿಂದ ಶುದ್ಧಗೊಳಿಸಿ, ಅರಿಸಿನ ಹಾಗೂ ಕುಂಕುಮವಿಟ್ಟು, ಹೂ ಹಣ್ಣು ಹಾಗೂ "ನವಧಾನ್ಯ"ಗಳಿಂದ ಪೂಜಿಸಲಾಗುತ್ತದೆ. ಜೊತೆಗೆ ಹಾಲಿನಿಂದ ಅಭಿಷೇಕ ಮಾಡಲಾಗುತ್ತದೆ. ಈ ಕಂಬದ ತುದಿಗೆ ತ್ರಿಕೋಣಾಕಾರದ ಧ್ವಜವನ್ನು ಕಟ್ಟಲಾಗಿರುತ್ತದೆ. ಹೀಗೆ ಕಟ್ಟಿ ಕಂಬನೆಟ್ಟು ಧ್ವಜಾರೋಹಣ ಮಾಡುವುದರಿಂದ ದೇವರ ಉತ್ಸಾಹ ಪ್ರಾರಂಭವಾಯಿತೆಂದು ಊರಿನ ಮಕ್ಕಳಿಗೆ, ವೃದ್ಧರವರೆಗೆ ತಿಳಿದುಬರುತ್ತದೆ.

### ಪಲ್ಲಕ್ಕಿ ಉತ್ಸವ

ಎರ್ರಿತಾತನ ಭಾವಚಿತ್ರವಿರುವ ಉತ್ಸವ ಮೂರ್ತಿ ಹೊರಡುವುದು ಪಲ್ಲಕ್ಕಿಗಳಲ್ಲಿಯೇ. ಅದನ್ನು ಪಲ್ಲಕ್ಕಿ ಸೇವೆ, ಪಾಲ್ಕಿ ಅಥವಾ ಹೂವಿನ ಪಲ್ಲಕ್ಕಿ ಎಂದು ಜನಪದರು ಕರೆಯುತ್ತಾರೆ. ಇತ್ತೀಚೆಗೆ ಮುತ್ತಿನ ಪಲ್ಲಕ್ಕಿಯು ಇದಕ್ಕೆ ಸೇರ್ಪಡೆಯಾಗಿದೆ. ಇಲ್ಲಿ ಮುತ್ತಿನ ಪಲ್ಲಕ್ಕಿ ಹಾಗೂ ಹೂವಿನ ಪಲ್ಲಕ್ಕಿಗಳು ಈ ಎರಡು ಜಾತ್ರೆ ವಿಶೇಷತೆಯಲ್ಲಿ ಕಾಣಬಹುದು. ಹೂವಿನಲ್ಲಿ ಅಲಂಕೃತಗೊಂಡರೆ ಹೂವಿನ ಪಲ್ಲಕ್ಕಿಯೆಂದೂ, ಹೂಗಳನ್ನು ಹೊರತುಪಡಿಸಿ ಕೇವಲ ಮುತ್ತುಗಳಿಂದಲೇ ಅಲಂಕೃತಗೊಂಡ ಪಲ್ಲಕ್ಕಿಯಾದರೆ ಮುತ್ತಿನ ಪಲ್ಲಕ್ಕಿ ಎಂದೂ ಜನಪದರು ಗುರುತಿಸುತ್ತಾರೆ. ಮೊದಲು ಮಠದಲ್ಲಿ ವಿಶೇಷವಾಗಿ ಪೂಜಿಸಿ ಉತ್ಸವ ಮೂರ್ತಿಯನ್ನು ಈ ಪಲ್ಲಕ್ಕಿಯಲ್ಲಿ ತಂದು ಪ್ರತಿಷ್ಠಾಪಿಸಿ, ಊರಿನ ಪ್ರಮುಖ ಬೀದಿಯಲ್ಲಿ ಮೆರವಣಿಗೆಗೆ ಕರೆದೊಯ್ಯುತ್ತಾರೆ. ಅಲ್ಲಲ್ಲಿ ನಿಂತು ಭಕ್ತರ ಪೂಜೆ ಸ್ವೀಕರಿಸಿ ಹೊರಡುವ ಪಲ್ಲಕ್ಕಿಗಳ ಮುಂದೆ ವಾದ್ಯಗೋಷ್ಠಿಯವರು ನೆರೆದಿದ್ದು, ರಸ್ತೆಯ ಉದ್ದಗಲಕ್ಕೂ ಸಂಗೀತ ಸೇವೆಯನ್ನು ಸಲ್ಲಿಸುತ್ತಾರೆ. ಈ ಪಲ್ಲಕ್ಕಿ ರಾತ್ರಿ ಸುಮಾರು ಹನ್ನೊಂದರಿಂದ ಹನ್ನೆರಡರ ಸಮಯದಲ್ಲಿ ಮಠದ ಬಳಿಯಿಂದ ಹೊರಟು, ಊರ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡಿ ಬೆಳಗಿನ ಜಾವ, ಮತ್ತೆ ಮಠದ ಬಳಿ ಸೇರುತ್ತಾರೆ. ಪಲ್ಲಕ್ಕಿಗಳು ಹೀಗೆ ಹೊರಡುವಾಗ ಕರಡಿಮೇಳ, ನಂದಿಕೋಲು, ಹುಲಿವೇಷ, ಡೊಳ್ಳು ಕುಣಿತ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳು ನಡೆಯುವುದನ್ನು ನೋಡಿ ಆನಂದಿಸುತ್ತಾರೆ. ಪಲ್ಲಕ್ಕಿಯನ್ನು ಬೆಳಗಿನಿಂದಲೇ ಸಿದ್ಧಗೊಳಿಸುವ ಕಲಾಪ್ರವೀಣರು ವಿವಿಧ ರೀತಿಯ ಬಣ್ಣದ ಮುತ್ತುಗಳು ಮತ್ತು ಹೂವುಗಳಿಂದ ಪಲ್ಲಕ್ಕಿಯನ್ನು ಸಿದ್ಧಗೊಳಿಸಿರುತ್ತಾರೆ. ಹೀಗೆ ದೇವರ ಉತ್ಸವ ಮೂರ್ತಿ ಪಲ್ಲಕ್ಕಿಗಳಲ್ಲಿ ಮೆರವಣಿಗೆ ಹೊರಟಾಗ ಹಳ್ಳಿಯ ಜನ ಹಣ್ಣು ಕಾಯಿ ಮಾಡಿಸುತ್ತಾರೆ. ಇದನ್ನು ಹಣ್ಣುಕಾಯಿ ಮಾಡಿಸುವುದು ಎನ್ನುತ್ತಾರೆ. (ಎಚ್.ಎಲ್.ನಾಗೇಗೌಡ ಸಂ. ಕನ್ನಡ ಜಾನಪದ ಕೋಶ, ಪುಟ.೭೭೧).

### ನಂದಿಕೋಲು ಮೆರವಣಿಗೆ

ಜೋಡು ಪಲ್ಲಕ್ಕಿಯ ಮೆರವಣಿಗೆಯೊಂದಿಗೆ ನಂದಿಕೋಲು ಇರುತ್ತದೆ. 'ನಂದಿಕೋಲಿನ ಮೆರವಣಿಗೆ' ಎಂದು ಕರೆಯಿಸಿಕೊಳ್ಳುವ ಈ ಆಚರಣೆ ಶಿವಾಲಯಗಳ ಜಾತ್ರೆ ಉತ್ಸವಗಳಲ್ಲಿ ಕಂಡುಬರುತ್ತದೆ. ಈಶ್ವರ, ವೀರಭದ್ರ, ಬಸವೇಶ್ವರ ಮುಂತಾದ ಶಿವದೇವಾಲಯಗಳಲ್ಲಿ ಈ ಸಂಪ್ರದಾಯವಿದೆ. ಆದರೆ ಚೇಳಗುರಿಕೆ ಎರ್ರಿತಾತನ ಜಾತ್ರೆಯ ಸಂಬಂಧದ ಆಚರಣೆಗಳಲ್ಲಿ ಇದೂ ಸಮಾವೇಶಗೊಂಡಿದ್ದು ಕುತೂಹಲದ ಸಂಗತಿ. ಮಠದ ಪಕ್ಕದಲ್ಲಿಯೇ ಶಿವಲಿಂಗವಿದೆ. ಈ ಗ್ರಾಮದಲ್ಲಿ ಮೊದಲು ದೇವಾಲಯಗಳು ಇರುವ ಕುರುಹುಗಳು ಕಂಡುಬಂದರೂ ಎರ್ರಿತಾತನ ಮಹಿಮೆಯ ಮರೆಯಲ್ಲಿ ಅವುಗಳು ಸ್ವಲ್ಪ ಗೌಣವೆಂಬಂತೆ, ಆ ಊರಿನಲ್ಲಿ ಕ್ಷೇತ್ರಕಾರ್ಯ ಮಾಡಿದಾಗ ತಿಳಿದುಬಂದಿದೆ. ವೀರಭದ್ರ, ಶಿವ ಹಾಗೂ ಈಶ್ವರ ಇವರೆಲ್ಲರೂ ಶೈವ ಪಂಥದ ದೇವರಾಗಿರುವುದರಿಂದಲೋ ಏನೋ ಎರ್ರಿತಾತನನ್ನು ಸಹ ಲಿಂಗಾಕಾರದ ಭಂಗಿಯನ್ನು ಕುಳಿತಿದ್ದ ಎಂಬುದನ್ನು ಆಧಾರಿಸಿ ಶಿವನ ಸ್ವರೂಪದೊಳಗೆ ಸೇರಿರುವುದು ಈ ನಂದಿಕೋಲು ಆಚರಣೆಗೆ ಪುಷ್ಠಿಯಾಗಿರಬೇಕು ಎಂಬುದು ಗಮನಿಸಬೇಕಾದ ಸಂಗತಿಯಾಗಿದೆ. ಇಲ್ಲಿಯ ನಂದಿಕೋಲು ಹತ್ತರಿಂದ

ಇಪ್ಪತ್ತು ಅಡಿಗಳಷ್ಟು ಉದ್ದವಿದೆ. ಸಾಮಾನ್ಯವಾಗಿ ಶಿವದೇವಾಲಯಗಳ ನಂದಿಯ ಕೋಲುಗಳಿಗೆ ಕೆಂಪು ಬಣ್ಣದ ಅರಿವೆ ಸುತ್ತಿದಂತೆ ಇಲ್ಲಿ ಸಹ ಅದರ ಸಂಕೇತದಂತೆ ಆಚರಿಸಲಾಗುತ್ತದೆ.

**ಸಪ್ತ ಭಜನಾ ಸೇವೆ**

ಚೇಳಗುರಿಕೆ ಅಕ್ಕಪಕ್ಕದ ಗ್ರಾಮಗಳಿಂದ, ದೂರದ ಪ್ರದೇಶಗಳಿಂದ ಹಾಗೂ ವಿವಿಧ ರಾಜ್ಯಗಳಿಂದ ಜಾತ್ರೆಗೆ ಆಗಮಿಸುವರು. ಹೀಗೆ ಬಂದ ಭಕ್ತಾದಿಗಳು ತಮ್ಮೂರಿನ ಭಜನಾ ಮಂಡಳಿಗಳನ್ನು, ಅಥವಾ ಭಜನಾ ಗುಂಪುಗಳನ್ನು ಕರೆತಂದಿರುತ್ತಾರೆ. ಜಾತ್ರೆಯ ಬಯಲಿನಲ್ಲಿ ಡೇರೆ ಹಾಕಿಕೊಂಡು ತಮ್ಮೂರಿನ ಆರಾಧ್ಯದೈವ ಇಲ್ಲವೇ ಸಂತರ ಭಾವಚಿತ್ರವಿಟ್ಟು ಭಜನೆಮಾಡುತ್ತಾರೆ. ವಿಶೇಷವಾಗಿ ಇದೇ ಗ್ರಾಮದ ಮಠದಲ್ಲಿ ಭಜನಾ ಸಮೂಹವೇ ಇರುವುದನ್ನು ಗಮನಿಸಬಹುದು. ಈ ಭಜನಾ ಮಂಡಳಿಗಳು ತಮ್ಮ ಆರಾಧ್ಯ ದೈವಗಳ ಹೆಸರಿಟ್ಟುಕೊಂಡಿರುತ್ತವೆ. ಜಾತ್ರೆಯ ಎಲ್ಲ ದಿನಗಳಲ್ಲಿ ಭಜನೆಯ ಸೇವೆ ಹಗಲು ರಾತ್ರಿ ನಡೆಯುತ್ತದೆ. ಈ ಭಜನಾ ಮೇಳದ ಹಾಡುಗಳಲ್ಲಿ ಪಾರಮಾರ್ಥಿಕ ಗೀತೆಗಳೊಂದಿಗೆ ಎರ್ರಿತಾತನ ಕುರಿತ ಭಕ್ತಿಯ ಹಾಡುಗಳು ಕೇಳಿಬರುತ್ತವೆ. ನಿದರ್ಶನಕ್ಕೆ ಒಂದು ಹಾಡು ಗಮನಿಸಬಹುದು.

ಪರಿಪಾಲಿಸೋ ಎಮ್ಮನ್ನು ಸದ್ಗುರು ತಾತ

ಪರಿಪಾಲಿಸೋ ಎಮ್ಮನ್ನು ||ಪ||

ಪರಿಪಾಲಿಸೋ ಎಮ್ಮ ಕರುಣಾಸಾಗರ ನಿಮ್ಮ

ಚರಣ ಕಮಲಗಳ ಮರೆಯದೆ ಭಜಪುವೆನು

ಜಗದಾರಿ ಮೂರ್ತಿ ನೀನು ಸತ್ಯವಿರೆಂದು

ನಿಗಮಾದಿಗಳು ಹೇಳ್ವವೊ

ಭಗವಂತ ಗುರುಹರ ಸುಗುಣಾಂತರಂಗನ

ತ್ರಿಗುಣರಹಿತನೆ ಜಗದ್ಗುರು ತಾತನೇ

**ಮಹಾದಾಸೋಹ ಸೇವೆ**

ದಾಸೋಹವು ಪ್ರತಿದಿನ ಮಠದಲ್ಲಿ ಇರುತ್ತದೆ. ಆದರೆ ಜಾತ್ರೆಯ ಸಂದರ್ಭದಲ್ಲಿ ಬಂದ ಭಕ್ತರು, ಪುರವಂತರು, ಸಾಧುಸಂತರು ಈ ದಾಸೋಹದ ಮನೆಯಲ್ಲಿ ಪ್ರಸಾದ ತೆಗೆದುಕೊಳ್ಳುತ್ತಾರೆ. ಜಾತಿ ಮತದ ಭೇದ-ಭಾವವಿಲ್ಲದೆ ಇಲ್ಲಿ ಎಲ್ಲರೂ ಸಹಪಂಕ್ತಿಯಲ್ಲಿ ಕುಳಿತು ಪ್ರಸಾದ ಪಡೆಯುತ್ತಾರೆ. ಭಕ್ತರು ಕೊಟ್ಟ ಕಾಣಿಕೆಗಳಿಂದ, ಹಲವಾರು ಗ್ರಾಮಗಳಿಂದ ಭಕ್ತ ಜನರು ತರುವ ಧವಸ ಧಾನ್ಯಗಳಿಂದ ಈ ದಾಸೋಹ ನಡೆಯುತ್ತದೆ. ಹೀಗೆ ಜಾತ್ರೆ ನಡೆಯುವಷ್ಟು ದಿವಸ ಇಲ್ಲಿ ಮಹಾದಾಸೋಹ ನಡೆಯುತ್ತದೆ. ದಾಸೋಹದ ಕುರಿತಾಗಿ ಮುಂದಿನ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

**ಸಾಮೂಹಿಕ ಜನಿವಾರಧಾರಣ**

ಜಾತ್ರೆಯ ಸಂದರ್ಭದಲ್ಲಿ ಲಿಂಗಾಯತರು, ವಿಶ್ವಕರ್ಮರು ಮಠದ ಒಳಾಂಗಣದ ಬಯಲಿನಲ್ಲಿ ಸೇರಿ ಸಾಮೂಹಿಕ ಜನಿವಾರಧಾರಣ ಮಾಡಿಕೊಳ್ಳುತ್ತಾರೆ. ಅದು ಪರಿಶುದ್ಧತೆಯ ಸಂಕೇತವಾಗಿ ಬಹುನಿರೀಕ್ಷಿತ ತೀರ್ಮಾನಗಳನ್ನೇ ತೆಗೆದುಕೊಳ್ಳುತ್ತಾರೆ. ಈ ಆಚರಣೆಗೆ ವಿವಿಧ ಪ್ರದೇಶಗಳಿಂದ ಬಂದ ಲಿಂಗಾಯತ ಸಮುದಾಯದವರು ತಾತನ ಸಾನಿಧ್ಯದಲ್ಲಿ ಈ ಕಾರ್ಯವನ್ನು ಮಾಡುತ್ತಾರೆ.

**ಮಲ್ಲಪ್ಪನ ಮಟ್ಟಿ**

ಎರ್ರಿತಾತನು ಚೇಳಗುರಿಕೆ ಗ್ರಾಮಕ್ಕೆ ಬರುವ ಮುಂಚೆ ಮಲ್ಲಪ್ಪನ ಮಟ್ಟಿ ಎಂಬ ಬೆಟ್ಟದಲ್ಲಿ ಇರುತ್ತಿದ್ದರು. ಧ್ಯಾನಮನಸ್ಕನಾಗಿ ಕುಳಿತ ತಾತನನ್ನು ಕಂಡು ಅನೇಕರು ಹುಚ್ಚನೆಂದು ಅಪಹಾಸ್ಯಗೈದದ್ದುಂಟು. ಜಾತ್ರೆಯ ದಿನಗಳಲ್ಲಿ ಈ ಮಟ್ಟಿಗೆ ವಿಶೇಷವಾದ ಅಧ್ಯಾತ್ಮಿಕ ಅಸಂಖ್ಯಾತ ಸಾಧುಗಳು, ಭಕ್ತರು ಸೇರಿ ಭಂಗಿಗಳನ್ನು ಸೇದುತ್ತಾ ಪರಮಾರ್ಥಿಕ ವಿಷಯಗಳನ್ನು ಕುರಿತು ಮಾತನಾಡುತ್ತಿರುತ್ತಾರೆ. ಜೀವ, ಜಗತ್ತು, ಈಶ್ವರ, ಮಳೆ, ಬೆಳೆ ಬರುತ್ತವೆ. ಇಲ್ಲಿ ಎರ್ರಿತಾತನು ಅನೇಕ ಲೀಲೆಗಳನ್ನು ಮಾಡಿದನೆಂದು ಅನೇಕ ಕಡೆ ಉಲ್ಲೇಖವಾಗಿದೆ. ಗ್ರಾಮದಿಂದ ಸುಮಾರು ೨ ಕಿ.ಮೀ.ದೂರದಲ್ಲಿರುವ ಈ ಮಲ್ಲಪ್ಪನ ಮಟ್ಟಿ ಪವಿತ್ರ ಸ್ಥಳವಾಗಿದೆ. ಹೀಗಾಗಿ ಈಗಲೂ ಜನರಿಗೆ ಆಕರ್ಷಣೀಯ ಸ್ಥಳವಾಗಿ ಮಾರ್ಪಟ್ಟಿದೆ.

**ಪಾನಕ ಬಂಡಿ**

ತಾತನ ಜಾತ್ರೆಯ ಸಂದರ್ಭದಲ್ಲಿ ತೇರು ನಡೆದ ಮರು ದಿನವೇ ಪಾನಕ ಬಂಡಿಯನ್ನು ಹೂಡುತ್ತಾರೆ. ಪ್ರತಿವರ್ಷದಲ್ಲಿ ಎರಡು ಸಾರಿ ಈ ಕಾರ್ಯಕ್ರಮ ನಡೆಯುತ್ತದೆ. ಭಕ್ತರ ಹರಕೆ ಮುಡುಪುಗಳನ್ನು ಮುಟ್ಟಿಸುವುದಾಗಿರುತ್ತದೆ. ಏಕೆಂದರೆ ಈ ಪದ್ಧತಿಯು ಪೂರ್ವಜರಿಂದಲೂ ನಡೆದುಕೊಂಡು ಬಂದಿದೆ. ಹರಕೆಗಳು ಮುಟ್ಟಿಸುವ ರೀತಿಗಳು ಬೇರೆ ಬೇರೆಯಾಗಿರುತ್ತವೆ. ಬೆಳ್ಳಿ, ಬಂಗಾರ, ಹಣ, ವಸ್ತ್ರ ಹಾಗೂ ಪಾನಕ ಬಂಡಿಗಳನ್ನು ಹೂಡುವುದರ ಮೂಲಕ ತಮ್ಮ ತಮ್ಮ ಹರಕೆಗಳನ್ನು ಮುಟ್ಟಿಸುತ್ತಾರೆ. ತೇರು ಮುಗಿದ ಮೊದಲ ದಿನವೇ ಈ ಪಾನಕದ ಗಾದಿಯನ್ನು ಮನೆಯಿಂದ ಮಠದವರೆಗೆ ಧ್ವನಿಮಾಧ್ಯಮಗಳು ಮತ್ತೈದೆಯರು ಕಳಸ ಹಿಡಿದುಕೊಂಡು ಮೆರವಣಿಗೆಯ ಮೂಲಕ ಮಠದ ದೇವಸ್ಥಾನಕ್ಕೆ ಬರುತ್ತಾರೆ. ಪೂಜೆಯನ್ನು ಕ್ರಮಬದ್ಧವಾಗಿ ಮುಗಿಸಿದನಂತರ ಪಾನಕವನ್ನು ಎಲ್ಲಾ ಜನರಿಗೂ ಹಂಚುತ್ತಾರೆ. ಆದರೆ ಈ ಪದ್ಧತಿಯನ್ನು ತಳಸಮುದಾಯದವರು ಪರೋಕ್ಷವಾಗಿ ಬೇರೆ ಸಮುದಾಯದವರ ಮೂಲಕ ಪಾನಕಬಂಡಿಯನ್ನು ಮುಟ್ಟಿಸುತ್ತಾರೆ. ಅಂದರೆ ಪಾನಕಕ್ಕೆ ಬೇಕಾದ ಬೆಲ್ಲ, ಶುಂಠಿ, ನೀರು ಪೂಜಾ ಸಾಮಾಗ್ರಿಗಳನ್ನು ಅಂಗಡಿಯಿಂದ ತರಿಸಿ ಬಂಡಿಯನ್ನು ತಳಿರು ತೋರಣಗಳಿಂದ ಶೃಂಗರಿಸಿ ಬೇರೆ ಸಮುದಾಯದವರಿಗೆ ಕೊಡುವುದರ ಮೂಲಕ ಪಾನಕ ಬಂಡಿಗಳ ಮೆರವಣಿಗೆಯ ಕಾರ್ಯವನ್ನು ಈ ರೀತಿಯಾಗಿ ಪೂರ್ತಿಗೊಳಿಸುತ್ತಾರೆ. ಇಲ್ಲಿ ಸೂಕ್ಷ್ಮವಾಗಿ ಗಮನಿಸಿದಾಗ ಕೆಳಸಮುದಾಯದವರ ಪಾನಕ ಮೇಲ್ ಜಾತಿಯವರು ಸ್ವೀಕರಿಸುವುದರಿಂದ ಅದನ್ನು ಉನ್ನತ ಸಮುದಾಯಕ್ಕೆ ಒಪ್ಪಿಸುವ ಪರಿಪಾಠವಿರಬೇಕು.

ಈ ಆಚರಣೆಯನ್ನು ಅದೇ ಗ್ರಾಮದವರು ಮಾತ್ರವಲ್ಲ ಅಸಂಡಿ, ಗೋಡೆಹಾಳ, ಜೋಳದರಾಶಿ, ಮೀನಳ್ಳಿ, ಸಿಡಗಿನಮೋಕ, ಹಗರಿ, ಗುಂತಗಲ್ಲು, ಉರವಕೊಂಡ ಮುಂತಾದ ಗ್ರಾಮಗಳಿಂದ, ಇತರೆ ರಾಜ್ಯಗಳಿಂದಲೂ ಬಂದ ಭಕ್ತರು ನೆರವೇರಿಸುತ್ತಾರೆ. ಹೀಗೆ ಬಂದ ಪಾನಕ ಬಂಡಿಗಳು ಮಠದ ದೇವಸ್ಥಾನವನ್ನು ಮೂರು ಬಾರಿ ಪ್ರದಕ್ಷಿಣೆ ಮಾಡಿ ಪೂಜೆಯನ್ನು ಸಲ್ಲಿಸಿ ಪಾನಕವನ್ನು ಅರ್ಚಕರು ಮೊದಲು ಹರಕೆ ಹೊತ್ತವರಿಗೆ ಹಾಕುತ್ತಾರೆ. ನಂತರ ಅದನ್ನು ಆಯಾ ಗ್ರಾಮ ಭಕ್ತರಿಗೆ ಹಾಕುತ್ತಾರೆ. ವರ್ಷಕ್ಕೆ ಎರಡು ಸಾರಿ ಪಾನಕ ಬಂಡಿಯನ್ನು ಹೂಡುತ್ತಾರೆ. ಆದರೆ ಪಲ್ಲಕ್ಕಿಯ ಉತ್ಸವದ ದಿನದಂದು ಪಲ್ಲಕ್ಕಿ ಬಂಡಿಯ ಹಿಂದುಗಡೆ ಪಾನಕ ಬಂಡಿಯನ್ನು ಸಹ ಹೂಡುತ್ತಾರೆ. ಉತ್ಸಾಹದಲ್ಲಿ ಪಾಲ್ಗೊಂಡ ಎಲ್ಲಾ ಭಕ್ತಾದಿಗಳಿಗೂ ಈ ಪಾನಕವನ್ನು ಹಾಕುತ್ತಾರೆ.

### ಮಜಾಲ್ತಿ

ರಥೋತ್ಸವ ಆದ ಎರಡನೆಯ ದಿನ ನಡೆಯುವ ಕಾರ್ಯಕ್ರಮವೇ ಮಜಾಲ್ತಿ. ಅಂದರೆ ರಥೋತ್ಸವ ಮುಗಿದು ಎರಿತಾತನ ಮಠದಿಂದ ಮಲ್ಲಪ್ಪನ ಮಟ್ಟಿಯವರೆಗೂ ಹೋಗಿ ಅರ್ಚಕರು, ಭಕ್ತರು ವಿಶೇಷ ಪೂಜೆಯನ್ನು ಮಾಡುತ್ತಾರೆ. ಭಕ್ತರು ರಾತ್ರಿಯೆಲ್ಲಾ ನಾನಾ ವಿಧದ ಭಕ್ತಿಯಲ್ಲಿ ಕೊಂಡಾಡುವರು ಇದನ್ನು ಮಜಾಲ್ತಿ ಎಂದು ಕರೆಯುತ್ತಾರೆ.

ರಥೋತ್ಸವ ಮುಗಿದ ನಂತರ ಪಲ್ಲಕ್ಕಿಯನ್ನು ಸಿದ್ಧಪಡಿಸುತ್ತಾರೆ. ಈ ಪಲ್ಲಕ್ಕಿಯನ್ನು ರಾತ್ರಿಸಮಯದಲ್ಲಿ ಮಠದಿಂದ ನಂದಿಕೋಲು, ತಮಟೆ, ಡೊಳ್ಳು ಬಾರಿಸುತ್ತಾ ಹೆಂಗಸರು ಭಕ್ತಿಗೀತೆಗಳನ್ನು ಹಾಡುತ್ತಾ ಹೆಂಗಳೆಯರು ಕೋಲಾಟ ಹಾಕುತ್ತಾ ಮೆರವಣಿಗೆಯ ಮೂಲಕ ಪಲ್ಲಕ್ಕಿಯನ್ನು ಹೊರಗಡೆ ತಂದು ವೀರಶೈವ ಸಮುದಾಯದವರು ಮಾತ್ರ ಪಲ್ಲಕ್ಕಿಯನ್ನು ಹೊರುತ್ತಾರೆ. ಬೇರೆ ಸಮುದಾಯದವರು ಪಾಲ್ಗೊಳ್ಳುತ್ತಾರೆಯೇ ಹೊರತು ಅದನ್ನು ಹೊತ್ತುಕೊಳ್ಳುವುದಿಲ್ಲ. ಈ ಪಲ್ಲಕ್ಕಿಯ ವಿಷಯದಲ್ಲೂ ಮಡಿವಂತಿಕೆಯು ಸೂಕ್ಷ್ಮವಾಗಿ ಗೋಚರಿಸುತ್ತವೆ. ಮುಂದೆ ಪಲ್ಲಕ್ಕಿಯನ್ನು ಇಳಿಸುವವರೆಗೂ ಮಂತ್ರವನ್ನು ಪಠಿಸುತ್ತಾ ಇರುತ್ತಾರೆ. ಈ ಆಚರಣೆಗೂ ವಿವಿಧ ಗ್ರಾಮಗಳಿಂದ ಭಕ್ತರು ಆಗಮಿಸುತ್ತಾರೆ. ಆ ದಿನ ರಾತ್ರಿ ಬೇರೆ ಬೇರೆ ಬಣದವರು ಎದುರು ಬದುರಾಗಿ ಕೂತು ಭಜನೆ ಮಾಡುವ ಸಂಪ್ರದಾಯವಿದೆ. ಸೂರ್ಯೋದಯದವರೆಗೂ ಪೈಪೋಟಿ ಮೇಲೆ ಭಕ್ತಿಯ ಭಜನೆ ಮಾಡುತ್ತಾರೆ.

### ಓಕಳಿ

ಜಾತ್ರೆಯು ಮುಗಿದ ನಂತರ ಕೊನೆಯ ದಿನದಲ್ಲಿ ಓಕಳಿ ಹಾಕುವ ಸಂಪ್ರದಾಯವಿದೆ. ಎಲ್ಲಾ ಸಮುದಾಯದವರು ಕೆಂಪು, ನೀಲಿ, ಹಸಿರು, ಕಪ್ಪು ಮುಂತಾದ ಬಣ್ಣಗಳನ್ನು ತೆಗೆದುಕೊಂಡು ನೀರಿನಲ್ಲಿ ಕಲಸಿ ಒಬ್ಬರಿಗೊಬ್ಬರು ಮೈಗೆಹಾಕುವುದು, ಮುಖಕ್ಕೆ ಬಣ್ಣಹಚ್ಚುವುದು ಸಂತೋಷದಿಂದ ಈರೀತಿಯ ಓಕಳಿ ಆಟವನ್ನು ಆಡುತ್ತಾರೆ. ಗಂಡಸರು ಹೆಂಗಸರು ಚಿಕ್ಕವರು ದೊಡ್ಡವರು ಎಲ್ಲಾ ಸಮುದಾಯದವರು, ಜಾತ್ರೆಗೆ ಬಂದಂತಹ ನೆಂಟರು ಬಂಧು ಬಾಂಧವರು ಭಾಗಿಗಳಾಗಿರುತ್ತಾರೆ. ಬೇರೆ ಬೇರೆ ಗ್ರಾಮದಿಂದ ಬಂದವರಿಗೂ ಸಹ ಬಣ್ಣವನ್ನು ಹಾಕುತ್ತಾರೆ.

### ಜನಪದ ಕಲೆಗಳು

ತಮಟೆ, ನಂದಿಕೋಲು, ಡೊಳ್ಳು, ಭೈರವನ ಕುಣಿತ, ನಾಟಕ, ಬಯಲಾಟ, ಇತ್ಯಾದಿ ಜಾನಪದ ಕಲೆಗಳನ್ನು ಜಾತ್ರೆಯಲ್ಲಿ ಕಾಣಬಹುದು. ಜಾತ್ರೆಯಲ್ಲಿ ವಾದ್ಯಗಳನ್ನು ಬಾರಿಸುತ್ತಾ ತಮಟೆ ಹೊಡೆಯುತ್ತಾ, ನಂದಿಕೋಲನ್ನು ಹಿಡಿದು ಕುಣಿಯುವುದು, ನೆಲದ ಮೇಲೆ ನಾಣ್ಯವನ್ನು ಕೈಯಿಂದ ಮುಟ್ಟದೇ ಹಣೆಗೆ ಹಚ್ಚಿಕೊಳ್ಳುವುದು ಮುಂತಾದ ಮನೋರಂಜನೆಯು ದ್ವಿಗುಣಗೊಂಡಿರುತ್ತದೆ. ಒಬ್ಬರಿಗಿಂತ ಒಬ್ಬರು ನಂದಿಕೋಲನ್ನು ಭಿನ್ನವಾಗಿ ಕುಣಿಸುವುದು, ಗೊಂಬೆಗಳ ಮುಖವಾಡವನ್ನು ಧರಿಸಿಕೊಂಡು ಜನರನ್ನು ನಕ್ಕು ನಲಿಸುವುದು ಇಂಥಹ ಪ್ರದರ್ಶನ ಕಲೆಗಳು ಕಾಣುತ್ತಿರುತ್ತವೆ. ವೀರಭದ್ರನ ಕುಣಿತ ಅದರೊಂದಿಗೆ ಒಡಪುಗಳನ್ನು ಹೇಳುತ್ತಾ, ಸಮಾಳದ ನಾದಕ್ಕೆ ತಕ್ಕಂತೆ ಕುಣಿಯುವುದು ಕಂಡುಬರುತ್ತದೆ. ಜಾತ್ರೆಯ ದಿನ ನಾಟಕ ಪ್ರದರ್ಶನ ಮಾಡುತ್ತಾರೆ. ನಾಟಕದ ತಾಲೀಮು ಸುಮಾರು ಎರಡು ತಿಂಗಳ ಕಾಲ ನಡೆದಿರುತ್ತದೆ. ಸ್ತ್ರೀ ಪುರುಷರ ಪಾತ್ರಗಳು ಭಿನ್ನರೀತಿಯಲ್ಲಿ ಕಂಡುಬರುತ್ತವೆ. ಅಭಿನವ ಕಾಳಗ, ರತಿ ಕಲ್ಯಾಣ, ಪಾಂಡುರಂಗ ವಿಜಯ, ಪಾರ್ಥವಿಜಯ, ರಾಮಾಯಣದ ವಸ್ತುವಿಷಯಗಳ ಕುರಿತು ಬಯಲಾಟಗಳು ಪ್ರದರ್ಶನಗೊಳ್ಳುತ್ತವೆ. ಬೇರೆ ಬೇರೆ ಗ್ರಾಮಗಳಿಂದಲೂ ಜನರು ಬಂದು ಇದರಲ್ಲಿ ಪಾಲ್ಗೊಳ್ಳುತ್ತಾರೆ.

### ಅಡಿಟಿಪ್ಪಣಿಗಳು

೧. ಜವರೇಗೌಡ ದೇ, ಜಾನಪದ ಅಧ್ಯಯನ ಚರಿತ್ರೆ, ಪು.೩೨೧

೨. ಸತ್ಯವೇದ, ಹೊಸ ಒಡಂಬಡಿಕೆ

೩. ರಹಮತ್ ತರೀಕೆರೆ, ಕರ್ನಾಟಕದ ನಾಥಪಂಥ, ಪು.೨೮

೪. ಮಂಜುನಾಥ ಬೇವಿನಕಟ್ಟಿ, ಜಾನಪದ ಉತ್ಖನನ, ಪು.೧೧೬

೫. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು, ಪು.೧೫೦

೬. ಅದೇ ಪು.೧೫೧

೭. ಸತ್ಯವೇದ ಹಳೆಯ ಒಡಂಬಡಿಕೆ, ನ್ಯಾಯಾಸ್ಥಾಪಕರು, ಅಧ್ಯಾಯ ೧೧. ಪು.

೮. ಸತ್ಯವೇದ ಆದಿಕಾಲದ ಭಾಗ ಮೊದಲ ಕೆಲವು ಅಧ್ಯಾಯಗಳು ಗಮನಿಸಬಹುದು.

೯. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು, ಪು.೧೪೯

೧೦. ವೆಂಕಟೇಶ ಇಂದ್ವಾಡಿ, ಮಂಟೇಸ್ವಾಮಿ ಕಾವ್ಯ ಸಾಂಸ್ಕೃತಿಕ ಮುಖಾಮುಖಿ, ಪು.೪೮

೧೧. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪು.೨೯೦

೧೨. ನಾಗೇಗೌಡ ಎಚ್.ಎಲ್. (ಸಂ) ಕನ್ನಡ ಜಾನಪದ ಕೋಶ, ಪು.೭೭೧.

## ಅಧ್ಯಾಯ - ೪

### ಚೇಳಗುರಿಕೆ ಎರ್ರಿತಾತನ ಕುರಿತ ಸಾಹಿತ್ಯ

೪.೧. ಉಲ್ಲೇಖಿತ ಸಾಹಿತ್ಯ ಕೃತಿಗಳು

೪.೨. ಪುರಾಣಗಳು

೪.೩. ಭಕ್ತಿಗೀತೆಗಳು

## ಚೀಳಗುರಿಕೆ ಎರ್ರಿತಾತನ ಕುರಿತ ಸಾಹಿತ್ಯ

### ೪.೧. ಉಲ್ಲೇಖಿತ ಸಾಹಿತ್ಯ ಕೃತಿಗಳು

ಸಾಹಿತ್ಯ ಮತ್ತು ಧರ್ಮಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಪರಸ್ಪರ ಅವಲಂಬಿತವಾಗಿದ್ದು, ಬಹುತೇಕ ಧರ್ಮದ ಧಾರ್ಮಿಕ ವಿಧಿ-ವಿಧಾನಗಳು ಸಾಹಿತ್ಯದ ಮುಖೇನ ಸಮಾಜದ ಜನರಲ್ಲಿ ಪಸರಿಸುವಂತೆ ಮಾಡುತ್ತದೆ. ಒಮ್ಮೊಮ್ಮೆ ಧಾರ್ಮಿಕ ಆಂದೋಲನಕ್ಕೆ ರೆಕ್ಕೆ ಪುಕ್ಕಗಳನ್ನು ಸೇರಿಸಿ ಜೈಕಾರ ಹಾಕಿರುವುದು ಸಾಹಿತ್ಯದ ಕಣ್ಣಿನಿಂದಲೇ. ಅದಕ್ಕಾಗಿಯೇ ನಮ್ಮ ಪ್ರಾಚೀನ ಸಾಹಿತ್ಯಾಸಕ್ತರು 'ಅರವುದು ಧರ್ಮಮಂ ಕಾವ್ಯಧರ್ಮಮಂ' ಎಂಬ ಧೀರೋಕ್ತಿಯನ್ನು ನುಡಿದಿರುವುದು. ಇಷ್ಟೊಂದು ಬೃಹತ್ ಸಂಸ್ಕೃತಿ ಭಾರತದ ನೆಲೆಯನ್ನು ಇನ್ನಷ್ಟು ಗಟ್ಟಿಗೊಳಿಸುತ್ತಾ, ವಿಸ್ತರಿಸುತ್ತಾ ಸೂರ್ಯನ ರಶ್ಮಿಗಳಂತೆ ಪ್ರತಿ ಸಂಸ್ಕೃತಿಗಳ ಅರಿವಿಗೆ ಸಹಾಯಕ ಹಾಗೂ ಪ್ರೇರಣೆಯಾಗಿ ನಿಂತಿವೆ. ಧಾರ್ಮಿಕ ಪರಂಪರೆಯು ಹಲವಾರು ಮಜಲುಗಳ ಪ್ರತಿರೂಪವಿದ್ದಂತೆ, ತನ್ನೊಳಗೆ ತಾ ಬೆರೆದಂತೆ ಬೆಳೆದಂತೆ. ವಿಪುಲವಾದ ಧಾರ್ಮಿಕ ಆಚರಣೆಗಳೊಂದಿಗೆ ಧಾರ್ಮಿಕ ಮಹಾಪುರುಷರ ಜೀವನ ಸಾಧನೆ, ಸಿದ್ಧಿಯ ರೂಪಾಂತರಗಳು ಹಾಗೂ ಅವರ ಲೀಲೆಗಳ ಕೇಂದ್ರೀಕೃತ ವ್ಯವಸ್ಥೆಯನ್ನು ಬೃಹತ್ತಾಗಿ, ಮಹತ್ತಾಗಿ ಔನತ್ಯದ ಶಿಖರಕ್ಕೆ, ನಮ್ಮ ಭಾರತೀಯ ವೇದ ಆಗಮಗಳು, ಪುರಾಣ ದಂತಕಥೆಗಳು ಸಾಕ್ಷಿಯಾಗಿವೆ.

ವಚನ ಸಾಹಿತ್ಯವು ಶಿವಶರಣ-ಶರಣೆಯರ ಮೂಲ ತಾತ್ವಿಕ ನಿಲುವಿನೊಳಗೆ ಬೇರ್ಪಡಿಸದ ಅಂತರ್ಸಂಬಂಧ ಪಡೆದು, ಸಮಾಜದ ಓರೆಕೋರೆಗಳನ್ನು ವಚನ ಮಾತುಗಳ ಮೂಲಕ, ವಚನ ಧಾಟಿಗಳ ಮೂಲಕ ಭಕ್ತಿಯ ಅಲೆಗಳ ಅರಿವು ಕರ್ನಾಟಕ ಸಾಹಿತ್ಯವನ್ನು ತಡವಿದರೆ ನಮಗೆ ವೇದ್ಯವಾಗುತ್ತದೆ. ಈ ರೀತಿಯಾಗಿ ಒಮ್ಮೆ ಬೀಸಿದ ಭಕ್ತಿಯ ಗಾಳಿ ಇಂದಿನವರೆಗೂ ಅದರ ನಿಶ್ಯಬ್ಧದೊಳಗಿನ ಶಬ್ಧದಂತೆ ಕಿವಿಯಲ್ಲಿ ಗುನುಗುತ್ತಿದ್ದು 'ಅವಧೂತ ಸಾಹಿತ್ಯದ ಅರಿವು ಮತ್ತು ಇರವು ಅದರ ಜೀವಂತ ರೂಪಿಕೆಗಳಾಗಿವೆ. ಶರಣ ಸಾಹಿತ್ಯವು ಮಾತೇ ಮಾಣಿಕ್ಯವೆಂಬುದನ್ನು ಎತ್ತಿಹಿಡಿದರೆ ಅವಧೂತ ಸಾಹಿತ್ಯವು ಮೌನವೇ ಸಿದ್ಧಿ ಎಂಬ ತತ್ವದೊಳಗೆ ಎಲ್ಲವನ್ನು ಇಲ್ಲವಾಗಿಸುವ, ಇಲ್ಲವಾಗಿಸುವುದನ್ನು ಇರುವಾಗಿಸುವ ಬದ್ಧತೆಗಳನ್ನು ಬಿಚ್ಚಿಡುತ್ತದೆ.

ಅವಧೂತ ಸಾಹಿತ್ಯ ಎಂದಾಕ್ಷಣ ನಮಗೆ ಉದ್ಭವಿಸುವ ಮೊದಲ ಪ್ರಶ್ನೆ ಅವಧೂತರು ಸಾಹಿತ್ಯ ರಚಿಸಿದರೇ? ಅವರು ಏಕಾಂತ ಮೌನಿಗಳು ಅವರು ಆಗೊಮ್ಮೆ ಈಗೋಮ್ಮೆ ತಾತ್ವಿಕ ಹಂದರದೊಳಗೆ ಪಿಸುಗುಡುತ್ತಿದ್ದರೇ ವಿನಃ ಸಾಹಿತ್ಯ ಸೃಷ್ಟಿಯ ಗೋಜಿಗೆ ಹೋಗಲಿಲ್ಲ. ವಚನಕಾರರಂತೆ ಸಮಾಜದ ಕೆಡುಕನ್ನು ನೇರವಾಗಿ ದಂಡಿಸುವ ಯಾವ ಕಾರ್ಯಕ್ಕೂ ಕೈ ಹಾಕದೆ ಮೌನದಲ್ಲಿಯೇ ಮಹತ್ತನ್ನು ಮೆರೆದವರು ಅಂಥಹವರ ಕುರಿತ ಸಾಹಿತ್ಯ ಅತೀ ಕಡಿಮೆ ಎನ್ನಬಹುದು.

ಬದುಕಿನ ಬಹುದೊಡ್ಡ ಜಂಜಾಟಗಳಿಗೆ ಬೇಸತ್ತು ಅರಿವಿದ್ದೋ ಅರಿವಿಲ್ಲದೆಯೋ ಲೌಕಿಕತೆಯಿಂದ ದೂರ ಜಾರಿದವರು. ಕೆಲವು ಪುರಾಣ ಕೃತಿಗಳಲ್ಲಿ ಅವಧೂತರ ಒಟ್ಟು ಪರಿಕಲ್ಪನೆಯನ್ನು ಅವರ ಆಂತರಿಕತೆಗೆ ಆಧರಿಸಿಯೇ ನಿರ್ವಚಿಸಿದ್ದಾರೆ.

೧. ಅವಧೂತರು ಮೌನಿಗಳು, ಯಾವಾಗಲಾದರೊಮ್ಮೆ ಮೌನ ಮುರಿದು ಮಾತನಾಡಿದ್ದಾರೆ.

೨. ಅವುಗಳು ಯಾರಿಗೂ ಅರ್ಥವಾಗುತ್ತಿರಲಿಲ್ಲ.

೩. ನುಡಿಯುತ್ತಿದ್ದ ಮಾತುಗಳು ಸಾಂಕೇತಿಕ ಶಬ್ದಗಳಂತಿದ್ದವು

೪. ತಮಗೆ ತಾವೇ ಪಿಸುಧ್ವನಿಯಲ್ಲಿ ಮಾತನಾಡಿಕೊಳ್ಳುತ್ತಿದ್ದರು.

೫. ಶಿಷ್ಯರಿಗೆ ಅವರ ಸೇವೆ-ಸಾಮಿಪ್ಯವೇ ಉಪದೇಶವಾಗುತ್ತಿತ್ತು.

೬. ಅವಧೂತರು ನುಡಿದ ಕೆಲ ನುಡಿಗಳು, ನಡೆಗಳು, ಉಚ್ಚಾರ, ಆಚರಣೆಗಳು ಲೌಕಿಕರಿಗೆ ಲೀಲೆಗಳಾಗಿ ಕಂಡಿವೆ.

(ಕರಿಯಪ್ಪ: ಜೆ. ಬಳ್ಳಾರಿ ಜಿಲ್ಲೆಯ ಅವಧೂತರು ಅಪ್ರಕಟಿತ ಮಹಾನಿಬಂಧ ಪು. ೨೦೦).

ಅವಧೂತರ ವರ್ತನೆಗಳು ಲೌಕಿಕಾನುಭವಕ್ಕೆ ನಿಲುಕಲಾರದವುಗಳಾಗಿವೆ. ಇಂಥಹ ವಿಚಿತ್ರ ರೀತಿಯ ಹುಚ್ಚು ಭಾವನೆಗಳು ಅವರಲ್ಲಿ ಹೆಚ್ಚಾಗಿ ಇರುವುದು ಕಂಡುಬರುತ್ತದೆ. ಬಸವಪುರಾಣ ಮೊದಲಾದ ವೀರಶೈವ ಪುರಾಣಗಳ ಜೊತೆಗೆ ಬಹುತೇಕ ಮೌಖಿಕ ಸಂಪ್ರದಾಯವಾಗಿ ಸಾಗಿಬರುತ್ತಿರುವ ಜಾನಪದ ಸಾಹಿತ್ಯ, ದಂತಕಥೆ, ಮೊದಲಾದವುಗಳಲ್ಲಿಯೂ ಶಾಶ್ವತ ಹಲವು ಗುಣ ಲಕ್ಷಣಗಳು ಕಂಡುಬರುತ್ತವೆ. (ವಿದ್ಯಾಶಂಕರ್ ಎಸ್. ವೀರಶೈವ ಪುರಾಣಗಳು ಪು. ೦೫) ಇತ್ತೀಚಿಗೆ ಅವಧೂತರ ಕುರಿತ ಹುಚ್ಚುಭಾವನೆಗಳು ಜನರಲ್ಲಿ ಮಾಯವಾಗಿ ಆರಾಧ್ಯ ದೈವಗಳಾಗಿ, ಭಕ್ತರ ಸಂಕಷ್ಟಗಳ ನಿವಾರಣೆಗಾಗಿ, ಗ್ರಾಮಗಳ ಮಾರಕ ರೋಗಗಳಿಂದ ಮುಕ್ತವಾಗಿಸುವ ಯೋಗಿಗಳಾಗಿ ಪೂಜೆಗೊಳ್ಳುತ್ತಿರುವುದು ಕಂಡುಬರುತ್ತದೆ.

ಈ ರೀತಿಯ ಅವಧೂತರಲ್ಲಿ ಚೇಳಗುರಿಕೆ ಎರ್ರಿತಾತರು ಒಬ್ಬರಾಗಿದ್ದಾರೆ. ಬಾಲ್ಯ, ಸಂಸಾರ ಇದ್ದುದೆಲ್ಲವನ್ನು ಬಿಟ್ಟು ಇಲ್ಲದುದರಯೆಡೆಗೆ ನಡೆದ ದಾರಿಯನ್ನು ಕುರಿತು ಜೋಳದರಾಶಿ ದೊಡ್ಡನಗೌಡರು, ಚನ್ನಬಸವೇಶ್ವರ ಸಿ.ವ. ನಾಗೇಶ ಶಾಸ್ತ್ರಿಗಳು ವೈ. ಬಸವರಾಜ್ ಬಿ.ಸಿ. ಹಾಗೂ ಶಿವಾನಂದ ಎಸ್. ಮುಂತಾದವರು ಐತಿಹ್ಯವೆಂಬಂತೆ ವೈ.ಯಂ. ಚಂದ್ರಯ್ಯನವರು ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಆಧಾರಗಳಿಂದ ಎರ್ರಿತಾತನವರ ಜೀವನ ವೃತ್ತಾಂತವನ್ನು ಕಟ್ಟಲು ಪ್ರಯತ್ನಿಸಿದ್ದಾರೆ. ಈ ಕೃತಿಗಳಲ್ಲಿ ಬಾಲ್ಯ

ಸಂಸಾರ, ಗುರುದರ್ಶನ, ಪವಾಡಗಳು ಹಾಗೂ ಸಮಾಧಿ ಸಿದ್ಧಿಗಳನ್ನು ನಿರೂಪಿಸುವ ಪ್ರಯತ್ನವು ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಚೇಳಗುರಿಕೆ ಶ್ರೀ ಎರ್ರಿಸ್ವಾಮಿಗಳ ಶಿವಮಯ ಜೀವನ ಚರಿತ್ರೆ**

ಗಮಕ ಕಲಾನಿಧಿ ಎಂದೇ ಹೆಸರುಗಳಿಸಿದ ಜೋಳದರಾಶಿ ದೊಡ್ಡನಗೌಡರು ಈ ಗ್ರಂಥದ ಕರ್ತೃರಾಗಿದ್ದಾರೆ. ಚೇಳಗುರಿಕೆ ಎರ್ರಿತಾತನ ಕುರಿತು ಬೆಳಕು ಚೆಲ್ಲುವ ಮಹತ್ ಕೃತಿ ಇದಾಗಿದೆ. ಈ ಗ್ರಂಥವು ಮುಖ್ಯವಾಗಿ ಎರಡು ಭಾಗಗಳಲ್ಲಿ ವಿಭಜಿಸಲಾಗಿದೆ. ಮೊದಲನೆಯ ಭಾಗದಲ್ಲಿ ಎರ್ರಿತಾತನ ಜೀವನ ಕುರಿತ ಕೆಲವು ಮಹತ್ವದ ಸಂಗತಿಗಳನ್ನು ಮುಖ್ಯಾಂಶದ ರೂಪದಲ್ಲಿ ನಮೂದಿಸಲಾಗಿದ್ದು, ನಂತರದ ಭಾಗದಲ್ಲಿ ಅವರ ಜೀವಿತದ ಹಲವಾರು ಘಟನೆಗಳನ್ನು ಕುರಿತು ಬರೆಯಲಾಗಿದೆ. ಎರಡನೆಯ ಭಾಗದಲ್ಲಿ ಆಶುಕವಿ ತಿಕ್ಕಯ್ಯನು ರಚಿಸಿದ ಕೆಲವು ಹಾಡುಗಳನ್ನು ನಿರೂಪಿಸಿಲಾಗಿದೆ.

ಮಲ್ಲಪ್ಪನ ಮಟ್ಟಿಯಲ್ಲಿ ಮೊದಲು ಬಂದು ಕುಳಿತ ತಾತನನ್ನು ಗ್ರಾಮದ ಹಿರಿಯರು ೧೮೭೭ರ ಹೇವಳಂಬಿ ಸಂವತ್ಸರದಲ್ಲಿ ಚೇಳಗುರಿಕೆಗೆ ಕರೆತರಲಾಯಿತು. ಈ ಗ್ರಂಥವು ತಾತನ ಪೂರ್ವಚರಿತ್ರೆಯ ಬಗ್ಗೆ ಅಷ್ಟೊಂದು ವಿವರಿಸುವ ಗೋಜಿಗೆ ಹೋಗದೆ, ಸಂಕ್ಷಿಪ್ತತೆಯು ಹೆಚ್ಚಾಗಿ ಕಂಡುಬರುತ್ತದೆ. ಮನಸ್ಸಿನ ಸಹಜ ಗುಣವೇ ಸಂಚಾರ. ಗಾಳಿಬೀಸುವುದು ಅತ್ಯಂತ ಸ್ವಭಾವಿಕವಿದ್ದಂತೆ, ನೀರು ಹರಿಯುವುದು ಪ್ರಕೃತಿ ಗುಣವಾದಂತೆ, ಮನಸ್ಸಿನ ಗುಣವು ವಿಷಯದ ಸುತ್ತ ಸುಳಿಯುವುದು ಮತ್ತು ಎತ್ತೆತ್ತಲೂ ಸುತ್ತುವುದು. ಸುಳಿಯುವುದು ಬೇರೆ. ಸುತ್ತುವುದು ಬೇರೆ. ಅದಕ್ಕೆ ಆಧ್ಯಾತ್ಮಿಕ ಜೀವನದ ರುಚಿ ಹತ್ತಿ ಬಿಟ್ಟರೆ ಆ ಬಳಿಕ ಲೋಕ ವ್ಯವಹಾರದಲ್ಲಿ ಅಷ್ಟೊಂದು ಆಸಕ್ತಿ ತೋರದು. ಅದರಲ್ಲಿಯೂ ಸದ್ಭಕ್ತಿ, ಸುಜ್ಞಾನಗಳ ಅಮೃತವಾರಿಧಿಯಲ್ಲಿ ಮಿಂದ ಮೇಲೆ ವಿಷಯಾಸಕ್ತಿಯ ಕೆಸರು ಗುಂಡಿಯಲ್ಲಿ ಮೀಯಲು ಬಯಸದು. ಪರಮಾರ್ಥ ವಿಚಾರದ ಸುವಾಸನೆಯನ್ನು ಆಘ್ರಾಣಿಸಿದ ಮೇಲೆ ವಿಷಯ ವಾಸನೆಯ (ಲೌಕಿಕ ಆಶಯಗಳು) ದುರ್ಗಂಧವನ್ನು ಮೂಸಿಸಲು ಇಚ್ಛಿಸದು. ಅದಕ್ಕಾಗಿಯೇ ಎರ್ರಿತಾತನು ತಾನು, ತನ್ನದೆಂಬ ಇಹದ ಮೋಹವನ್ನು ತೋರೆದ ಘಟನೆಗಳನ್ನು ದೊಡ್ಡನಗೌಡರು ಮನೋಜ್ಞವಾಗಿ ಬಿಡಿಸಿದ್ದಾರೆ.

ಪ್ರಥಮ ಭಾಗದಲ್ಲಿ ಎರ್ರಿತಾತನ ಕುರಿತ ಈ ಘಟನೆಗಳನ್ನು ಈ ಕೃತಿಯಲ್ಲಿ ಬಿಂಬಿಸಲಾಗಿದೆ. ತಿಕ್ಕಯ್ಯನ ಆಗಮನವನ್ನು ತಿಳಿಸುತ್ತದೆ. ನಂತರ ತಾತನ ನಿವಾಸಕ್ಕೆ ಒಂದು ಚಿಕ್ಕ ಮನೆಯನ್ನು ಕಟ್ಟಿಸಿದುದು, ತಾತನ ಸೇವೆಗೆಂದು ಊರ ಉಮಾಪತಿ ಬಸವಯ್ಯನವರನ್ನು ನೇಮಿಸಲಾಯಿತು. ತಿಕ್ಕಯ್ಯನು ೧೯೦೭ರಲ್ಲಿ ಇಂದು ನಿರ್ಮಾಣಗೊಂಡ ಮಠವನ್ನು ಕಟ್ಟಿಸಲು ಭಕ್ತಾದಿಗಳ ನೆರವಿನಿಂದ ಪ್ರಾರಂಭಿಸಿ ವಡ್ಡರೊಂದಿಗೆ ಬರೆಯಿಸಿದ ಕರಾರು ಪತ್ರ ಮಠದಲ್ಲಿ ಇಂದಿಗೂ ಇದೆ ಎಂಬುದನ್ನು ಈ ಕೃತಿಯು ತಿಳಿಸುತ್ತದೆ. ಮಠವನ್ನು ಕಟ್ಟಿದನಂತರದ ಕೆಲವೇ ದಿನಗಳಲ್ಲಿ ಮಠವನ್ನು ಬಿಟ್ಟು ಹೋಗುವುದು ಅದು ತಾತನ ಆಜ್ಞೆಯಂತೆಯೇ ಮರುತ್ತರ ನೀಡದೆ ಆತ ಎಲ್ಲಿಂದ ಬಂದಿದ್ದನೋ ಎಲ್ಲಿಗೆ ಹೋದನೋ ಯಾರಿಗೂ ಇಂದಿನವರೆಗೂ ತಿಳಿದಿಲ್ಲ. ಈತನು ಜಾನಪದ ಕವಿಯಾಗಿ, ತಾತನನ್ನು ಕುರಿತು ಹಾಡಿದ ಭಕ್ತಿಗೀತೆಗಳನ್ನು ಸಂಗ್ರಹಿಸಿ

ಮಠದಿಂದ ಪ್ರಕಟಿಸಲಾಗಿತ್ತು. ನಂತರ, ಮಠದ ನಿರ್ವಹಣೆಯ ವ್ಯವಸ್ಥೆಯನ್ನು ಪಾಲ್ತೂರು ಸಿದ್ದಲಿಂಗಪ್ಪನವರು ವಹಿಸಿ ದಕ್ಷತೆಯನ್ನು ಮೆರೆದಿದ್ದಾರೆ. ಇವರ ಸಂಗಡಿಗರಾಗಿ ಆನಂದಯ್ಯ ಕೆ. ಬಸಯ್ಯನವರು ಮಠದ ದಾಸೋಹದ ಸೇವೆಯಲ್ಲಿದ್ದರು ಎಂದು ತಿಳಿಸುತ್ತದೆ.

ಬಹುಭಕ್ತರ ಆಗಮನದಿಂದ ತಾತನ ಮಠ ದಿನದಿಂದ ದಿನಕ್ಕೆ ತುಂಬಿಹೋಗುತ್ತಿತ್ತು. ತಾತ ಮೌನಿಯಾಗಿಯೇ ಇರುತ್ತಿದ್ದ. ಬಂದ ಭಕ್ತರ ಭಾಗ್ಯದಂತೆ ಇಚ್ಛೆಯಾದಾಗ ಒಂದೆರಡು ಮಾತಾಡುತ್ತಿದ್ದ. ಈ ಸಮಯದಲ್ಲಿಯೇ ಹುಬ್ಬಳ್ಳಿ ಸಿದ್ಧಾರೂಢರಲ್ಲಿಂದ ಬಂದ ಹುಚ್ಚಲಿಂಗಪ್ಪನೆಂಬುವರು ತಾತನನ್ನು ಸೇವಿಸಿ ಆತನ ಅಪ್ಪಣೆಯಂತೆ ತುಮಕೂರು ಚಕ್ಕಲಿಯನ್ನರ್ಪಿಸಿ ಕೃತಾರ್ಥನಾಗಿ ಶಿವರಾಮಾವಧೂತನಾಗಿ ಕೊನೆಗೆ ಹಂಪೆಯಲ್ಲಿ ಸಮಾಧಿಯಾದ ಸಂಗತಿಗಳನ್ನು ಹಾಗೂ ತಾತನು ಚೇಳಗುರಿಕೆ ಗ್ರಾಮದಲ್ಲಿ ಹತ್ತುವರುಷ, ಮಠದಲ್ಲಿ ಹದಿನೈದು ವರುಷ ಮತ್ತಿ ಒಟ್ಟು ಇಪ್ಪತ್ತೈದು ವರುಷಗಳು ಜೀವಿಸಿದ್ದನು ಎಂಬುದರ ಹಲವಾರು ಘಟನೆಗಳನ್ನು ಒಳಗೊಂಡ ಕೃತಿ ಇದಾಗಿದೆ.

ಎರ್ರಿತಾತನ ಜೀವ ಸಮಾಧಿ ನಂತರ ಹದಿನೈದು ವರುಷಗಳ ಮೇಲ್ಪಟ್ಟು ಮಠದ ಕಾರ್ಯಗಳು ಸುಪ್ತವಾಗಿಯೇ ಇದ್ದವು. ತರುವಾಯ ತಾತನ ಶಿಷ್ಯರೆಂದು ಹೇಳಲ್ಪಡುವ ರಾಮಲಿಂಗಸ್ವಾಮಿಗಳೊಂದಿಗೆ ಬೆಂಗಳೂರಿನಿಂದ ಎ.ಜಿ. ಶ್ಯಾಮಣ್ಣನವರು ಇಲ್ಲಿಗೆ ಬಂದಾಗ ರಾಮಲಿಂಗಸ್ವಾಮಿಗಳು ಇದು ಮಹಾಕ್ಷೇತ್ರವಾಗುತ್ತದೆ. ಈ ಕಾರ್ಯದಲ್ಲಿ ತಾತನಿಗೆ ನಿನ್ನ ತನು, ಮನ, ಧನಗಳನ್ನರ್ಪಿಸು ಎಂದು ಹೇಳಿದ. ತರುವಾಯ ಶ್ಯಾಮಣ್ಣನವರು ಮಠದ ಸರ್ವತೋಮುಖ ಅಭಿವೃದ್ಧಿಯ ಕಾರ್ಯದಲ್ಲಿ ತೊಡಗಿದರು. ಇವರ ಶ್ರದ್ಧಾಭಕ್ತಿಗಳಿಂದ ಮಠವು ಮತ್ತೆ ಹಿಂದಿನ ಅನುಗ್ರಹ ಮತ್ತು ಪ್ರಭೆ ಬೀರುವಂತಾಯಿತು. ಅನೇಕ ಭಕ್ತರು ಈ ಕಾರ್ಯದಲ್ಲಿ ತಮ್ಮ ಭಕ್ತಿಯ ಸೇವೆ ಸಲ್ಲಿಸಿದರು. ಶ್ಯಾಮಣ್ಣನವರ ಆಪೇಕ್ಷೆಯಂತೆ ತೊಗರಿ ವೀರಮಲ್ಲಪ್ಪ, ಚೇಳಗುರಿಕೆಯ ಪಾಟೀಲ್, ಭೀಮನಗೌಡ, ಹಿರೇಗೌಡರು, ಸಿದ್ಧಲಿಂಗನ ಗೌಡರು ಶ್ರೀ ಕ್ಷೇತ್ರ ರಚನೆಯ ಸೇವೆಗೆ ನೆರವಾದರೆಂಬ ವಿಷಯವನ್ನು ಈ ಕೃತಿ ತಿಳಿಸುತ್ತದೆ.

ನೆನೆದವರ ಬಯಕೆಗಳನ್ನು ಈಡೇರಿಸುವ ತಾತನು ಒಮ್ಮೆ ಕರಿಬಸಯ್ಯನವರು ತಮ್ಮ ಸಹೋದರ ಮುದುಕಯ್ಯನವರೊಂದಿಗೆ ಶ್ರೀಮಠದ ದಾಸೋಹ ಇತ್ಯಾದಿ ಕಾರ್ಯಗಳನ್ನು ನಡೆಸುತ್ತಿರುವಾಗ ಒಮ್ಮೆ, ಉರುವಕೊಂಡ ಶ್ರೀಗಳ ಶ್ರಾವಣ ಪೂಜಾ ಸಮಾರಂಭದಲ್ಲಿ ನಡೆದ ಘಟನೆಯಿಂದ ಮಠಬಿಟ್ಟು ಹೋದರು. ಮದುಕಯ್ಯನವರು ತಾತನನ್ನು ಭಕ್ತಿಯಿಂದ ಪೂಜಿಸಿದ ಫಲವಾಗಿ ಉರವಕೊಂಡ ಸ್ವಾಮಿಗಳ ಶಾಖಾದಿ ಮಠವಾದ ಸಿಂಧನೂರಿನ ಮಠಕ್ಕೆ ಅಧಿಪತಿಗಳಾದರಂತೆ. ಮುಂದುವರೆದು ೧೯೫೩ರಲ್ಲಿ ಧಾರವಾಡದ ಮೃತ್ಯುಂಜಯ ಮಹಾಸ್ವಾಮಿಗಳು ಇಲ್ಲಿಗೆ ಬಂದಾಗ, ಅವರ ಅಪ್ಪಣೆಯಂತೆ ಶಿವಾನುಭವ ಸಂಘವು ಸ್ಥಾಪನೆಯಾಗಿ ಕಾರ್ಯಕ್ರಮಗಳು ನಡೆಯುತ್ತಿವೆ. ಪ್ರತಿವರುಷ ಮಹಾರಥೋತ್ಸವದ ಅಂಗವಾಗಿ ಶಿವಾನುಭವದ ಸಮ್ಮೇಳನಗಳು ನಡೆಯುತ್ತವೆ. ೨೧ ಗ್ರಾಮಗಳ ಭಜನಾ ಸಂಘಗಳಿಂದ ಸಪ್ತಭಜನೆಯು ನಡೆಯುತ್ತಿರುವುದು ಮಹಾಸ್ವಾಮಿಗಳ ನುಡಿಯಿಂದಲೇ ಎಂಬುದು ಸ್ಪಷ್ಟವಾಗುತ್ತದೆ. ಕೆ. ಬಸಯ್ಯನವರು

ಹಿಂದೆ ಮಠಬಿಟ್ಟು ಹೋದ ತರುವಾಯ ತಾತನ ಮುನಿಸಿಗೆ ಬಲಿಯಾಗಿ ನಾನಾ ರೀತಿಯ ತೊಂದರೆಗಳನ್ನು ಅನುಭವಿಸಿ ನಾಲ್ಕಾರು ವರುಷ ಎಲ್ಲೆಲ್ಲಿಯೋ ತಿರುಗಿ ಕೊನೆಗೆ ಮಠಕ್ಕೆ ಬಂದು ತಾತನ ಸೇವೆಯಲ್ಲಿದ್ದು ಲಿಂಗೈಕ್ಯರಾಗಿದ್ದು ಅವರನ್ನು ದಂಡಪಾಣಿಯ ಬೆಟ್ಟದಲ್ಲಿ ಸಮಾಧಿ ಮಾಡಲಾದ ಹಲವಾರು ಸಂಗತಿಗಳನ್ನು ಮುಖ್ಯಾಂಶಗಳ ರೂಪದಲ್ಲಿ ಚಿತ್ರಿಸಲಾಗಿದೆ.

ಎರ್ರಿತಾತನು ಚೇಳಗುರಿಕೆ ಗ್ರಾಮಕ್ಕೆ ಬಂದಾಗ ಅವರು ಇದ್ದ ಸ್ಥಿತಿಯನ್ನು ಈ ಕೃತಿ ಹೀಗೆ ತಿಳಿಸುತ್ತದೆ. ಪರವಶ ಸ್ಥಿತಿಯ ಎರ್ರಿಸ್ವಾಮಿಗಳ ಗತಿಮತಿಗಳು ವಿಚಿತ್ರವೂ, ಊಹಾತೀತವೂ, ಲೌಕಿಕಾನುಭವಕ್ಕೆ ನಿಲುಕಲಾರದವುಗಳು ಆಗಿದ್ದವು. ಊಟ-ಉಡುಗೆ, ಮಾಟ-ಕೂಟಗಳ ಅವರ ನಿತ್ಯ ಜೀವನವು ನೋಡುವ ಕಣ್ಣಿಗೆ ಆಶ್ಚರ್ಯಕರವಾಗಿಯೂ, ಅರಿಯುವ ಬುದ್ಧಿಗೆ ಮರೆಯಾಗಿಯೂ, ನಡೆದ ನಡತೆಗೆ ಜಡವಾಗಿಯೂ, ಪ್ರಾಪಂಚಿಕ ಮತ್ತು ಸಾಮಾಜಿಕ ವೃತ್ತಿಗೆ ವ್ಯತಿರಿಕ್ತವಾಗಿಯೂ ಇದ್ದವು. ಮಹಾತ್ಮರು ಬಾಲ, ಉನ್ಮತ್ತ, ಪಿಶಾಚಿಗಳ ವರ್ತನೆಯಂತಿರುವರೆಂದು ಹೇಳುವ ಅನುಭಾವದ ನುಡಿಯು ಎರ್ರಿಸ್ವಾಮಿಗಳಿಗೆ ಸರಿಯಾಗಿ ಅನ್ವಯಿಸುತ್ತಿತ್ತು. ಹಸಿವು, ತೃಷೆಗಳ ಅರಿವಿಲ್ಲದೆ, ಮಾನ, ಅವಮಾನ, ಭಯನಾಚಿಕೆಗಳ ಗುರುತಿಲ್ಲದೆ, ಭಾವ ಬತ್ತಲೆಯ ಕುರುಹೆಂಬಂತೆ ತನು ಬತ್ತಲೆಯಾಗಿ, ಅರೆಗಣ್ಣಿನ ನೋಟದಿಂದ ಕತ್ತಲು ಬೆಳಕುಗಳ ಹಂಗಳಿದು ಜನರಿಗೆ ಹುಚ್ಚು ಹಿಡಿಸುತ್ತ ಸುಳಿದಾಡುತ್ತಿದ್ದರು.

ದೇಹವೆಂಬ ಅರಮನೆಯಲ್ಲಿ ಮಹಾಲಿಂಗವೆಂಬರಸು
ಮನವೆಂಬ ಪೀಠದ ಮೇಲೆ ಮೂರ್ತಿಗೊಂಡು
ಅಂತಃಕರಣಗಳೆಂಬ ಪರಿಚಾರಕರುಗಳ ಕೈಯಿಂದ
ಲಿಂಗ ಪಂಚೇಂದ್ರಿಯಗಳೆಂಬ ಪರಿಯಾಣದಲ್ಲಿ
ಶಬ್ದ ಸ್ಪರ್ಶ ರೂಪರಸ ಗಂಧಂಗಳೆಂಬ ಪದಾರ್ಥಗಳನು
ಎಡೆಮಾಡಿಸಿಕೊಂಡು ಸವಿಯುತ್ತಿರಲು
ಆನಂದವೇ ಮೂರ್ತಿಯಾಗಿದ್ದ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರನು (ಉರಿಲಿಂಗಪದ್ದಿ ೨೭೯).

ದೇವರನ್ನು ಪೂಜಿಸಿ, ಪ್ರಾರ್ಥಿಸಿ, ಸ್ತುತಿಸಿ, ಧ್ಯಾನಿಸಿ ಆ ಭಾವಗಳೆಲ್ಲ ಅಳವಡಿಸುತ್ತ ಹೋದಂತೆ ಶರಣನು ಲಿಂಗದೇಹಿಯಾಗುವನು, ಶಿವಭವಿಯಾಗುವನು ಶರಣ ಧರ್ಮದಲ್ಲಿ ಶಿವೋಹಂಭಾವಕ್ಕೆ ಎಡೆಯಿಲ್ಲ, ಶಿವಭಾವಕ್ಕೆ ಮಾತ್ರ ಎಡೆಯಿದೆ "ಶಿವನೇ ನಾನು, ನಾನೇ ಶಿವನು" ಎಂಬ ಭಾವನೆಯಿಂದ ಎರ್ರಿತಾತನ ಯೋಗಸ್ಥಿತಿಯಲ್ಲಿನ ವಿಚಿತ್ರವರ್ತನೆಯನ್ನು ಕುರಿತು ಬರೆಯಲಾಗಿದೆ. ಅನುಭವಿಯಾದವನಿಗೆ ಯಾವ ಜಾತಿ ಕುಲದ ಹಂಗನ್ನು ತೊರೆದು, ಪರತತ್ವ ಪರಕಾಯ ಸ್ಥಿತಿಯು ಅವರ ಕುಲಗೋತ್ರವಾಗಿದೆ. ಇಲ್ಲಿ ಎರ್ರಿತಾತನ ಮೂಲ ಹಾಗೂ ಪೂರ್ವದ ವಸ್ತುಸ್ಥಿತಿ ಹೀಗಿರಬಹುದು ಎಂಬ ಊಹೆಗೆ ಈ ರೀತಿಯಾಗಿ ಜೋಡಿಸಿದ್ದಾರೆ.

ಎರ್ರಿಸ್ವಾಮಿಗಳು ಯಾವಾಗಲಾದರೊಮ್ಮೆ ತಮಗೆ ತಾವೇ ಮಾತನಾಡಿಕೊಳ್ಳುತ್ತಿದ್ದ ಕನ್ನಡದ ಶೈಲಿಯಿಂದ ಮೈಸೂರಿನ ನಾಡಿನವರೆಂದೂ ಊಹಿಸಬರುವಂತಿತ್ತು. "ರಂಗಾರಂಗಾ" ಎಂದು ಹೇಳಿಕೊಳ್ಳುತ್ತಿದ್ದು ನುಡಿಯಿಂದ

ಆ ರಂಗನು ಆತನ ಅನುಗ್ರಹದ ಗುರುವೋ ದೈವವೋ ಆಗಿರಬೇಕೆಂದು ಕೆಲವರ ಅಭಿಪ್ರಾಯ ಈ ಅಭಿಪ್ರಾಯವನ್ನು ಪುಷ್ಟೀಕರಿಸಲು ಕೆಲವರು ಈತನನ್ನು ಬ್ರಾಹ್ಮಣನೆಂತಲೂ, ಇನ್ನು ಕೆಲವರು ಲಿಂಗವಂತನೆಂದು ಊಹೆಗಳನ್ನು ಕಟ್ಟಿದರು. ಲಿಂಗವಂತನೆಂಬ ಊಹೆಗೆ 'ರಂಗ'ನು ಮೂಲವಲ್ಲದಿದ್ದರೂ, ಅವರು ಕೂತಾಗ ಎಡಹಸ್ತವನ್ನು ಲಿಂಗಹಸ್ತದ ಭಂಗಿಯಲ್ಲಿರುವುದು ನೋಡಿ ಆ ರೀತಿ ಊಹೆಗೆ ಆಸ್ಪದವಿದೆ ಎಂದು ಲಿಂಗವಿಲ್ಲದೆ ಹಸ್ತವನ್ನು ತಮ್ಮ ವಿಚಾರಕ್ಕೆ ಗುರಿಯಾಗಿಟ್ಟುಕೊಂಡರು. ಯಾರ ವಿಕಾರ, ಯಾವ ಗುರಿ, ಯಾರ ಚರ್ಚೆಗಳಿಗೂ ನಿಲುಕದ ನಿಶ್ಚಯಾತ್ಮಕವಾಗಿ ಜಾತಿಮತ ಪಂಥಗಳ ಚಿನ್ಹೆಗಳಿಲ್ಲದೆ ಎಲ್ಲವು ತಾನಾಗಿ ಎಲ್ಲ ಧರ್ಮದವರು ಎಲ್ಲ ಜಾತಿಯವರು ಭಕ್ತಿಯಿಂದ ನೀಡಿದ ಪದಾರ್ಥಗಳನ್ನು ಸೇವಿಸುತ್ತಿದ್ದರು. ಮುಂದುವರೆದು ಕಲ್ಯಾಣದುರ್ಗ, ಬೆಳಗುಪ್ಪೆ, ಮುಷ್ಟೂರು, ಉರವಕೊಂಡ, ವೆಲುಗೊಂಡ, ಚೀಕಲಗುರಿಕೆಗಳಲ್ಲಿದ್ದು ಒಂದು ಬಾವಿಯಿದ ಇನ್ನೊಂದು ಬಾವಿಗೆ ಹೋಗಿ ತೇಲುತ್ತಿದ್ದನೆಂಬ ವಿಚಾರವು ಈ ಕೃತಿಯಲ್ಲಿ ನಿರೂಪಿಸಲಾಗಿದ್ದು, ಪ್ರತಿಯೊಂದು ವಿಷಯಕ್ಕೆ ಒಂದು ಚೌಕಟ್ಟು ಹಾಕಿಕೊಂಡ ಬರವಣಿಗೆಯು ಇಲ್ಲಿ ವ್ಯಕ್ತವಾಗಿದೆ ಎಂದು ಹೇಳಬಹುದು.

ಅಲ್ಲಲ್ಲಿ ಸುತ್ತುತ್ತಾ ಅನೇಕ ಗ್ರಾಮಗಳಲ್ಲಿ ಹಲವು ಲೀಲೆಗಳಿಂದ ಭಕ್ತ ಸಮೂಹವನ್ನು ಬೆಳೆಸಿದರು. ಅನೇಕ ರೀತಿಯ ಪವಾಡಗಳಿಂದ ಎಲ್ಲಿಯೂ ನಿಲ್ಲದೆ, ಕೊನೆಯನೆಂದು ಮುಟ್ಟದೇ ಚೇಳಗುರಿಕೆ ಗ್ರಾಮಕ್ಕೆ ಬಂದರು. ಈ ಗ್ರಾಮದಲ್ಲಿಯೂ ಭಕ್ತರ ಕಷ್ಟಗಳನ್ನು ತಮ್ಮ ಮಹಿಮೆಗಳ, ಪವಾಡಗಳ ಮೂಲಕ ಬಗೆಹರಿಸಿದ ಘಟನೆಗಳನ್ನು ಸಹ ಪ್ರಸ್ತಾಪಿಸಿದ್ದಾರೆ. ಭವಿಷ್ಯವಾಣಿಯ ಮೂನ್ಸೂಚನೆಗಳನ್ನು ತಿಳಿಸುತ್ತಿದ್ದರಂತೆ. ಇಲ್ಲಿನ ಒಂದು ಪ್ರಸಂಗವನ್ನು ನೋಡಿದರೆ ಇದು ಸ್ಪಷ್ಟವಾಗುವುದು.

ಉರವಕೊಂಡ ಗವಿ ಮಠದ ಕರಿಬಸವ ಸ್ವಾಮಿಗಳು ದೇಹಾಲಸ್ಯದಿಂದಿರುವಾಗ ಅವರ ಮಠದವರೊಬ್ಬರು ಬಂದು, ತಾತನ ಮುಂದೆ ಕಾಯಿ ಕರ್ಪೂರವಿಟ್ಟು ಕೈಕಟ್ಟಿಕೊಂಡು ಕೇಳಿದಾಗ ತಾತನು ಕಾಯಿಯನ್ನೆತ್ತಿ ಚೂರು ಚೂರಾಗುವಂತೆ ಗೋಡೆಗೆಸೆದು 'ಜಡ್ಜ್‌ಮೆಂಟ್ ತಯಾರಾಗಿದೆ ಹೋಗಯ್ಯ' ಎಂದರಂತೆ. ಅದೇ ಹೊತ್ತಿಗೆ ಉರವಕೊಂಡೆಯ ಶ್ರೀಗಳು ಲಿಂಗೈಕ್ಯರಾದರೆಂಬ ಮಾಹಿತಿಯನ್ನು ತಿಳಿಸುತ್ತದೆ. ತಾತನು ತಿಕ್ಕಯ್ಯನಿಗೆ ಮಠಬಿಟ್ಟು ಹೋಗಯ್ಯ ಎಂದರಂತೆ ತಕ್ಷಣವೇ ತಿಕ್ಕಯ್ಯನು ಏಕೆ? ಎಲ್ಲಿಗೆ? ಎಂಬ ಯಾವ ಪ್ರಶ್ನೆಗಳು ಕೇಳದೆ ದುಃಖದಿಂದ 'ಹೇಗೆ ಮರೆಯಲೋ ತಾತನ ಹೆಂಗ ಮರೆಯಲೋ ಸದ್ಗುರುವಿನ' ಎಂಬ ಹಾಡನ್ನು ಹೇಳಿಕೊಳ್ಳುತ್ತಾ ಮನಸ್ಸಿಚ್ಚೆಯಡೆಗೆ ನಡೆದರು. ನಂತರ ಜೋಳದರಾಶಿಯಲ್ಲಿ ಕೆಲವು ಕಾಲ ಇದ್ದರೆಂದು ಮತ್ತು ತಿಕ್ಕಯ್ಯನವರನ್ನು ಕೊಲೆಮಾಡುವ ಪ್ರಯತ್ನವಿತ್ತೆಂದು ಎರ್ರಿತಾತನ ಕುರಿತು ಬಂದಿರುವ ಕೃತಿಗಳಲ್ಲಿ ಇಲ್ಲದ ಮಾಹಿತಿಯನ್ನು ವಿವೇಚನಾ ಪೂರ್ವಕವಾಗಿ ಈ ಕೃತಿಯಲ್ಲಿ ತಿಳಿಯಪಡಿಸಲಾಗಿದೆ.

ಭಕ್ತಿ ಸೇವೆಯೆಂಬುದು ನಿಚ್ಚಳವಾದ ಪವಿತ್ರತೆಯ ಸಂಕೇತ. ಈ ರೀತಿಯಾಗಿ ಎರ್ರಿತಾತನ ಕುರಿತು ಭಕ್ತರಲ್ಲಿ ಅನೇಕರು ನಿಷ್ಠವಂತರಾಗಿದ್ದವರು. ಆತನ ಲೀಲೆಗಳಿಂದ ಪಾವನರಾಗಿದ್ದರಂತೆ. ನೆಲದ ಮರೆಯ ನಿಧಾನದಂತೆ, ಎಲೆಯ ಮರೆಯ ಫಲದಂತೆ ಬೆಂಗಳೂರಿನ ಶ್ರೀ ಎ.ಜಿ. ಶ್ಯಾಮಣ್ಣನವರು ಈ ಕ್ಷೇತ್ರದ

ಸರ್ವತೋಮುಖ ಬೆಳವಣಿಗೆಗಾಗಿ ತಮ್ಮನ್ನು ತಾವು ಮರೆತು, ನಿರಾಡಂಬರವಾಗಿ, ನಿರಹಂಕಾರವಾಗಿ ಸತತ ದುಡಿಯುತ್ತಿದ್ದರು. ಅವರ ಸರ್ವಸ್ವವು ಶ್ರೀ ಎರ್ರಿಸ್ವಾಮಿಗಳೇ ಆಗಿದ್ದರು. ಯಾರೇನೆಂದರೂ ಕೇಳದೆ ತಮ್ಮ ನಂಬಿಗೆಯ ತಾತನೆಂದು ಮಠದಲ್ಲಿ ಯಾರ ಪ್ರಯತ್ನಕ್ಕೂ ನಿಲುಕದ ನೀರುಶ್ರೀ ಮಹಾಬಲೇಶ್ವರಪ್ಪನವರಿಗೆ ನಿಲುಕಿ, ಎಲ್ಲರಿಗೂ ದೊರೆಯುವಂತಾದುದು ಎರ್ರಿಸ್ವಾಮಿಗಳ ಅನುಗ್ರಹ ಮತ್ತು ಮಹಾಬಲೇಶ್ವರಪ್ಪನವರ ನಂಬಿಗೆಯ ಭಕ್ತಿಯೂ ಆಗಿದೆ. ತಾತನ ಮಠದ ಪುರೋಭಿವೃದ್ಧಿಗಾಗಿ ಹಗಲಿರುಳು ಶ್ರಮಿಸಿದ ಬೆಂಗಳೂರು ಶ್ಯಾಮಣ್ಣನವರು ಮಠದಲ್ಲಿ ಸಮಾಧಿಯಾದರು.

ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು
ನಡೆಯಿಲ್ಲದ ನುಡಿ ಅರಿವಿಂಗೆ ಹಾನಿ
ಕೊಡದೆ ತ್ಯಾಗಿ ಎನಿಸಿಕೊಂಬುದು ಮುಡಿಯಿಲ್ಲದ ಶೃಂಗಾರದಂತೆ
ದೃಢವಿಲ್ಲದ ಭಕ್ತಿ, ಅಡಿ ಒಡೆದ ಕುಂಭದಲ್ಲಿ

ಸುಜಲವ ತುಂಬಿದಂತೆ, ಮಾರಯ್ಯ ಪ್ರಿಯ ಅಮರೇಶ್ವರ ಲಿಂಗವ ಮುಟ್ಟುದಾ ಭಕ್ತಿ. (ಆಯ್ದಕ್ಕಿ ಲಕ್ಕಮ್ಮನವರ ವಚನದಲ್ಲಿ) ಈ ರೀತಿಯಾಗಿ ದೃಢಭಕ್ತಿಯಲ್ಲಿದ್ದವನಿಗೆ ಎಲ್ಲಾವು ಸಾಧ್ಯ ಮತ್ತು ಅಸಾಧ್ಯವಾದವುಗಳು ಬೇರೆ ಮಾರ್ಗದಲ್ಲಿ ಹೋಗುತ್ತವೆ. ಶ್ಯಾಮಣ್ಣನವರ ವ್ಯಕ್ತಿತ್ವ ಮತ್ತು ಅವರ ಭಕ್ತಿಗೀತೆಯ ಕುರಿತಾದ ಕೆಲವು ವಿಚಾರಗಳನ್ನು ಈ ಕೃತಿಯು ಒಳಗೊಂಡಿದೆ.

ಎರ್ರಿತಾತನು ಜೀವಸಮಾಧಿಯಾದ ನಂತರ ಅನೇಕ ದರ್ಶನಾರ್ಥಿಗಳಿಗೆ ಹಾಗೂ ಎ.ಜಿ. ಶ್ಯಾಮಣ್ಣನವರಿಗೂ ದರ್ಶನವಿತ್ತನೆಂದು ಈ ಕೃತಿಯಲ್ಲಿ ಉಲ್ಲೇಖಿಸಲಾಗಿದೆ. ದಿನಕ್ಕೊಂದು ನೂತನವಾಗಿ, ಸುಂದರವಾಗಿ ಬೆಳೆಯುತ್ತಿರುವ ಮಠವು ಇಂದು ಎಲ್ಲರನ್ನು ಪರಿಣಾಮಕಾರಿಯಾಗಿ ಆಕರ್ಷಿಸುತ್ತದೆ. ಮಹಾಪಂಡಿತರಾದ ಲಿಂಗೈಕ್ಯ ಶ್ರೀ ಗೌರಿಶಂಕರ ಸ್ವಾಮಿಗಳು ದರ್ಶನಕ್ಕೆ ಇಲ್ಲಿಗೆ ಬಂದಾಗ ತಾತನವರ ಸಮಾಧಿಯಲ್ಲಿ ಧ್ಯಾನಸ್ಥರಾಗಿ ಕೂತಾಗ ಎರ್ರಿಸ್ವಾಮಿಗಳು ಪ್ರತ್ಯಕ್ಷ ದರ್ಶನವಿತ್ತಂತೆ. ಶ್ರೀ ಶ್ಯಾಮಣ್ಣನವರ ಕನಸ್ಸಿನಲ್ಲಿಯೂ ಕೂಡ ತಾತನವರು ಕಂಡು "ನಾನು ಸಮಾಧಿಯಾಗಿಲ್ಲಯ್ಯಾ" ಎಂದು ಹೇಳಿದರಂತೆ. ಚೇಳಗುರಿಕೆಯ ಶ್ರೀಶಿಖರದಪ್ಪನವರು ಹೇಳುತ್ತಿದ್ದ ಒಂದು ಮಾತು ಉಲ್ಲೇಖಿಸಲಾಗಿದೆ. ಅದೇನಂದರೆ ತಾತನವರು ಸಮಾಧಿಯಾದಾಗ ಅವರನ್ನು ಒಳಬಾಗಿಲಿಗೆ ಎತ್ತಿಕೊಂಡು ಹೋದಾಗ ಕೈಕಾಲುಗಳು ಸೆಟೆದುಕೊಂಡಿರದೆ ಪ್ರಾಣವಿರುವ ಕೈಕಾಲುಗಳಂತೆ ಅಲುಗಾಡುತ್ತಿದ್ದವೆಂದು ಕೂಡಿಸಿದಾಗ ಹಣೆಯಲ್ಲಿ ಬೆವರು ಕಾಣಿಸಿಕೊಂಡಿತ್ತಂತೆ. ಇದರಿಂದ ಆ ಹೊತ್ತಿನಲ್ಲಿ ಸಮಾಧಿಮಾಡುತ್ತಿರುವವರಿಗೆ ಅನುಮಾನವು ಬಂತೆಂದು ಆದರೂ ಕೊನೆಗೆ ಸಮಾಧಿ ಆಯಿತು. ತಾತನ ಕುರಿತು ಬರೆಯಲ್ಪಟ್ಟ ಇತರ ಕೃತಿಗಳಿಗಿಂತ ಇದು ಭಿನ್ನವಾದ ರೀತಿಯಲ್ಲಿ ರಚಿಸಲ್ಪಟ್ಟಿದೆ.

ಉರವಕೊಂಡೆಯಿಂದ ತಮ್ಮ ಕುಟುಂಬದೊಂದಿಗೆ ತಹಸೀಲ್ದಾರ್‌ರೊಬ್ಬರು ತಾತನ ದರ್ಶನಕ್ಕಾಗಿ ಮಠಕ್ಕೆ ಜೀಪಿನಲ್ಲಿ ಬಂದರು. ತಾತನ ದರ್ಶನಮಾಡಿಕೊಂಡು ರಾತ್ರಿ ಪ್ರವಾಸಿಮಂದಿರದಲ್ಲಿದ್ದು ಮರುದಿನ

ದಂಡಪಾಣಿಯ ದರ್ಶನಕ್ಕಾಗಿ ಕುಟುಂಬದೊಂದಿಗೆ ಹೊರಟು ಬೆಟ್ಟ ಹತ್ತುವಾಗ ತಿರುವಿನಲ್ಲಿದ್ದ ನಲವತ್ತು ಅಡಿಗಳ ಆಳದ ನೀರಿಲ್ಲದ ಸೇತುವೆ ಬಾವಿಯಲ್ಲಿ ತುಂಬಿದ ಜೀಪು ಜಾರಿಬಿತ್ತು. ಯಾರ ಪ್ರಾಣವೂ ಉಳಿಯುವ ಸಂಭವವಿಲ್ಲದ ಅಪಘಾತದಲ್ಲಿ ಯಾರಿಗೂ ಕಿಂಚಿತ್ ಅಪಾಯವಾಗದೆ ಜೀಪಿನಲ್ಲಿದ್ದವರು ಜಾರದೆ ಸುರಕ್ಷಿತವಾಗಿದ್ದರು. ಜೀಪಿನ ಚಾಲಕ ಪೀರಾಸಾಹೇಬ್‌ನು ಜೀಪು ಕುಣಿಯಲ್ಲಿ ಉರುಳಿದಾಗ ಯಾರೋ ಒಬ್ಬರು ಬಿಳಿ ಗಡ್ಡದಯ್ಯ ಜೀಪನ್ನು ತಡೆದನೆಂದು, ಅದು ಬೀಳದೆ ನಿಂತಾಗ ಕಾಣದಾದನೆಂದು ಹೇಳುವ ಮಾತಿನಿಂದ ಎರ್ರಿತಾತನೇ ಅಲ್ಲಿ ಪ್ರತ್ಯೇಕ್ಷವಾಗಿ ಅವರನ್ನು ರಕ್ಷಿಸಿದನೆಂಬುದು ಯಾರು ಅಲ್ಲಗಳೆಯುವಂತಿಲ್ಲ ಎಂದು ಕೃತಿಯ ಕರ್ತೃ ಜೋಳದರಾಶಿ ದೊಡ್ಡನಗೌಡರು ಹೇಳುವುದು ಆಶ್ಚರ್ಯ ಹಾಗೂ ವಿಸ್ಮಯವಾಗಿ ಇಂದು ತೋರುತ್ತಿದೆ.

ಮುಂದುವರೆದು ಕೃತಿಯ ಎರಡನೇ ಭಾಗದಲ್ಲಿ ಎರ್ರಿತಾತನ ಶಿಷ್ಯ ಹಾಗೂ ಆಶುಕವಿಯಾದ ತಿಕ್ಕಯ್ಯ ವಿರಚಿತ ಭಕ್ತಿಯ ಪ್ರಾರ್ಥನಾ ಹಾಡುಗಳು ಇವೆ. ಅವುಗಳು ಮುಂದಿನ ಭಾಗಗಳಲ್ಲಿ ನಿರ್ವಚಿಸುವುದು ಹೆಚ್ಚು ಸೂಕ್ತವಾಗಿದೆ. ಈ ಕೃತಿಯನ್ನು ತೆಲುಗು ಭಾಷೆಯಲ್ಲಿ ಸಹ ರಚಿಸಲಾಗಿದ್ದು ದೊಡ್ಡನಗೌಡರು ಬಹುಭಾಷೆಗಳ, ಬಹು ಸಂಸ್ಕೃತಿಯನ್ನು ಒಡಮೂಡಿಸಿಕೊಂಡಿದ್ದರು ಎಂಬುದು ಇದರಿಂದ ತಿಳಿಯಬಹುದಾಗಿದೆ.

ಒಟ್ಟಾರೆಯಾಗಿ ಈ ಕೃತಿ ಎರ್ರಿತಾತನ ಕುರಿತ ಮಹತ್ವದ ಸಂಗತಿಗಳನ್ನು ಒಳಗೊಂಡಿದ್ದು. ತಾತನ ಕುರಿತು ಬರೆಯಲ್ಪಟ್ಟ ಇತರೆ ಗ್ರಂಥಗಳಿಗಿಂತ ಉದಾತ್ತವಾದ ಚಿಂತನೆಯನ್ನು ಮೈಗೂಡಿಸಿಕೊಂಡಂತಿದೆ.

**ಚೇಳಗುರಿಕೆ ಎರ್ರಿಸ್ವಾಮಿಗಳ ಲೀಲಾವಿಲಾಸ**

ಚನ್ನಬಸವೇಶ್ವರ ಶಿ.ವ, ಅವರಿಂದ ರಚಿಲ್ಪಟ್ಟ ಒಂದು ಪಾಂಡಿತ್ಯ ಪೂರ್ಣವಾದ ಗ್ರಂಥ ಇದಾಗಿದೆ. ಚೇಳಗುರಿಕೆ ಎರ್ರಿತಾತನನ್ನು ಎರ್ರಿಸ್ವಾಮಿಗಳು ಎಂದು ಹೆಸರಿಡಲಾಗಿದೆ. ಮೈಸೂರು ಒಡೆಯರು ಆದ ಜಯಚಾಮರಾಜ ಒಡೆಯರ್ ಈ ಕೃತಿಗೆ ಮುನ್ನುಡಿಯನ್ನು ಬರೆದಿದ್ದು, ಇದು ಎರ್ರಿತಾತನ ಕುರಿತ ಸಮಗ್ರವಾಗಿ ಅಲ್ಲದಿದ್ದರೂ ಅರ್ಥಪೂರ್ಣವಾದ ವಿವರಗಳನ್ನು ಒದಗಿಸುವ ಅಮೂಲ್ಯ ಕೃತಿ ಇದಾಗಿದೆ.

ಗ್ರಂಥಕರ್ತರೇ ತಿಳಿಸುವಂತೆ ಮಿತ್ರ ಶ್ರೀವೈ ಯಂ ಚಂದ್ರಯ್ಯನವರು ಎಲ್ಲೆಲ್ಲಿಯೋ ಸಂಚರಿಸಿ ಕಷ್ಟಪಟ್ಟು ಸಂಗ್ರಹಿಸಿದ್ದ ಕರಡುಗಳನ್ನು ಅವುಗಳ ಮೇಲೆ ಶ್ರೀ ದೊಡ್ಡನಗೌಡರು ಗುರ್ತುಹಾಕಿದ್ದ ಟಿಪ್ಪಣಿಗಳನ್ನು ಆಧರಿಸಿ ಈ ಕೃತಿಯನ್ನು ರಚಿಸಲಾಗಿದೆ.

ಪೂರ್ವ ಇತಿಹಾಸದ ಪರಿಕಲ್ಪನೆಯನ್ನು ಬರೆಯಲು ಪ್ರಾರಂಭದಲ್ಲಿಯೇ ಈ ರೀತಿ ಹೇಳಲಾಗಿದೆ. ಯಾರು ನನ್ನ ಜೀವನವನ್ನು ಬರೆಯಲಾರರು, ಏಕೆಂದರೆ ಮಾನವ ಮಾತ್ರನ ದೃಷ್ಟಿಗೆ ಗೋಚರವಾಗುವಷ್ಟು ತೇಲಿಕೆಯಾಗಿ ತೇಲಿಲ್ಲ ಅದು. ನಿನಗಾಗಲಿ, ಬೇರೆ ಯಾರಿಗಾಗಲೀ ನನ್ನ ಜೀವನವನ್ನು ಕುರಿತು ಏನೂ ಗೊತ್ತಿಲ್ಲ. ಮಾನವನ ತೇಲ್ನೋಟಕ್ಕೆ ಕಾಣುವಷ್ಟು ಸುಲಭವಲ್ಲ. ನನ್ನ ಭೌತಿಕ ದೇಹದ ಬಾಳಿನ ಬಗ್ಗೆ ವಿವರಗಳನ್ನರಿಯಲು ಪ್ರಯತ್ನಿಸಬೇಡ. ಅಂಥ ಪ್ರಶ್ನೆಗಳಿಂದ ಪ್ರಯೋಜನವೂ ಇಲ್ಲವಾದ್ದರಿಂದ ಅವುಗಳ

ಬಗ್ಗೆ ಆಸಕ್ತಿಯನ್ನು ತಾಳಬಾರದು. ಈ ಜೀವನದ ಉದ್ದಕ್ಕೂ ಅರಿತಾಗಲೀ ಮರೆತಾಗಲೀ ಪರಮಾತ್ಮನ ಇಚ್ಛೆಯ ಪ್ರಕಾರ ಇದ್ದೀನಿ, ಅವನು ಮಾಡಿಸಿದ್ದನು ಮಾಡೀನಿ ಅದಷ್ಟೇ ಪ್ರಧಾನವಾದದ್ದು. ಅಂದರೆ ಎರ್ರಿತಾತನ ಪೂರ್ವ ಇತಿಹಾಸಕ್ಕಿಂತಲೂ, ಆತನ ಮಹಿಮಾಕರ ಘಟನೆಗಳನ್ನು ಪ್ರಧಾನವಾಗಿ ಇಲ್ಲಿ ಬರೆಯಲಾಗಿದ್ದು, ಯೋಗಿಗಳ ಜೀವನ ಚರಿತ್ರೆಯು ಭೌತಿಕ ಘಟನೆಗಳ ಬೌದ್ಧಿಕ ಸಂಗ್ರಹವಲ್ಲವೆಂಬುದು ಅವರ ನಿಲುವಾಗಿತ್ತು.

ಭಾರತದ ಅನುಭಾವ ಪರಂಪರೆಯನ್ನು ಅವಲೋಕಿಸಿದಾಗ ನಮಗೆ ಬಹುತೇಕವಾಗಿ ಗೋಚರವಾಗುವುದು ಅನುಭಾವಿಗಳ ಪೂರ್ವೋತ್ತರವಾದ ಅವರ ಮಹಿಮೆಗಳ ಆಧರಿಸಿದ ಇತಿಹಾಸವೇ ಹೊರತು, ಅವರ ಬಾಲ್ಯದ, ಯೌವನದ ಕನವರಿಕೆಗಳು ಕೇವಲ ಕಾಲ್ಪನಿಕವಾಗಿ ಪುರಾಣ ಕತೆಗಳ ಮೂಲಕ ಒಂದು ಮಾಯಜಾಲವನ್ನು ನಿರ್ಮಿಸಿಬಿಡುತ್ತದೆ. ಅನುಭಾವವೆಂಬುದು ಅಂತರಂಗದ ರತ್ನ. ಅನುಭವವೆಂಬುದು ಆತ್ಮದ ವಿದ್ಯೆ. ಅನುಭಾವವೆಂಬುದು ನಿಜವಾಸದಲ್ಲಿರಿಸುವುದು ಎಂದು ಮುಂತಾಗಿ ಮಹಾಮಹಿಮರ ನುಡಿಗಳು ಅನುಭಾವದ ಪರಿಕಲ್ಪನೆಯನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗಿದೆ. ಆಂಗ್ಲಭಾಷೆಯಲ್ಲಿ 'ಮಿಸ್ಟಿಸಿಸಮ್' (Mysticism) ಎಂಬ ಮಾತೊಂದಿದೆ. ಕೆಲವು ಸಂದರ್ಭಗಳು, ಸನ್ನಿವೇಶಗಳಲ್ಲಿ ಗೂಢವಾದದ್ದು, ರಹಸ್ಯವಾದುದ್ದನ್ನು ತಿಳಿಯಲು ಮತ್ತು ಯೋಗ್ಯಕಾರಣಗಳಿಂದ ಸಮರ್ಥಿಸಲು ಅಸಾಧ್ಯವಾದುದು, ಅನಿರ್ದಿಷ್ಟವಾದುದು. ಕೇವಲ ಭಾವನಾತ್ಮಕವಾದುದು. ಅಂದರೆ ಮಹಾತ್ಮರ ಅನುಭಾವದ ಬದುಕು ಮುಖ್ಯವಾಗಿದೆ. ಉಳಿದುದೆಲ್ಲ ಗೌಣಸ್ಥಿತಿಗೆ ತಲುಪಿರುತ್ತದೆ ಎಂಬುದು ಸ್ಪಷ್ಟವಾಗಿ ಕಾಣುತ್ತದೆ.

ಈ ಕೃತಿಯಲ್ಲಿ ಯೋಗಿಯ, ಮಹಾತ್ಮರ ಮತ್ತು ಅಸಾಧ್ಯಪುರುಷರ ಅಲೌಕಿಕ ವರ್ತನೆಯನ್ನು ಕುರಿತು ಈ ರೀತಿಯಾಗಿ ಉಲ್ಲೇಖಿಸಲಾಗಿದೆ.

"ದೇಹ ಜಾತ್ಯಾದಿ ಸಂಬಂಧಾನ್ ವರ್ಣಾಶ್ರಮ ಸಮನ್ವಿತಾನ್ |
ವೇದ ಶಾಸ್ತ್ರಾಣಿ ಚಾನ್ಯಾನಿ ಪದಂಪಾರಿಸು ಮಿವತ್ಯಜೇತ್ ||
ಜ್ಞಾನೇನಜ್ಞೇಯ ಮಾಲೋಕ್ಯ ಪಾಶ್ಚಾತ್‌ಜ್ಞಾನಂಪರಿತ್ಯಾ ಜೇತ್ |
ಸಂಧಿಗ್ಧ ಸರ್ವಭೂತಾನಾಂ ವರ್ಣಾಶ್ರಮ ವಿವಜಿತಃ
ಅಂಧವಜ್ಜಡವ ಚ್ಛಾದಿ ಮೂಕವಚ್ಚು ಮಹೇಂ ಚರೋಪ್ |
ಬಾಲೋನ್ಮತ್ ಪಿಶಾಚವಜ್ಜಡವುತ್ತ್ಯಾ ಲೋಕಮಾಚರೇತ್"|| (ಪ್ರ ೦೨ರಲ್ಲಿ)

ಈ ಕೃತಿಯು ಪೂರ್ವ ಇತಿಹಾಸದ ಬಗ್ಗೆ ಅಷ್ಟೊಂದು ಮಹತ್ವ ನೀಡಿಲ್ಲದಿದ್ದರೂ ಸಂಕ್ಷಿಪ್ತವಾದ ನಿರೂಪಣಾ ಶೈಲಿಯಿಂದ ಅಲ್ಪಸ್ವಲ್ಪ ಮಾಹಿತಿಯನ್ನು ನೀಡುತ್ತದೆ. ಆದರೆ ಎರ್ರಿತಾತನು ಚೇಳಗುರಿಕೆಗೆ ಬರುವ ಮುಂಚೆ ತೋರಿದ ಕೆಲವು ಪವಾಡಗಳನ್ನು ಕುರಿತು ಬರೆಯಲಾಗಿದೆ. ಗ್ರಾಮಕ್ಕೆ ಬಂದ ವಿವರವನ್ನು ನೀಡುತ್ತದೆ. ಊರಿನ ಹಿರಿಯರು ಹೋಗಿ ಮಾತನಾಡಿಸಿದಾಗ ಅನ್ಯ ಮನಸ್ಕನಾಗಿಯೋ, ಅಂತರ್ಮುಖಿಯಾಗಿಯೋ ಹೋದವರು ಮಾತಾಡಿಸಿದರೂ ಮಾತಾಡಲಿಲ್ಲವಂತೆ.

ಏನಪ್ಪಾ ನಿಮ್ಮದು ಯಾವ ಊರು ?

ನಿನ್ನ ಹೆಸರೇನು ?

ಎಲ್ಲಿಂದ ಬಂದಿ ?

ಎಲ್ಲಿಗೆ ಹೋಗಬೇಕು ?

ಇಲ್ಲೇಕ ಕುಳಿತಿರುವಿ ?

ಈ ಎಲ್ಲಾ ಪ್ರಶ್ನೆಗಳಿಗೆಲ್ಲ ತಾತನವರ ಪ್ರತಿಕ್ರಿಯೆ ಶೂನ್ಯವಾದ ನಿರುತ್ತರ, ಪ್ರಶಾಂತ ಮೌನ. ಊರೊಳಗೆ ಹೋಗೋಣ ಬಾಪ್ಪಾ ಎಂಬ ಹಾರ್ದಿಕ ಸ್ವಾಗತಕ್ಕೂ ಹಿಗ್ಗಿ ಮೇಲೆದ್ದಿಲ್ಲ, ಮೌನ ಮುರಿದು ಮಾತಾಡಿಲ್ಲ ಎಂಬುದನ್ನೆ ಸರಳವಾಕ್ಯಗಳಲ್ಲಿ ಸಾಮಾನ್ಯ ಜನರ ಗ್ರಹಿಕೆಗೆ ಅನುಕೂಲವಾಗುವಂತೆ ನಿರೂಪಿಸಲಾಗಿದೆ.

ಧಾರ್ಮಿಕ ಔನತ್ಯ ಪಡೆದ ಮಹಾಮಹಿಮರು ತಮಗೆ ಅರಿವಿದ್ದೋ, ಅರಿವಿಲ್ಲದೆಯೋ ಅವರ ವರ್ತನೆಗಳಲ್ಲಿ ಸಮಾಜ ಮುಖೀಯಾದ ಚಿಂತನೆಗಳಿರುತ್ತವೆ. ಅಂದರೆ ಅವರು ನೆಲೆಸಿದ ಕ್ಷೇತ್ರವಾಗಲಿ, ಗ್ರಾಮಕ್ಕಾಗಲೀ ಭವಿಷ್ಯವಾಣಿಯಂತೆ ಮೂನ್ಸೂಚನೆ ಫಲಕಗಳಾಗಿರುತ್ತವೆ. ತಾತನು ಚೇಳಗುರಿಕೆಗೆ ಬಂದಾದ ಮೇಲೆ ಹಿಂದಿನಂತೆಯೂ ಹಲವಾರು ಪವಾಡಗಳನ್ನು ಮಾಡಿದ್ದಾರೆ. ಕಾಲರಾ ರೋಗದ ಮೂನ್ಸೂಚನೆಗೆ ಸರಿಯಾಗಿ ಕಾಣುವಂತೆ ಕೈಯಲ್ಲಿ ಕಲ್ಲುಹಿಡಿದು ಕೆಲವರ ಮನೆಗಳಿಗೆ ಎಸೆಯುತ್ತಿದ್ದನಂತೆ. ಕೆಲವರ ಮನೆಗಳಿಗೆ ಎಸೆಯಲು ಕೈಗೇರಿಸಿಕೊಂಡ ಕಲ್ಲು ಬೇಡಬೇಡ ಎಂದು ಒಟಗುಟ್ಟುತ್ತಾ ಕೆಳಗೆಸೆದು ಬಿಡುತ್ತಿದ್ದನಂತೆ. ಯಾರ ಮನೆಗಳಿಗೆ ಕಲ್ಲೆಸೆದಿದ್ದಾನೋ ಅವರ ಮನೆಗಳಲ್ಲಿ ಒಬ್ಬರೋ ಇಬ್ಬರೋ ಕಾಲರಾ ಬೇನೆಗೆ ತುತ್ತಾದರೂ, ಬೇಡ ಬೇಡ ಎಂದು ಬಿಟ್ಟ ಜನರ ಮನೆಗಳಲ್ಲಿ ಯಾರೂ ಸಾಯಲಿಲ್ಲ. ರೋಗಪೀಡಿತನಾದರೂ ಆದರೂ ಗುಣಹೊಂದಿ ಬುದುಕಿಕೊಂಡರು. ಇಂಥಹ ವಿಚಿತ್ರ ರೀತಿಯ ವರ್ತನೆ ಆತನದಾಗಿತ್ತು ಎಂದು ತಿಳಿಸುತ್ತದೆ. ಸತ್ತ ಎಮ್ಮೆಕರುವನ್ನು ಬದುಕಿಸಿದ್ದು, ಯಾರೋ ಹುಡುಗನಿಗೆ ಚೆಂಬಿನಲ್ಲಿ ಮಜ್ಜಿಗೆ ಮಾಡಿದ್ದು ಮುಂತಾದ ಅವರ ಪವಾಡಗಳನ್ನು ಅರ್ಥಪೂರ್ಣವಾಗಿ ತಿಳಿಸಲಾಗಿದೆ.

ತಿಕ್ಕಯ್ಯನ ಆಗಮನವನ್ನು ತಿಳಿಸುತ್ತಾ, ಭಕ್ತರಲ್ಲದ ಭವಿಗಳಿಗೆ ಗುರುಗಳೂ ಹುಚ್ಚರಾಗಿ ಕಾಣುವಂತೆ ಅನುಭವಿಗಳಾದ ಭಕ್ತರಿಗೆ ಹುಚ್ಚರೂ ಗುರುಗಳಾಗಿ ಕಾಣುತ್ತಾರೆ. ಎರ್ರಿತಾತನ ದರ್ಶನಕ್ಕೆ ಬಂದ ತಿಕ್ಕಯ್ಯನಿಗೆ ಗುರುವಿನ ಚರಣದಲ್ಲಿ ಗುರಿಯೂ ಸಿಕ್ಕಿತು. ಅಂದಿನಿಂದ ತಿಕ್ಕಯ್ಯ ಎರ್ರಿತಾತನ ಸೇವೆಗೆಂದು ನಿಂತ ಹಾಗೂ ಆತನ ಮಠವನ್ನು ಕಟ್ಟಲು ಶ್ರಮಿಸಿದ ಹೀಗೆ ತಾತನ ಮಾತಿನಂತೆ ಮಠಬಿಟ್ಟು ಹೋಗಯ್ಯ ಎಂದಾಗ ಪರಿತಪಿಸಿದ ಬಗೆಯನ್ನು ಇಲ್ಲಿ ಮನೋಜ್ಞವಾಗಿ ಚಿತ್ರಿಸಲಾಗಿದೆ.

ಮಠದ ನಿರ್ಮಾಣ ಕಾರ್ಯವನ್ನು ಕುರಿತು ಬರೆಯುವಾಗ ಗ್ರಂಥಕರ್ತರು ಅನೇಕ ರೀತಿಯ ಟೀಕೆ ಟಿಪ್ಪಣಿಗಳನ್ನು ಮಾಡಿದ್ದಾರೆ. ಮಠದ ಒಟ್ಟು ಪರಿಕಲ್ಪನೆಯನ್ನು ತಮ್ಮ ವ್ಯಾಪ್ತಿಯೊಳಗೆ ಚರ್ಚಿಸುತ್ತಾ ಮಠದ ಪರಿಸ್ಥಿತಿ ಹೇಗೆ ಬದಲಾಗಿದೆ. ಕೆಲವರು ಮಠಗಳ ಆಸ್ತಿಗಳನ್ನು ನೋಡಿ ಅವುಗಳಿಗಾಗಿ ಆಸೆಯಿಂದ

ಸ್ವಾಮಿಗಳಾಗುತ್ತಾರೆ. ಅಂಥವರ ವೇಷದ ಹಿಂದಿರುವ ಆಸೆಯ ವ್ಯಕ್ತಿತ್ವ ವ್ಯಕ್ತವಾಗುವುದು. ಕೆಲವು ಸ್ವಾಮಿಗಳ ಸುತ್ತ ಮಠ ತನಗೆ ತಾನೇ ಬೆಳೆಯುತ್ತದೆ. ಭಕ್ತರ ಭಕ್ತಿ ಸಂಕೇತವಾಗಿ ಸ್ವಾಮಿಗಳ ಶಕ್ತಿ ಸಂಕೇತವಾಗಿ. ಅಂಥವರಿಗೆ ತಮ್ಮ ಮಠದ ಮೇಲೆ ಅಭಿಮಾನಕ್ಕೂ ಇಲ್ಲ. ಮಠದ ಮೇಲೆ ಆಸೆಯೂ ಇಲ್ಲ. ಮಠಕ್ಕಾಗಿ ಘಟ ಎನ್ನುವವನು ಘಟಸರ್ಪಕಾಮಿ. ಘಟಕ್ಕಾಗಿ ಮಠ ಇದ್ದರೆ ಇರಲಿ ಎನ್ನುವವನು ನಿಷ್ಕಮಿ-ಸ್ವಾಮಿ ಎಂಬಂಥಹ ವಿಡಂಬನಾತ್ಮಕವಾಗಿ ಮಠಸ್ವಾಮಿಗಳ ಕುರಿತಾದ ವಿವೇಚನೆಗಳಿಂದ ಕೂಡಿದ ಚರ್ಚೆಯನ್ನು ಇಲ್ಲಿ ಗಮನಿಸಬಹುದು.

ಸ್ವಚ್ಛಂದಾಚಾರ ಸಂತುಷ್ಟೋ ಜ್ಯೋತಿರ್ಲಿಂಗ ಪರಾಯಣಃ ||
ಆತ್ಮಸ್ಥ ಸಕಲಾಕಾರ: ಸಾಭಿದೋಮುನಿಸತ್ತಮ
ನಿರ್ಮಮೋ ನಿರಹಂಕಾರೋ ನಿರಸ್ತಕ್ಲೇಶ ಪಂಚಶಃ |
ಬಿಕ್ಷಾಶೀ ಸಮ ಬುದ್ಧಿಶ್ಚ ಮುಕ್ತ ಪ್ರಾಯೋ ಮುನಿರ್ಭವೇತ್ ||
ಕಾಮ ಕ್ರೋಧಾದಿ ನಿರ್ಮುಕ್ತಃ ಶಾಂತಿದಾಂತಿ ಸಮನ್ವಿತಃ |
ಸಮ ಬುದ್ಧ್ಯಾ ಚರೇದ್ಯೋಗಿ ಸರ್ವತ್ರ ಶಿವಬುದ್ಧಿಮಾನ್ ||
ಸ್ವೇಚ್ಛಯಾ ಸಂಚರನ್ ಯೋಗೀ ವಿಮುಂಚನ್ ದೇಹಮಾನಿತಾಂ |
ದರ್ಶನ್ಯೆ ಸ್ಪರ್ಶನ್ಯೈಃ ಸರ್ವಾನಜ್ಞಾನತಿ ವಿಮೋಚಯೇತ್ ||

ಹೀಗೆ ಸಿದ್ಧಾಂತ ಶಿಖಾಮಣಿಯ ಪ್ರಮಾಣವಾಕ್ಯಗಳು ಸ್ವ-ಚರ-ಪರ ಸ್ಥಲಗಳ ಜಂಗಮ ಲಕ್ಷಣಗಳನ್ನು ವರ್ಣಿಸುತ್ತವೆ. ಈ ಸರ್ವಲಕ್ಷಣ ಸಂಪನ್ನರಾದ ಶಿವಯೋಗಿಯಾಗಿದ್ದ ಶ್ರೀ ಎರ್ರಿತಾತ (ಅದೇ ಪು. ೩೬-೩೭ರಲ್ಲಿಯ ಕೆಲವು ಚರಣಗಳನ್ನು ಆಯ್ಕೆಮಾಡಲಾಗಿದೆ). ಈ ರೀತಿಯಾಗಿ ಎರ್ರಿತಾತನ ಸ್ವಭಾವ ಲಕ್ಷಣಗಳನ್ನು ಪರಲೌಕಿಕ ನೆಲೆಯಲ್ಲಿ ಚಿತ್ರಿಸುವ ಪ್ರಯತ್ನ ಮಾಡಲಾಗಿದೆ.

ಎರ್ರಿತಾತನು ಗ್ರಾಮದಲ್ಲಿನ ಮಠಕ್ಕೆ ಬರಲು ನಿರಾಕರಿಸಿದ್ದರಿಂದ ತಿಕ್ಕಯ್ಯನಿಗೆ ಹಾಗೂ ಗ್ರಾಮದ ಹಿರಿಯರಿಗೆ ಬಲು ಬೇಸಾರವಾಯಿತು. ಸ್ವಲ್ಪದಿನಗಳು ಕಳೆದ ಮೇಲೆ ತಾತನನ್ನು ಮಠಕ್ಕೆ ಕರೆದು ತರಲಾಯಿತು. ಆಗ ತಿಕ್ಕಯ್ಯನವರಿಗಾದ ಸಂತೋಷವನ್ನು ಹಾಡುಗಳ ಮೂಲಕ ವ್ಯಕ್ತಪಡಿಸಿದ್ದು, ತಾತನು ಮಠಕ್ಕೆ ಬರದಿದ್ದಾಗ ಆದ ಸಂಕಟವನ್ನು ಇವೆರಡು ಘಟನೆಗಳನ್ನು ಈ ಕೃತಿಯಲ್ಲಿ ವಿವರಿಸಲಾಗಿದೆ. ಒಟ್ಟು ಮಠವೆಂಬುದು ಯಾರ ಸ್ವತ್ತಲ್ಲ. ಅದು ದೈವೀಕ ಮನೆ, ಲೌಕಿಕ ದೃಷ್ಟಿಯಿಂದ ನೋಡದೆ ಅಲೌಕಿಕತೆಯ ಮನಸ್ಸಿನಿಂದ ಸೃಷ್ಟಿಸಬೇಕು ಎಂಬುದು ಈ ಗ್ರಂಥದ ತಿರುಳಾಗಿದೆ.

ತಾತನ ವ್ಯಕ್ತಿತ್ವ ಕುರಿತು ಮಂದಿಯಿಟ್ಟ ನಾಮವನ್ನು ಮಂದಿಯಿಂದ ಮರೆಮಾಡಿದ್ದರೂ ತಾತನು ತನ್ನ ರೂಪವನ್ನು ಮರೆಮಾಡುವಂತಿರಲಿಲ್ಲ. ಆತನ ಸಾಧನೆಯೇನೋ ಯಾರಿಗೂ ಏನೂ ಹೇಳದಿದ್ದರೂ, ಆತನ ದೇಹ ಸಿದ್ಧಿಯ ಮುದ್ದೆಯಾಗಿತ್ತು. ರೂಪು ಆತನ ಸಿದ್ಧಿಗೆ ಸಾಕ್ಷಿಯಾಗಿತ್ತು. ಆತನ ಮಹಿಮಾತಿಶಯವನ್ನು ಕುರಿತು ಯಾರೂ ಮಾತಾಡಬೇಕಾದದ್ದೇ ಇಲ್ಲ. ಮಹಿಮೆ ಮೈಮೇಲೆ ಆವರಿಸಿ

ಶಿವಯೋಗದ ಚಿತ್ಪ್ರಭೆ ಆತನ ಅಂಗಾಂಗಗಳಲ್ಲಿ ಒಡಮೂಡಿತ್ತು. ನಖಶಿಖಾಂತವಾಗಿ ಸರ್ವಲಕ್ಷಣ ಸಂಪನ್ನನಾದ ಶಿವಯೋಗಿ ಆತ ಯಾರದರೂ ಉಡಿಸಿದರೆ ಉಡಿಗೆಯುಂಟು, ಇಲ್ಲದ್ದಿದ್ದರೆ ದಿಗಂಬರ ಸಡಲಿದ ಉಡಿಗೆಯನ್ನು ಕಟ್ಟಿಕೊಳ್ಳುವುದೂ ಇಲ್ಲ. ಅವರು ಆತ್ಮವಾದಿಗಳಾಗಿ ಇಹದ ನೆರಳಿಗಿಂತಲೂ ಅನಂತತೆಯ ಬಿಸಿಲೆ ಮುಖ್ಯವಾಗಿತ್ತು. ಆತ್ಮವು ಮೂಲತಃ ಚೈತನ್ಯಾತ್ಮಕವಾದುದು. ಆನಂದ ರೂಪಿ ಯಾದುದು ಆದರೆ ಅದು ದೇಹದ ಬಂಧನದಲ್ಲಿರುವವರೆಗೆ ಅದರ ಚೈತನ್ಯಾತ್ಮಕಶಕ್ತಿ ಬೇರೆಬೇರೆ ಭೂಮಿಕೆಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ಮೈದೋರುತ್ತದೆ. ಒಂದೇ ವಿದ್ಯುಚ್ಛಶಕ್ತಿಯು ಬೇರೆ ಬೇರೆ ಲೋಹಗಳಲ್ಲಿ ಹರಿಯುವಲ್ಲಿ ಹಾಯ್ದುಹೋಗುವಾಗ ಶಾಖ, ಬೆಳಕು ಮೊದಲಾದ ಬೇರೆ ಬೇರೆ ರೂಪಗಳಗಳನ್ನು ಧರಿಸುವಂತೆ ಆತ್ಮಶಕ್ತಿ ದೇಹದ ಒಂದೊಂದು ಭೂಮಿಕೆಯಲ್ಲಿಯೂ ಬೇರೆ ಬೇರೆಯಾಗಿ ಕಾಣಿಸುತ್ತದೆ. ಈ ಸ್ಥೂಲ ದೇಹದ ಇಂದ್ರಿಯಗಳು 'ನಾನು' ಎಂಬ ಭ್ರಮೆಯಿಂದ ಹೊರಬಂದಾಗ ದೇಹದ ನಿರ್ಲಿಪ್ತತೆ ಮಾಯವಾಗುತ್ತದೆ.

"ಎತ್ತರದ ಭವ್ಯಾಕಾರ, ಅಪರಂಜಿಯಂತಹ ಮೈಬಣ್ಣ, ಆ ಬಣ್ಣದಿಂದ ಹೊರಹೊಮ್ಮುವ ದಿವ್ಯವಾದ ಬೆಳಕು, ದೊಡ್ಡ ಜಡೆ, ನಿಡಿದಾದ ಗಡ್ಡ, ವಿಶಾಲವಾದ ಹಣೆ, ಹುಲುಸಾಗಿ ಬೆಳೆದ ಹುಬ್ಬುಗಳು, ನೋಡುವವರ ಅಂತರಂಗವನ್ನು ಸೆರೆಹಿಡಿವ ಕಣ್ಣಿನ ದೃಷ್ಠಿ, ಮಾಟವಾದ ಮೂಗು, ಮೀಸೆಗಡ್ಡಗಳಲ್ಲಿ ಅಡಗಿ ಕೊಂಚವೇ ಹೊರಗೆ ಕಾಣುವ ಕೆಂದುಟಿಗಳು, ನಿರ್ದೋಷವಾದ ಕೊರಳು, ವಿಶಾಲವಾದ ಎದೆ, ಅಜಾನು ಬಾಹುಗಳು, ಹುರಿದಿರುವಿಕೊಂಡಿರು ಉಗುರು, ಎದ್ದರೂ, ನಿಂತರೂ, ನಡೆದರೂ, ಒರಗಿದರೂ, ಮಲಗಿದರೂ, ಆಯಾ ಭಂಗಿಗಳಿಗದೇ, ಸುಂದರವಾಗಿ ನೋಡುವವರ ಮನ ಮೋಹಕವಾಗಿರುವ ಅಸದೃಶ್ಯ ರೂಪಾರಾಶಿಯಾದ ಎರ್ರಿಸ್ವಾಮಿ". (ಅದೇ ಪು. ೪೯ರಲ್ಲಿ) ಈ ರೀತಿಯಾಗಿ ಕವಿಯಾಗಿ, ಪಂಡಿತನಾಗಿ ವರ್ಣಿಸಿದ ಚನ್ನಬಸವೇಶ್ವರ ಪ್ರಗಾಢ ಶಕ್ತಿಯು ಈ ಕೃತಿಯಲ್ಲಿ ಆವರಿಸಿದೆ.

ಮೋಡದಲ್ಲಿ ಹುಟ್ಟಿದ ಮಿಂಚು ಮಿಂಚಿ ಮೋಡದ ಮರೆಯಲ್ಲಿಯೇ ಮರೆಯಾಗುವಂತೆ ಲಿಂಗದಿಂದ ಮೂಡಿಬಂದ ಅಂಗವು ಲಿಂಗದಲ್ಲಿಯೇ ಕೂಡಿ ಲಿಂಗೈಕ್ಯವಾಯಿತು. ಇರುವಾಗಲೇ ಮುಕ್ತ ಜೀವಿಗಳಾಗಿ ಜೀವನ್ಮುಕ್ತಿಯನ್ನು ಅನುಭವಿಸಿ ಸದೇಹ ಮುಕ್ತರಾದವರಿಗೆ ವಿದೇಹ ಮುಕ್ತಿಯು ಸಹಜ. ಸದೇಹ ಮುಕ್ತನಾಗಿ ಜೀವನ್ಮುಕ್ತ ಸ್ಥಿತಿಯಲ್ಲಿರುವ ಶರಣನಿಗೆ ಬಸವಣ್ಣನವರು ಹೇಳುವಂತೆ 'ಮರಣವೇ ಮಹಾನವಮಿ' ಏಕೆಂದರೆ ಮಹಾನವಮಿಯಾದ ಮರುದಿನವೇ ವಿಜಯದಶಮಿ ಶರನ್ನವರಾತ್ರಿಯಲ್ಲಿ ಮಹಾನವಮಿಯೂ ಹಬ್ಬವೇ, ವಿಜಯ ದಶಮಿಯೂ ಹಬ್ಬವೇ ಆದರೆ ಅವನ ಜೀವವು ಶರಿನ್ನವರಾತ್ರಿಯಾಗಿರಬೇಕು. ಕಾರ್ಗತ್ತಲೆಯ ಮಹಾಲಯ ಅಮಾವಾಸ್ಯೆಯಾಗಿರಬಾರದು. ಯಾವನ ಜೀವನವು ಮಹಾಲಯ ಅಮಾವಾಸ್ಯೆಯಂತೆ ಕತ್ತಲರಾತ್ರಿಯಾಗಿರದೆ, ನವವಿಧ ಭಕ್ತಿಯಿಂದ, ನವವಿಧ ಶಕ್ತಿಯಿಂದ, ನವಲಿಂಗ ಸಕೀಲುಗಳನ್ನರಿದವನಿಗೆ ಮರಣವೇ ಮಹಾನವಮಿ.

ತಾತನು ಶಿವೈಕ್ಯ ಸಮಯದಲ್ಲಿ "ದಫೇದಾರರನೂ ಕರೆಯಯ್ಯಾ ನೀರು ಬೇಕು ಎಂದರಂತೆ ದಫೇದಾರನೆಂದರೆ ಚಾಕುಬಂಡ ಕರಿಬಸಯ್ಯನನ್ನು ತಾತ ಕರೆಯುತ್ತಿದ್ದ ಹೆಸರದು. ದಫೇದಾರ ನೀರು ತಂದು ಕುಡಿಸಿದ ಮೇಲೆ

ತಾತನು ಶಿವಶಿವಾಯೆಂದು ಶಿವನನ್ನು ಹೊಂದಿ ಶಾಲಿವಾಹನಶಕೆ ೧೮೪೩ನೇ ದುಂದುನಾಮ ಸಂವತ್ಸರ ಜೇಷ್ಠ ಶುದ್ಧ ಚೌತಿಯ ದಿನ ಉದಯ ಹತ್ತುಗಂಟೆಯ ಸಮಯದಲ್ಲಿ ಐಕ್ಯರಾದರು ಎಂದು ಮನಮರುಗಿದ ಸ್ಥಿತಿಯಲ್ಲಿ ಹೇಳುವಂತೆ ತಾತನ ಸಮಾಧಿ ಸ್ಥಿತಿಯ, ಯೋಗಸ್ಥಿತಿಯ, ಧ್ಯಾನಸ್ಥಿತಿಯ ಸಿದ್ಧಿಯನ್ನು ಈ ಕೃತಿಯಲ್ಲಿ ಕರುಣಾಜನಕವಾಗಿ ಬಿತ್ತರಿಸಲಾಗಿದೆ.

ಅಂತಹ ಸಮಾಧಿಯಲ್ಲಿಯೇ ಎರ್ರಿತಾತನವರ ಅತ್ಯಂತ ಪವಿತ್ರವಾದ ಸಿದ್ಧಶರೀರವನ್ನು ಅನೇಕಾನೇಕ ವಾದ್ಯಗಳು ಭೋರ್ಗರೆಯುತ್ತಿರಲು "ಶಿವಾಯ ನಮಃ" ಎಂಬ ಪಂಚಾಕ್ಷರಿ ಮಂತ್ರವು ಅಖಂಡವಾಗಿ ಉಚ್ಛಾರಣೆ ಆಗುತ್ತಿರಲು ವೇದ ಮಂತ್ರಗಳು ನಿನಾದವಾಗುತ್ತಿರಲು, ಹಲವು ವಿಧವಾದ ಪತ್ರ ಪುಷ್ಪಗಳು, ಭಸ್ಮದ ಗಟ್ಟಿಗಳು ತುಂಬಿದ ಪ್ರಜ್ವಲಿಸುವ ಸಮಾಧಿ ಕಟ್ಟಡದಲ್ಲಿ ಕ್ರಿಯಾ ಸಮಾಧಿ ಲಕ್ಷಣಗಳಿಂದ ಶಾಸ್ತ್ರಗಳಿಂದ ಭಕ್ತರು ಕೈಂಕರ್ಯ ಮಾಡಿದರು. ಹೀಗೆ ಎಡಬಿಡದೆ ಒಂದು ತಿಂಗಳವರೆಗೂ ಮಠದಲ್ಲಿ ಶಾಂತಿ ಸಮಾರಾಧನೆಗಳು ನಡೆಯುತ್ತಿದ್ದವು ಎಂದು ಈ ಗ್ರಂಥದಲ್ಲಿ ಚನ್ನಬಸವೇಶ್ವರರು ಪ್ರಸ್ತಾಪಿಸಿದ್ದಾರೆ.

ಎರ್ರಿತಾತನು ಜೀವ ಸಮಾಧಿಯಾದ ನಂತರದ ಕೆಲವು ಪ್ರಮುಖ ಘಟನೆಗಳನ್ನು ಇಲ್ಲಿ ಕಾಣಬಹುದು. ವರ್ಷಕ್ಕೊಮ್ಮೆ ಜಾತ್ರೆಯೆಂಬುದೇನು? ಇತ್ತೀಚೆಗೆ ಪ್ರತಿ ಅಮವಾಸ್ಯೆಯೂ ಜಾತ್ರಿ ಆಗಹತ್ತಿದೆ.

ಇದೊ ಮುಗಿಸಿ ಮುಂದಿಟ್ಟೆ
ನನ್ನ ಮಾತಿನ ಮುಡುಪು ನಿನ್ನಡಿಗೆ ಕಾಣಿಕೆಯು
ತಪ್ಪು ಒಪ್ಪುಗಳೆಲ್ಲ ತಾತಮೆಚ್ಚಲು ಮೆಪ್ಪು
ಎಂದೊರೆದ ಮಿತ್ರಗೌಡರ ಮಾತು ಮೀರಲರಿದೆಂದು
ಬರೆದು ಮುಗಿಸಿದೆನಯ್ಯ ಗುರು ಎರ್ರಿನಾಥ!
ನಾ ಬರೆದೆನೆಂದೇನು? ನೀನೊರೆದ ನಾ ಬರೆದೆ
ನಿನ್ನ ಶೃತಿಗೆನ್ನು ಕೃತಿ!
ಶ್ರೀಮಾತೆ ಅರವಿಂದರದಿಯ ಆರಡಿಯಾಗಿ
ಆರುಸ್ಥಲಗಳ ಸತ್ವ ಶಿವಯೋಗದೊಳ ತತ್ವ
ಸಾಧಿಸುವ ಸಾಧಕನು ನಾ
ನೀನೋ ಶಿವಯೋಗ ಸಿದ್ಧ ಪುರುಷ!
ಓ ಸಿದ್ಧ ಕುಲ ಕಮಲ ಕಮನೀಯ ಭಾಸ್ಕರನೆ
ಹಂಸೆಮ್ಮ ದುರಿತಗಳ ಪರಿಹರಿಸು
ಶಿವನ ಸೇವೆಯಾಳಿರಿಸು!
ಇದೊ ಮುಗಿಸಿ ಮುಂದಿಟ್ಟ
ಅಕ್ಷರಾತ್ಮಕವಾದ ನಿನ್ನ ತಂತಾಮೃತವ

ಮುಗಿಸಿದನು ತಂದಿಟ್ಟೆ ನಿನ್ನ ಮುಂದಿಟ್ಟೆ
ಅರ್ಪಿಸಿಕೊ ನಿನಗೆ ಸಮರ್ಪಿತವಾಗಿ
ಸೈಯೆನಿಸುವಂತೆ!

ಈ ರೀತಿಯಾಗಿ ಚನ್ನಬಸವೇಶ್ವರರು ಈ ಕೃತಿಯನ್ನು ಎರ್ರಿತಾತನ ಪಾದಗಳಿಗೆ ಅರ್ಪಿಸಿದ್ದಾರೆ.

ಈ ಕೃತಿಯು ಮೊದಲೇ ತಿಳಿಸಿದಂತೆ ಶ್ರೀವೈಯಂ ಚಂದ್ರಯ್ಯನವರ ಸಂಗ್ರಹಿತವಾದ ಮಾಹಿತಿ ಆಧಾರದ ಮೇಲೆ ರಚಿತಗೊಂಡಿದ್ದರೂ, ಪವಾಡಗಳನ್ನು ಆತನ ಮಹಿಮಾಕರವಾದ ವ್ಯಕ್ತಿತ್ವವನ್ನು ತನ್ನದೇ ಆದ ಶೈಲಿಯಿಂದ ಕಟ್ಟುವಲ್ಲಿ ಸಫಲರಾಗಿದ್ದಾರೆ. ಆತನ ಸಮಾಧಿಸಿದ್ಧಿ ಪಡೆದ ನಂತರವೂ ಹಲವಾರು ಭಕ್ತಜನರಿಗೆ ದರ್ಶನ ಕೊಟ್ಟು ಅವರ ಸಂಕಷ್ಟಗಳನ್ನು ಪರಿಹರಿಸಿದ ಮಾಹಿತಿಯನ್ನು ಇದು ನೀಡುತ್ತದೆ. ತಾತನ ಪೂರ್ವ ಇತಿಹಾಸದಿಂದ ಹಿಡಿದು ಆತನ ವ್ಯಕ್ತಿತ್ವ, ಲೀಲೆಗಳು, ಶಿಷ್ಯ ಸಂಕುಲ, ಮಠದ ಕಾರ್ಯವೈಖರಿ, ಸಮಾಧಿ ಸ್ಥಿತಿಯವರಗೂ ವಿವಿಧ ಆಯಾಮಗಳಲ್ಲಿ ನಿರೂಪಿಸಲಾಗಿದ್ದು, ಪ್ರತಿಯೊಂದು ಆಯಾಮಗಳು ವಿಶಿಷ್ಟ ಪಾಂಡಿತ್ಯ ಪೂರ್ಣವಾಗಿ ತಮ್ಮದೇ ಆದ ಆಲೋಚನಾ ಲಹರಿಯಲ್ಲಿ ಭಕ್ತರ ಕಾತುರದ ಮನಸ್ಸಿಗೆ ಹತ್ತಿರವಾಗಿ ಈ ಗ್ರಂಥವು ಚನ್ನಬಸವೇಶ್ವರರಿಂದ ರಚಿತವಾಗಿದ್ದು ವಿಶೇಷವಾಗಿದೆ.

**ಚೇಳಗುರಿಕೆ ತಾತನ ಗೀತಾಂಜಲಿ**

ಜೋಳದರಾಶಿ ದೊಡ್ಡನಗೌಡರ ಮತ್ತೊಂದು ಮಹತ್ವದ ಕೃತಿ. ಹೆಸರೇ ತಿಳಿಸುವಂತೆ ಇದು ಎರ್ರಿತಾತನ ಕುರಿತ ಅನೇಕ ಗೀತೆಗಳ ಸಮೂಹವಾಗಿದ್ದು, ಒಂದೊಂದು ಹಾಡುಗಳು ವಿವಿಧ ರೀತಿಯ ಸ್ತುತಿಗಳಿಂದ ಕೂಡಿದೆ. ಭಕ್ತರ ಭಕ್ತಿಯ ವೇಷದೊಳಗೆ ವಿವಿಧ ರೀತಿಯ ರೂಪ ವಿನ್ಯಾಸ ಪಡೆದು ಹಲವು ವಚನಗಳ ಮಹತ್ವ ಈ ಕೃತಿಯಲ್ಲಿ ಅಳವಡಿಸಲಾಗಿದೆ. ಪ್ರತಿ ಗೀತೆಯಲ್ಲಿ ಆಧ್ಯಾತ್ಮಿಕತೆಯು ಮಡುಗಟ್ಟಿ ನಿಂತಂತಿದೆ.

ಲೌಕಿಕ ಭಾವಗಳಿಂದ ಮೇಲೇಳುವುದು ಆಕಾಶಕ್ಕೆ ಹಾರುವುದು ಶರೀರದಿಂದಲ್ಲ ಆತ್ಮಜ್ಞಾನದಿಂದ. ನಾವು ನೋಡುತ್ತಿರುವಂತೆ ಪ್ರಯಾಸ ಪ್ರಯತ್ನಗಳಿಲ್ಲದೆ ಆಕಾಶದಲ್ಲಿ ವಿಹಾರ ಮಾಡುವ ಖಗ ಸಂತತಿ ಎಷ್ಟಿಲ್ಲ? ಅವುಗಳೆಲ್ಲಾ ಆತ್ಮಜ್ಞಾನಗಳೆಂದು ಪರಿಗಣಿಸಲಾದೀತೆ. ಎರ್ರಿತಾತನ ಚರಿತ್ರೆಯ ಸಂಗ್ರಹ ಕಾರ್ಯದಲ್ಲಿ ವೈ.ಯಂ ಚಂದ್ರಯ್ಯ ಶ್ರಮವಹಿಸಿದ್ದಾರೆ. ಅವರ ಸಂಗ್ರಹದ ಮೂಲಹಿಡಿದು ಶಿ.ವ. ಚನ್ನಬಸವೇಶ್ವರರು, ಪಂಡಿತ ವೈ. ನಾಗೇಶ ಶಾಸ್ತ್ರಿಗಳು ಲೀಲಾಮೃತ ಪುರಾಣ ಪ್ರಧಾನ ಕೃತಿಯಾಗಿದೆ. ಎರ್ರಿತಾತ ಶತಕಮು, ತೆಲುಗಿನಲ್ಲಿ ಜಿ. ರಾಮಕೃಷ್ಣಯ್ಯನವರು ಪ್ರಕಟಿಸಿದ್ದಾರೆ. ಅವರ ಭಕ್ತರ ಭಕ್ತಿಗೆ ತಾತನ ಪ್ರೇರಣೆಯಾದಂತೆ ಕನ್ನಡ, ತೆಲುಗು, ಸಂಸ್ಕೃತ, ಇಂಗ್ಲೀಷ್ ಭಾಷೆಗಳಲ್ಲಿ ಗ್ರಂಥಗಳನ್ನು ರಚಿಸಿದ್ದಾರೆ.

ಗ್ರಂಥಕರ್ತರಾದ ದೊಡ್ಡನಗೌಡರೇ ಹೇಳುವಂತೆ ಈ ಗೀತಾಂಜಲಿಯನ್ನು ಹಾಡುಗಬ್ಬವಾಗಿ ಬರೆಯಲು ನನಗೆ ತಾತನ ಅಪ್ಪಣೆಯಾದಂತೆ ಹಿಂದೆ ರಚಿತವಾದ ಗ್ರಂಥಗಳಿಂದ ವಸ್ತು ಸಂಗ್ರಹ ಮಾಡಿಕೊಳ್ಳುವ ಅನುಕೂಲವು ಆಯಿತು ಎಂದು ಈ ಕೃತಿ ರಚನೆಯ ವಿವಿಧ ಆಯಾಮಗಳನ್ನು ತಿಳಿಸಲಾಗಿದೆ. ಈ ಕೃತಿಯ ಪ್ರಾರಂಭದಲ್ಲಿ ಎರ್ರಿತಾತನ ಚಿತ್ರವನ್ನು ಹಾಕಿ ಭಕ್ತಿಯನ್ನು ಸಾಕ್ಷಿಕರಿಸಲಾಗಿದೆ. ಅಂದಿನ ಮಠದ ಮಹಾದ್ವಾರದ

ಚಿತ್ರ, ಶ್ರೀಮಠದ ನಿರ್ಮಾಪಕರಾದ ತಿಕ್ಕಯ್ಯವಧೂತರ ಚಿತ್ರ, ಎರ್ರಿತಾತನ ಸೇವೆಯಲ್ಲಿ ನಿರತರಾದ ಪಾಲ್ತೂರು ಸಿದ್ಧಲಿಂಗಪ್ಪ, ಅಂದಿನ ಮಠದ ಧರ್ಮಕರ್ತರಾಗಿದ್ದ ಕೆ. ಬಸಯ್ಯ, ಎರ್ರಿತಾತನ ಪಟ್ಟಶಿಷ್ಯ ಶಿವರಾಮಾವಧೂತರ ಭಾವ ಚಿತ್ರಗಳನ್ನು ಕೃತಿಯ ಪ್ರಾರಂಭದಲ್ಲಿ ನೀಡಲಾಗಿದೆ.

ಶಿವಮಯ ಜೀವನ ಚರಿತ್ರೆಯಲ್ಲಿ ಇರುವಂತೆ ಇಲ್ಲಿ ಸಹ ಎರ್ರಿತಾತನ ಕುರಿತ ಕೆಲವು ಘಟನೆಗಳನ್ನು ಮುಖ್ಯಾಂಶಗಳ ರೂಪದಲ್ಲಿ ನಿರೂಪಿಸಲಾಗಿದೆ. ಅವುಗಳನ್ನು ವಿವರಿಸುವ ಗೋಜಿಗೆ ಹೋಗದಿರುವುದು ಸೂಕ್ತವೆಂದೆನಿಸುತ್ತದೆ. ಏಕೆಂದರೆ ಘಟನೆಗಳ ಮುಖ್ಯಾಂಶಗಳನ್ನು ಎರ್ರಿತಾತನ ಶಿವಮಯ ಜೀವನ ಚರಿತ್ರೆಯಲ್ಲಿ ಅವುಗಳನ್ನು ವಿವರಿಸಿ ಬರೆಯಲಾಗಿದೆ. ಆದುದರಿಂದ ಮುಖ್ಯಾಂಶಗಳ ಬದಲು ಗೀತಾಂಜಲಿಯ ಕೆಲವು ಹಾಡುಗಳನ್ನು ಕುರಿತು ಉಲ್ಲೇಖಿಸಿರುವುದನ್ನು ಮಾತ್ರ ಗಮನಿಸಲಾಗಿದೆ.

ಅನುಭಾವ ಸಾಹಿತ್ಯ ಹೆಚ್ಚಾಗಿ ವಚನ ಸಾಹಿತ್ಯದ ಮೂಲಕ ಜನಸಾಮಾನ್ಯರ ಬಳಿಗೆ ಬಂದಿತು. ಪ್ರಾಚೀನ ಕಾಲದ ಕ್ಲಿಷ್ಟವಾದ ಭಾಷೆಯ ಒತ್ತಡವು ವಚನಗಳಲ್ಲಿ ಇಲ್ಲದಿರುವುದು ತಿಳಿದುಬರುತ್ತದೆ. ಅದಕ್ಕಾಗಿಯೇ ಭಕ್ತ ಜನರ ಅಶೋತ್ತರಗಳಿಗೆ ತಕ್ಕಂತೆ ಈ ಕೃತಿಯಲ್ಲಿ ಸರಳವಾದ ಗೀತೆಗಳ ಶೈಲಿ ಎದ್ದು ಕಾಣುತ್ತದೆ. ಇದುವರೆಗೂ ಬಂದಿರುವ ಎರ್ರಿತಾತನ ಕೃತಿಗಳು ಹೆಚ್ಚಾಗಿ ಜೀವನ ಚರಿತ್ರೆಯನ್ನು ಗದ್ಯದ ರೂಪದಲ್ಲಿ ಲೀಲಾಮೃತ ಪುರಾಣವು ಪದ್ಯಮಯವಾಗಿದ್ದರೂ ಅದು ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿರುವುದರಿಂದ ಪಂಡಿತವರ್ಗ, ವಿದ್ವಾಂಸರ ವಲಯದ ಕೇಂದ್ರವಾಗಿ ಬಿಟ್ಟಿದೆ ಎನ್ನಬಹುದು. ಆದರೆ ಈ ಗೀತಾಂಜಲಿಯು ಹಾಡಗಬ್ಬವಾಗಿ ಜನಪದರ ಹಾಡಾಗಿ ಹೊರಹೊಮ್ಮಿರುವುದರಿಂದ ಅದರ ವ್ಯಾಪ್ತಿಯು ಬಹುಬೇಗನೆ ಎಲ್ಲಾ ಕಡೆಗೆ ವ್ಯಾಪಿಸಿರುವುದು ಕಂಡುಬರುತ್ತದೆ. ಒಂದು ಸರಳವಾದ ಹಾಡಿನ ಚರಣವನ್ನು ಗಮನಿಸುವುದು ಸೂಕ್ತವೆಂದಿನಿಸುತ್ತದೆ.

ಒಂದಿನ ತಾತನ ಮೈ ತೊಳೆಯುತಲಿದ್ದು
ಮೆಲ್ಲ ಮೆಲ್ಲನೆ ಹೊಟ್ಟೆ ಸವರುತ
ಬೊಜ್ಜು ಬಂತಪ್ಪ ನಮ್ಮಪ್ಪಗೆ ಎನುತಲಿ
ನಕ್ಕನು ಸಲಿಗೆ ಕುವಾಡದ ಭರದಲಿ
ತಾತ ನಿಂತಿದ "ನೋಡಿ ಗುಂಡಿಲಿ ಹೊಡೆಯುವೆ
ನೋಡೆ"ಂದು ನುಡಿದನು ಮನಿಸಿನಲಿ
ನಡ ನಡಗಿದ್ದ ಸಿದ್ಧಲಿಂಗಪ್ಪ ತಾತನ
ಸೇವೆಗೆ ತಪ್ಪಿದೆನೆನ್ನುತಲಿದಲು
ಮಠಕ್ಕೊಬ್ಬ ಹಿರಿಯ ಉದ್ಯೋಗಿಯು ಬರಲು
ಆತ ತುಬಾಕಿಯ ಮೂಲೆಯೊಳಿಡಲು
ಗದ್ದಲದೊಳ ಗೊಬ್ಬನಾರೋ ತಾಕಲು

ಹಾರಿತು ಗುಂಡದು ಕಾಲಿಗೆ ಬಡಿಯಲು

ಎರ್ರಿತಾತನಿಗೆ ತಮಾಷೆ ಮಾಡಿದ ಸಿದ್ಧಲಿಂಗಪ್ಪನ ಕತೆ ವ್ಯಥೆಯಾದ ಬಗೆಯನ್ನು ದೊಡ್ಡನಗೌಡರು ಸರಳವಾದ ಹಾಡುಗಬ್ಬದ ಬೆನ್ನೇರಿ ಸವಾರಿ ಮಾಡಿರುವುದು ತಿಳಿಯುತ್ತದೆ. ಕುಮಾರವ್ಯಾಸನು ಕಲಿತವರಿಗೆ ಕಲ್ಪವೃಕ್ಷ, ಕಲಿಯದವನಿಗೆ ಕಾಮಧೇನು ಎಂಬಂತೆ ಗಮಕನಿಧಿಯಾದ ಇವರು ಪಾಮರರ ಪರಮ ಕವಿಯಂದೇ ಅಷ್ಟು ಸುಲಭ ರೀತಿಯ ಸರಳ ಭಾಷೆಯ ಬಳಕೆ ಈ ಕೃತಿಯಲ್ಲಿ ನಿರೂಪಿಸಿದ್ದಾರೆ. ಪಂಡಿತವರ್ಗಕ್ಕೆ ವಿದ್ವಾಂಸ ಬಳಗಕ್ಕೆ ಪಂಡಿತ ವೈ.ನಾಗೇಶಶಾಸ್ತ್ರಿಯವರ ಲೀಲಾಮೃತಪುರಾಣ ನೆರವಾದರೆ, ಜನ ಸಾಮಾನ್ಯರಿಗೆ ಗೌಡರು ರಚಿಸಿದ ಈ ಹಾಡುಗಬ್ಬವೇ ಸಾಕ್ಷಿಯಾಗಿದೆ. ಎರ್ರಿತಾತನ ಕುರಿತ ಮಹಿಮೆಗಳಾಗಲೀ, ಲೀಲೆಗಳಾಗಲೀ, ಮಠದ ಪ್ರತಿ ಕಾರ್ಯಕಲಾಪಗಳಾಗಲೀ, ಹಾಗೂ ಶಿವಾನುಭವಗೋಷ್ಠಿಯ ಕಾರ್ಯಗಳಲ್ಲಿ ಅಂದಿನಿಂದ ಇಂದಿನವರೆಗೂ ಪ್ರಸಿದ್ಧಿ ಪಡೆದು ಪ್ರಚಾರಕ್ಕೆ ತರಲು ಈ ಮಹಾಮೇಧಾವಿ ಜೋಳದರಾಶಿ ದೊಡ್ಡನಗೌಡರೂ ಸಹ ಮೊದಲಿನ ಸಾಲಿನಲ್ಲಿ ನಿಲ್ಲಲು ಅರ್ಹರಾಗಿದ್ದಾರೆ.

ಚೇಳ್ಳಗುರಿಕೆ ಎರ್ರಿಸ್ವಾಮಿಗಳವರು

ಇದು ಎರ್ರಿತಾತನ ಜೀವನ ಕುರಿತು ಬೆಳಕು ಚೆಲ್ಲುವ ಕೃತಿಯಾಗಿದೆ. ಇದನ್ನು ಬಸವರಾಜ್ ಬಿ.ಸಿ. ಅವರು ಬರೆದಿದ್ದಾರೆ. ಇಂಜನೀಯರ್ ಆಗಿ ಕೆಲಸಮಾಡುವ ಇವರು ಎರ್ರಿತಾತನ ಪರಮ ಭಕ್ತರು ಎಂಬುದು ಈ ಕೃತಿಯನ್ನು ಅವಲೋಕಿಸಿದಾಗ ತಿಳಿದುಬರುತ್ತದೆ. ಇವರು ಸಾಹಿತ್ಯಾಸಕ್ತರು ಕಲಾಭಿಮಾನಿಗಳಾಗಿದ್ದಾರೆ. ಅವರು ಯೌಗಿಕ ಮಹಾಪುರುಷರ ಆಧ್ಯಾತ್ಮಿಕತೆ ಹಾಗೂ ಸಿದ್ಧಿಗಳಿಗೆ ಮಾರುಹೋಗಿದ್ದಾರೆ. ಇದಕ್ಕೆ ಪೂರಕವಾಗಿ ಅಕ್ಕಮಹಾದೇವಿಯ ಒಂದು ವಚನವನ್ನು ಉಲ್ಲೇಖಿಸುವುದು ಸೂಕ್ತವಾಗಿದೆ.

ಅಯ್ಯಾ ನಿಮ್ಮನುಭಾವಿಗಳ ಸಂಗದಿಂದ
ಎನ್ನ ತನು ಶುದ್ಧವಾಯಿತು.
ಅಯ್ಯಾ ನಿಮ್ಮನುಭಾವಿಗಳ ಸಂಗದಿಂದ
ಎನ್ನಮನ ಶುದ್ಧವಾಯಿತು
ಅಯ್ಯಾ ನಿಮ್ಮನುಭಾವಿಗಳೆನ್ನ ನೊರೆ ದೊರೆದು
ಆಗು ಮಾಡಿದ ಕಾರಣ
ಚೆನ್ನ ಮಲ್ಲಿಕಾರ್ಜುನ, ನಿಮಗಾನು ತೊಡಿಗೆಯಾದೆನು

ಜೀವನದಲ್ಲಿ ಸಂಗ ಎಂಬುದು ಬಹಳ ಮಹತ್ವದ್ದು. ಹರಿಯುವ ನದಿಯಲ್ಲಿ ಕುಣಿಯುವ ಅಲೆಗಳ ಘರ್ಷಣೆಗೆ ಸಿಕ್ಕ ಒರಟಾದ, ವಕ್ರವಕ್ರವಾದ ಕಲ್ಲು ಗುಂಡಾಗಿ ರೂಪುಗೊಳ್ಳುತ್ತದೆ. ಶ್ರೀಗಂಧದ ವೃಕ್ಷದೊಡನೆ ಸೆಣಸಾಡಿದ ಮರ ಶ್ರೀಗಂಧದ ವಾಸನೆಯನ್ನು ಬೀರತೊಡಗುತ್ತದೆ. ಅದರಿಂದಲೇ ಜ್ಞಾನಿಗಳು ಸತ್ ಸಂಗಕ್ಕೆ ಅಮೂಲ್ಯವಾದ ಬೆಲೆ ನೀಡುತ್ತಾರೆ.

ಈ ಕೃತಿಯ ವಿಶೇಷವೆಂದರೆ ಬಸವರಾಜ್ ಅವರು ಎರ್ರಿತಾತನ ಹುಟ್ಟುರೆಂಬ ಐತಿಹ್ಯವಿರುವ ಲಿಂಗದಹಳ್ಳಿಗೆ ಕ್ಷೇತ್ರಕಾಯಕ್ಕೆ ಹೋಗಿ ಮಾಹಿತಿ ಸಂಗ್ರಹಿಸಿ ತಾತನ ಪೂರ್ವ ಚರಿತ್ರೆಯನ್ನು ಕಟ್ಟುವ ಪ್ರಯತ್ನಮಾಡಿರುವುದು ಕಂಡುಬರುತ್ತದೆ. ಎರ್ರಿತಾತನ ಮೊದಲ ಹೆಸರು ಆಗಲೇ ತಿಳಸಿದಂತೆ ನಂಜುಂಡನೆಂದು ನಂತರ ಯೋಗ ಸಿದ್ಧಿಯ ಒಂದೊಂದು ಘಟನೆಗಳ ನಂತರ ನಂಜುಂಡ ಎಂಬುದು ಹೋಗಿ ನಂಜುಂಡಯ್ಯಾ, ನಂಜುಂಡಶಾಸ್ತ್ರಿ, ನಿರಂಜನಮೂರ್ತಿ, ತಾತ ಹಾಗೂ ಎರ್ರಿತಾತ ಎಂಬ ಹೆಸರು ಪಲ್ಲಟಗೊಂಡ ಮಾಹಿತಿಯನ್ನು ಒದಗಿಸುತ್ತದೆ. ಬಾಲ್ಯ, ವಿದ್ಯಾರ್ಜನೆ, ಗುರು ಅನುಗ್ರಹ, ಸಂಸಾರ, ಉದ್ಯೋಗಗಳಿಂದ ವೈರಾಗ್ಯ ತಾಳಿ ಊರೂರು ಅಲೆಯುತ್ತಾ ಹೋದಲೆಲ್ಲಾ ಪವಾಡಗಳನ್ನು ಮೆರೆಯುತ್ತಾ ಚೇಳಗುರಿಕೆಗೆ ಬಂದು ಸಮಾದಿಯಾದ ಕಥೆಯಿದೆ. ಶ್ರೀ ಎರ್ರಿತಾತ ದೊಡ್ಡ ಮಹಾತ್ಮನು, ಪವಾಡ ಪುರುಷನು ಅವರನ್ನು ನೆನವುದೇ ಧನ್ಯ ಅವರ ನೋಟವೆ ಕಾಮಧೇನು ಹಸ್ತವೇ ಕಲ್ಪವೃಕ್ಷ, ಪಾದಗಳೇ ಚಿಂತಾಮಣಿ, ವಾಕ್ಯವೇ ಸಿದ್ಧಿರಸ (ಬಸವರಾಜ್ ಬಿ.ಸಿ. ಚೇಳ್ಳಗುರಿಕೆ ಶ್ರೀ ಎರ್ರಿಸ್ವಾಮಿಗಳವರು ಪು. ೫೬). ಈರೀತಿಯ ಹಲವಾರು ಉಪಮೆಯಗಳನ್ನು ಬಳಸಿ ಚೇಳಗುರಿಕೆ ಎರ್ರಿತಾತನ ಕುರಿತ ಇತರ ಚರಿತ್ರೆಗಳಿಗಿಂತ ಭಿನ್ನವಾದ ನೆಲೆಯಲ್ಲಿ ಕಟ್ಟಲು ಹಲವಾರು ಮೂಲಗಳಿಂದ ವಿಷಯ ಸಂಗ್ರಹಿಸಿ ಉದಾತ್ತವಾದ ಚಿಂತನೆಗಳಿಂದ ಈ ಕೃತಿ ಬರೆದಿದ್ದಾರೆ. ಅಹಂಕಾರ ಭವದ ಬಂಧನಗಳನ್ನು ಮುರಿದು ಎಲ್ಲಾದಕ್ಕೂ ಪರಿಹಾರ ನೀಡುವ ತಾತನ ಕುರಿತು ಈ ರೀತಿಯಾಗಿ ಅಭಿವ್ಯಕ್ತಿಸಲಾಗಿದೆ.

> ಎರ್ರೀ ಎಂದರೆ ನಮ್ಮೊಳಗಿನ ಉರಿಹೋಯಿತು ನೋಡಾ
> ಎರ್ರೀ ಎಂದರೆ ಸಿರಿ ಸಂಪದ ಬಂದಿತು ನೋಡಾ
> ಎರ್ರೀ ಎಂದರೆ ಸಕಲವೂ ಸಿರಿಯಾಯಿತು ನೋಡಾ

ಎಂಬ ಭಕ್ತನೊಬ್ಬನ ನುಡಿಯನ್ನು ಉಲ್ಲೇಖಿಸಿ ತಾತನವರ ಶಕ್ತಿ ಲೀಲೆಗಳನ್ನು ಕುರಿತು ಹೇಳಿದ್ದಾರೆ. ಇಂದ್ರಿಯ ಮನೋಬುದ್ಧಿಗಳ ತೇಜಸ್ಸನ್ನು ಬಲಿಗೊಡದೆ ಪಡೆದದ್ದು ಆನಂದ. ಆದ್ದರಿಂದ ಆ ಆನಂದ ಆತ್ಮರತಿಯೆನಿಸಿಕೊಳ್ಳುತ್ತದೆ ಎಂಬುದು ಅವರ ಇಂಗಿತವಾದಂತೆ ಕಂಡುಬರುತ್ತದೆ.

ಮುಂದುವರೆದು ಈ ಕೃತಿಯಲ್ಲಿ ಸಂಸಾರದ ನಿಸ್ಸಾರತೆಯನ್ನು, ನಶ್ವರತೆಯನ್ನು ಕುರಿತು ಅವರು ಹೇಳುವ ಮಾತು ಗಮನಿಸಬಹುದು. ಎಂಥಹ ಲೌಕಿಕವಾದಿಗಳ ಮನಸ್ಸನ್ನು ಕೂಡ ಕ್ಷಣಕಾಲ ಅಂತರಂಗದ ಆತ್ಮ ವೀಕ್ಷಣೆಯ ಕಥನ ತಿರುಗಿಸಬಲ್ಲವು. ಅಶಾಶ್ವತವಾದುದ್ದನ್ನೆ ಶಾಶ್ವತವಾದುದೆಂದೂ ಕ್ಷುದ್ರವಾದುದನ್ನೇ ಮಹೋನ್ನತವಾದದೆಂದೂ ನಂಬಿ ಆಚರಿಸುತ್ತಾ ಅಮೂಲ್ಯವಾದ ಜೀವನವನ್ನು ಸಾಧ್ಯವಾಗಿ ಕಳೆಯುವ ಜನತೆಯನ್ನು ಕಂಡು ಬದುಕಿನ ಅನಂತ ಮೂಲಗಳನ್ನು ಸಾರುವಂತೆ ಈ ಕೃತಿಯು ವಿವರಿಸುತ್ತದೆ. ವಿಮರ್ಶಾತ್ಮಕತೆಯ ಗೋಜಿಗೆ ಹೋಗದ ತಿಳಿದಷ್ಟು ಆಳ, ನಡೆದಷ್ಟು ದಾರಿ ವಿಸ್ತಾರಗಳು ಎಂಬಂತೆ ಎರ್ರಿತಾತನ ಸಕಲ ವಿಧವಾದ ಪವಾಡ ಸಾದೃಶ್ಯಗಳನ್ನು ಅವರ ಮಹಿಮೆಯ ಸಂಗತಿಗಳನ್ನು ನಮ್ರವಾಗಿ ವರ್ಣಿಸಲಾಗಿದೆ. ಜೀವ ಸಮಾಧಿಯಾಗಿ ಹಲವು ವರುಷಗಳು ಕಳೆದರೂ ಭಕ್ತರ ಬದುಕಿನ ಬವಣೆಗಳನ್ನು

ನಿವಾರಿಸುವುದು ಇಂದಿಗೂ ನಿಜವೆಂಬಂತೆ ಕಂಡುದ್ದನ್ನು ಇದ್ದಕ್ಕಿದ್ದಂತೆ ಚಿತ್ರಿಸಲಾಗಿದೆ. ಪ್ರತಿದಿನ ವಿಶಿಷ್ಟವಾದ ಪ್ರಗತಿಪರ ಧೋರಣೆಯಿಂದ ಮಠವು ಬೆಳೆಯುತ್ತಿದೆ. ತನ್ನ ಕುಟುಂಬದವರಿಗೆ ಮತ್ತು ವೈಯಕ್ತಿಕವಾಗಿ ಅವರಿಗಾದ ಎರ್ರಿತಾತನ ಮಹಿಮೆಗಳನ್ನು, ಪವಾಡ ಸಾದೃಶ್ಯಗಳನ್ನು ವಿವರವಾಗಿ ತಿಳಿಸುವ ಕೌಶಲ್ಯ ಇವರಲ್ಲಿದೆ ಎಂಬುದು ಗೋಚರವಾಗುತ್ತದೆ.

ಸಹಜವಾದ ಸರಳವಾದ ನಿರೂಪಣೆಗಳಿಂದ ಕೃತಿಯು ಹಲವಾರು ಜನರ ಹತ್ತಿರಕ್ಕೆ ವಿಷಯಗಳನ್ನು ತಲುಪಿಸಿ ಅವರಲ್ಲಿ ಭಕ್ತಿಯ ಬೀಜವನ್ನು ಬಿತ್ತಿ ಮರವಾಗಿ ಬೆಳೆದು ನಂತರ ಫಲದ ಸಾಕ್ಷಾತ್ಕಾರವನ್ನು ಪಡೆಯುವಂತೆ ಮೊದಲು ಇದು ಸಹಕಾರಿಯಾಗಿದೆ. ಬಾಲ್ಯದ ಕನವರಿಕೆಗಳಿಂದ ಹಿಡಿದು ಯೌವ್ವನದ ಬಂಧನದಿಂದ ಜಾರಿ ಸಂಸಾರದ ಮಾಯೆಯೊಳಗೆ ಬಿದ್ದರೂ ಬೀಳದಂತೆ ಭಕ್ತಿಯ ಹೂರಣವನ್ನು ಸವೆದು ಸಂಚಾರ ಶೀಲರಾಗಿ ಎರ್ರಿತಾತನ ಅಮೂಲಾಗ್ರ ಮಾಹಿತಿಯನ್ನು ಹೊರಹಾಕುವಲ್ಲಿ ಈ ಕೃತಿ ಸಹಾಯ ಮಾಡುತ್ತದೆ.

### ಚೆಳ್ಳಗುರಿಕೆ ಎರ್ರಿತಾತ

ಎಸ್. ಶಿವಾನಂದ ಅವರು ರಚಿಸಿದ ಒಂದು ಕಿರು ಪುಸ್ತಕವಿದು. ಪ್ರಸ್ತುತ ಕೃತಿಯು ಬಳ್ಳಾರಿ ಜಿಲ್ಲೆಯ ಸಂಡೂರು ಹತ್ತಿರ ಯಶವಂತನಗರದ ನೀಡಿದ ಪ್ರಾಚರೋಪನ್ಯಾಸವಾಗಿದೆ. ೧೬.೦೩.೧೯೯೧ರಲ್ಲಿ ನಡೆಯಿತು ಎಂದು ತಿಳಿದುಬಂದಿದೆ. ಇದರಲ್ಲಿ ಚೇಳಗುರಿಕೆ ಎರ್ರಿತಾತನವರ ಜೀವನ ಸಿದ್ಧಿ ಸಾಧನೆಗಳನ್ನು ಸಂಕ್ಷಿಪ್ತವಾಗಿ ಅವಲೋಕಿಸಿರುವುದು ಕಂಡುಬರುತ್ತದೆ. ಪುಸ್ತಕದ ಪ್ರಾರಂಭದಲ್ಲಿ ಚೇಳಗುರಿಕೆಯ ಇತಿಹಾಸವನ್ನು ಸ್ವಲ್ಪ ಅವಲೋಕಿಸಿದ್ದರೆ. ಕರ್ನಾಟಕ ಆಂಧ್ರ ಗಡಿಭಾಗದಲ್ಲಿರುವ ಒಂದು ಚಿಕ್ಕ ಹಳ್ಳಿ. ಈ ಚೇಳಗುರಿಕೆ ಗ್ರಾಮಕ್ಕೆ ಮಹತ್ವ ಬಂದಿರುವುದು ಎಲ್ಲಿಂದಲೋ ಬಂದು ಇಲ್ಲಿ ನಲೆಸಿದ ಎರ್ರಿತಾತನಿಂದಲೇ ಎಂಬುದು ಗಮನಾರ್ಹವಾದ ಸಂಗತಿಯಾಗಿದೆ. ಎರ್ರಿತಾತನ ಮೂಲವು ಕುರಿತು ಸಂದಿಗ್ಧ ಸ್ಥಿತಿಯಲ್ಲಿದೆ. ಎಲ್ಲಾ ಮಹಾತ್ಮರ ಪೂರ್ವಚರಿತ್ರೆ ಅಸ್ಪಷ್ಟ. ಏಕೆಂದರೆ ಅವರ ಮಹಿಮೆ ಚರಿತ್ರೆಯ ಭಾಗವೇ ಮುಖ್ಯವಾಗಿ ಪೂರ್ವಭಾಗವು ಗೌಣವಾಗುವುದು ತೀರ ಸಾಮಾನ್ಯವಾಗಿದೆ. ಪ್ರಕಟಿತವಾದ ಎಲ್ಲ ಕೃತಿಗಳಲ್ಲಿ ಅವರ ಪೂರ್ವ ಚರಿತ್ರೆಯನ್ನು ಐತಿಹ್ಯ ಎಂಬಂತೆ ರಚಿಸಲಾಗಿದೆ. ಮೈಸೂರು ಜಿಲ್ಲೆಯವರು ಎಂದು ಉಲ್ಲೇಖಿಸುತ್ತಾ ಸಾಗುತ್ತದೆ. ಕಂದಾಯ ಇಲಾಖೆಯಲ್ಲಿ ಉನ್ನತ ಉದ್ಯೋಗವು ದೊರೆತ್ತಿದ್ದು ತದನಂತರ ಅದಕ್ಕೆ ರಾಜೀನಾಮೆ ಕೊಟ್ಟನು ಎಂಬುದು ಈ ಕೃತಿಯಿಂದ ತಿಳಿದು ಬರುತ್ತದೆ.

ಲಿಂಗದಹಳ್ಳಿಯಲ್ಲಿದ್ದ ನಾಗಪ್ಪನವರೆಂಬ ವೇದಾಂತಿಗಳ ಹತ್ತಿರ ಆಧ್ಯಾತ್ಮಿಕ ಹಸಿವನ್ನು ತಾತನವರು ನೀಗಿಸಿಕೊಳ್ಳುತ್ತಿದ್ದು, ತಮ್ಮ ಮೊದಲ ಹೆಸರು ನಂಜುಂಡನೆಂದು ತಿಳಿದುಬಂದಿದೆ. ನಂತರದ ದಿನಗಳಲ್ಲಿ ಎರ್ರಿತಾತನೆಂಬ ಹೆಸರು ಬಂದಿದೆ. ತಂದೆ ತಾಯಿ, ಮನೆ ಹೆಂಡತಿ, ಇದ್ದ ಒಬ್ಬ ಮಗುವನ್ನು ಬಿಟ್ಟು ಏನು ಇಲ್ಲದ ನಿರ್ಗತಿಕನಂತೆ ಊರೂರು ಅಲೆಯುತ್ತಾ ಇಚ್ಛೆಬಂದ ಕಡೆಗೆ ತಿರುಗುತ್ತಾ ಬಹುವಿಧವಾದ ಕಷ್ಟಗಳನ್ನು ಅನುಭವಿಸುತ್ತಾ ಇದ್ದನು ಎಂಬ ವಿಷಯವನ್ನು ಕರುಣಾಜನಕವಾಗಿ ಚಿತ್ರಸಲಾಗಿದೆ.

ಒಂದೊಂದು ಕೃತಿಯು ಒಂದೊಂದು ರೀತಿಯ ಹೊಸಹೊಸ ಘಟನೆಗಳನ್ನು ಬಿಚ್ಚುತ್ತಾ ಹೋಗುತ್ತವೆ. ಏಕೆಂದರೆ ಮಹಾತ್ಮರ ಬದುಕು ಹೀಗೆ ನಿರ್ದಿಷ್ಟವಾಗಿರುತ್ತದೆ ಎಂದು ಹೇಳಲು ಕಷ್ಟಸಾಧ್ಯ. ಅದಕ್ಕಾಗಿಯೇ ಕೆಲವು ಸಂಗತಿಗಳು ಏರುಪೇರಾಗಿ ಬರೆಯಲ್ಪಟ್ಟಿರುವುದು ಅನುಭಾವಿಗಳ ಪರಂಪರೆಯಲ್ಲಿ ಹೊಸದೇನು ಅಲ್ಲ. ಎರ್ರಿತಾತನು ಕರ್ನಾಟಕ ಆಂಧ್ರದ ಸಂಬಂಧವನ್ನು ಬೆಸೆಯುವಲ್ಲಿ ಯಶಸ್ವಿಯಾದ ದಿವ್ಯಪುರುಷ ಎಂಬುದು ಈ ಕೃತಿಯು ಸಾರಿಹೇಳುತ್ತದೆ. ಕಲ್ಯಾಣ ದುರ್ಗದಿಂದ ಹಿಡಿದು ಬೆಳಗುಪ್ಪೆ, ಮುಸ್ಟುರು, ವೆಲಗೊಂಡ, ಉರವಕೊಂಡ ಹಾಗೂ ಚೀಕಲಗುರಿಕೆಗಳಲ್ಲಿ ತಿರುಗಾಡಿ ಅಲ್ಲಿ ಗೈದ ತಮ್ಮ ಚಟುವಟಿಕೆಯನ್ನು ಸಂಕ್ಷಿಪ್ತ ರೀತಿಯಲ್ಲಿ ಜನಸಾಮಾನ್ಯರ ಹತ್ತಿರಕ್ಕೆ ಬಂದು ತಲುಪಿಸುವಂತೆ ಈ ಕೃತಿಯು ತಿಳಿಯಪಡಿಸುತ್ತದೆ.

ತಿಕ್ಕಯ್ಯನವರ ಆಗಮನವನ್ನು ತಿಳಿಸುತ್ತಾ ತಾತನ ಸೇವೆಗೆಂದು ಬಂದ ತಿಕ್ಕಯ್ಯನು ಎರ್ರಿತಾತನ ಪರಮ ಶಿಷ್ಯನಾಗುವುದು, ಮಠವನ್ನು ಪರಿಶ್ರಮದಿಂದ ತಾತನಿಗಾಗಿ ಕಟ್ಟಿದಾಗ ತಾತ ಮಠಕ್ಕೆ ಬರುವುದಿಲ್ಲವೆಂದು ಹೇಳಿದಾಗ ಭಾದೆ ಪಡುವುದು, ನಂತರ ಮಠಕ್ಕೆ ಬಂದಾಗ ಸಂತೋಷಗೊಳ್ಳುವ ಹಲವಾರು ವಿಷಯಗಳನ್ನು ಅಲ್ಪ ವಿವರಣೆಗಳೊಂದಿಗೆ ಈ ಕೃತಿಯು ಘಟನೆಗಳನ್ನು ನಿರೂಪಿಸುತ್ತಾ ಹೋಗುತ್ತದೆ. ಇಲ್ಲಿ ಗುರು ಶಿಷ್ಯರ ಸಂಬಂಧವನ್ನು ದೊಡ್ಡನ ಗೌಡರು ಈ ರೀತಿ ವರ್ಣಿಸಿದ್ದಾರೆಂದು ತಿಳಿಸುತ್ತದೆ.

ಅರಿಯಬಹುದೇ ನಿನ್ನ ಎರ್ರಿಯಾ ಮರ್ಮವನು
ಅರಿತವನು ತಾನೊಬ್ಬ ನಿನ್ನಂತೆ ತಿಕ್ಕಯ್ಯ
ಎರ್ರಿ ತಿಕ್ಕುಗಳೊಂದೇ ಲೌಕಿಕದ ನೋಟದಲಿ
ಯಾರರಿಯಬಲ್ಲಿರೋ ನೀನೇ ಪೇಳುವತನಕ

ಅವರಿಬ್ಬರ ಗುರು-ಶಿಷ್ಯರ ಸಂಬಂಧ ಅವ್ಯಕ್ತ ಹಾಗೂ ಅಲೌಕಿಕವಾಗಿತ್ತು. ತಿಕ್ಕಯ್ಯನ ಮನದಲ್ಲಿ ಮಠವನ್ನು ಕಟ್ಟಿಸಬೇಕೆಂದು ಆಸೆಯು ಈಡೇರಿತಂತೆ. ಮುಂದೆ ಎರ್ರಿತಾತನವರ ಮಲ್ಲಪ್ಪನ ಮಟ್ಟಿಯಿಂದ ಭಕ್ತರ ಮನೆಗಳಿಗೆ ಅಲ್ಲಿಂದ ಮಠಕ್ಕೆ ಬಂದು ವಿವರಗಳನ್ನು ಸಂಕ್ಷಿಪ್ತಗೊಳಿಸಲಾಗಿದೆ. ತಾತನ ನೂತನ ಮಠ ಎರ್ರಿತಾತನ ಮಠವೆಂದೇ ಹೆಸರಾಯಿತು.

"ಅನುಭಾವಿಗಳ ಸಂತೋಷದಿಂದ ಮನಶುದ್ಧವಾಯಿತು" ತಮಗೆ ಸತ್ಯಸದಾಚಾರದ ಆಹಾರ ಸಿಕ್ಕರೆ ಮನಕ್ಕೆ ಶರಣರ ಸಂಗದಲ್ಲಿ ಸಿಕ್ಕುವುದು ಸದ್ವಿಚಾರದ ಆಹಾರ. ಒಳಿತನ್ನು ಕೇಳುವ, ಹೂಳುವ, ಹಾಡುವ, ಪಾಡುವ, ಚಿಂತನ ಮಂಥನ ಮಾಡುವ ಸದಾವಕಾಶ. ಹೀಗಾಗಿ ಮನಸ್ಸು ಸ್ವಾಭಾವಿಕವಾಗಿ ಒಳ್ಳೆಯ ವಿಚಾರವನ್ನು ಪಡೆಯಬೇಕಾದರೆ ಸತ್ಸಂಗ ಮುಖ್ಯವಾಗುತ್ತದೆ. ಸಕ್ಕರೆಯ ಪರ್ವತದಲ್ಲಿ ಎಲ್ಲಿ ಬಿದ್ದರೂ ಸಿಹಿಯ ಅನುಭವವಾಗುತ್ತದೆ. ಅದಕ್ಕಾಗಿಯೇ ಎಂಬಂತೆ ಎರ್ರಿತಾತನ ದರ್ಶನಕ್ಕೆ ಬಂದ ಅನೇಕ ಭಕ್ತರು ಆತನ ಸೇವಗೆಂದು ನಿರತರಾದರು. ಎ.ಜಿ. ಶ್ಯಾಮಣ್ಣ, ಪಾಲ್ತೂರು ಸಿದ್ಧಲಿಂಗಪ್ಪ ಉಮಾಪತಿಯಪ್ಪ ಮುಂತಾದ ಹಿರಿಯರು ತಾತನ ಸೇವಗೈದು ಪುಣ್ಯವಂತರಾಗಿದ್ದಾರೆಂದು ಈ ಕೃತಿಯು ತಿಳಿಸುತ್ತದೆ.

ಈ ಕೃತಿಯು ತಾತನ ಸಮಕಾಲೀನ ಸಂತರನ್ನು ಪರಿಚಯಿಸುತ್ತದೆ. ನವಲಗುಂದ ನಾಗಲಿಂಗ, ಕಡಕೋಳ ಮಡಿವಾಳಪ್ಪ, ಶಿಶುನಾಳ ಶರೀಫ ಮುಂತಾದವರು ಹಲವಾರು ಪವಾಡಗಳನ್ನು ಮಾಡಿದಂತೆ ಎರ್ರಿತಾತನ ಪವಾಡಗಳನ್ನು ಟಿಪ್ಪಣಿಯಂತೆ ಇಲ್ಲಿ ತೋರಿಸಲಾಗಿದೆ.

ಒಟ್ಟಾರೆಯಾಗಿ ಈ ಕಿರುಹೊತ್ತಿಗೆಯು ಎರ್ರಿತಾತನ ಪೂರ್ವ ಇತಿಹಾಸದಿಂದ ಹಿಡಿದು ಮನೆ, ಸಂಸಾರ ಬಿಡುವುದು, ಚೇಳಗುರಿಕೆಗೆ ತಾತನ ಆಗಮನ, ತಿಕ್ಕಯ್ಯನ ಗುರುವಿನ ಸಂಬಂಧ ಮತ್ತು ಪವಾಡಗಳ ಸಂಕ್ಷಿಪ್ತ ಅವಲೋಕನ, ತಾತನ ಸಮಾಧಿ ಹಾಗೂ ತಾತನ ಶಿಷ್ಯರ ಪರಂಪರೆಯನ್ನು ಸಮಗ್ರವಾಗಿ ಅಲ್ಲದಿದ್ದರೂ ಸಂಕ್ಷಿಪ್ತವಾಗಿ ತಿಳಿದುಕೊಳ್ಳಲು ತುಂಬಾ ಸಹಕಾರಿಯಾದ ಮಾಹಿತಿಯನ್ನು ಒದಗಿಸುತ್ತದೆ.

**೪.೨. ಪುರಾಣಗಳು**

ಪುರಾಣಗಳು ಭಾರತೀಯ ಬಹುಮಟ್ಟಿನ ಸಾಹಿತ್ಯದಲ್ಲಿ ರಚಿತವಾಗಿವೆ. ಅವುಗಳ ರಚನೆಗೆ ಪ್ರೇರಣೆ ಹಾಗೂ ಕಥಾವಸ್ತುವೆಂದರೆ ಮತಧರ್ಮವೇ ಎಂದು ಬೇರೆ ಹೇಳಬೇಕಿಲ್ಲ.ಅವು ಒಂದು ಮತದ ಇಲ್ಲವೆ ಒಂದು ವಿಶಿಷ್ಟ ಪಂಗಡದವರ ಧಾರ್ಮಿಕ ಹಾಗೂ ಸಾಂಸ್ಕೃತಿಕ ವಿಷಯಗಳನ್ನೊಳಗೊಂಡದ್ದು, ಆ ಜನತೆಯ ಒಪ್ಪಿಗೆಯಿಂದ ಚಲಾವಣೆಗೆ ಬಂದಂತಹವು. ಅವುಗಳ ಗಾತ್ರ, ಬೆಳವಣಿಗೆಗೆ ಜಾನಪದ ಪ್ರಜ್ಞೆಯಿತ್ತ ಸತ್ವ ಬಹುಮುಖ್ಯವಾದುದು. ಧಾರ್ಮಿಕ ಮಹಾಪುರುಷರ ಮಹಿಮೆ, ಧರ್ಮ, ತತ್ವ, ಆಚರಣೆಗಳ ಮೇಲ್ಮೆಗೆ ಅಂಶಗಳಲ್ಲಿ ಜನತೆಯ ನಾಲಿಗೆಯ ಮೇಲಿದ್ದ ಕಥೆಗಳನ್ನು ಇಲ್ಲವೆ ಸ್ವಕಲ್ಪಿತ ಘಟನೆಗಳನ್ನು ಹೆಚ್ಚಿಗೆ ಸೇರಿಸಬಹುದು.

ಪುರಾಣಗಳಿಗೂ ಧಾರ್ಮಿಕ ಆಚರಣೆಗಳಿಗೂ ಹತ್ತಿರದ ಸಂಬಂಧ ಇದೆ ನಿಜ. ಆದರೆ ಪುರಾಣದಲ್ಲಿ ಹೇಳಿದ್ದನ್ನು ಜನ ಆಚರಿಸುತ್ತಾರೋ ಅಥವಾ ಜನರು ತಮ್ಮ ಆಚರಣೆಯನ್ನು ಸಮರ್ಥಿಸಿಕೊಳ್ಳಲು ಪುರಾಣಗಳನ್ನು ಕಟ್ಟಿಕೊಳ್ಳುತ್ತಾರೋ? ಆಚರಣೆ ಮೊದಲೋ ಪುರಾಣ ಮೊದಲೋ? ಈ ಪ್ರಶ್ನೆಗಳನ್ನು ಎತ್ತಿಕೊಂಡರೆ ವಿಸ್ತೃತ ಬಗೆಯ ಚಿಂತನೆಗೆ ಇಂಬುಕೊಡುತ್ತದೆ. ಅದು ಏನೇ ಇರಲಿ ಪುರಾಣಗಳು ಪಂಡಿತರ ಹಿಡಿತಕ್ಕೆ ಒಳಗಾಗಿರುವುದು. ಆ ಮೂಲಕ ಜನ ಸಾಮಾನ್ಯರ ಬಂದುಕಗಳನ್ನು ತನ್ನ ಹಿಡಿತದೊಳಗೆ ಬಂಧಿಸುವ ಪ್ರಯತ್ನವಂತೂ ಮಾಡಲಾಗಿದೆ ಎಂದೇ ಹೇಳಬಹುದು.

ಪುರಾಣಗಳು ತಮ್ಮ ಹೆಸರಿಗೆ ತಕ್ಕಂತೆ ಪುರಾತನ ಕಾಲದಿಂದಲೂ ಸಾಗಿ ಬಂದಿರುವ ಸೃಷ್ಟಿ, ವರ್ಣನೆ, ಸಾಂಕೇತಿಕ ಕಟ್ಟುಕತೆ, ರೂಪಕ, ಸಂಪ್ರದಾಯ, ಮತ ಸಮಾಜ ನಿಯಮ ಮುಂತಾದವುಗಳ ಜನಪ್ರಿಯ ನಿರೂಪಣೆಗಳು. ಇದೇ ಪುರಾಣಗಳ ಮೂಲೋದ್ದೇಶ. ಉಚ್ಚತವಾದ ಆಧ್ಯಾತ್ಮಕ ಹಾಗೂ ದಾರ್ಶನಿಕ ಸತ್ಯಗಳನ್ನು ಕಥೆ, ವಾಕ್ಯನ, ಸಂಖೇತ, ಪವಾಡ, ದೃಷ್ಟಾಂತಗಳ ಮೂಲಕ ಜನ ಸಾಮಾನ್ಯರಿಗೆ ತಿಳಿಯ ಪಡಿಸುವುದೇ ಪುರಾಣಗಳ ಗುರಿ (ಹಿರೇಮಠ ಆರ್.ಸಿ. (ಸಂ). ಗುಬ್ಬಿ ಮಲ್ಲಣಾರ್ಯ ನಿರಚಿತ ವೀರಶೈವಾಮೃತ ಪುರಾಣ ಭಾಗ ೧, ಪು. ೧೬ ಪುರಾಣ), ಐತಿಹ್ಯ ಮತ್ತು ಪವಾಡಗಳ ಸರಮಾಲೆ, ವಾಸ್ತವ ಮತ್ತು ಆವಾಸ್ತವಗಳ ಒಂದು ಸಮೃದ್ಧ ಮೊತ್ತವಾಗಿ 'ಜ್ಞಾನ'ದ ಕೇಂದ್ರ ಸ್ಥಾನವನ್ನು ಪಡೆದುಕೊಂಡಿರುತ್ತದೆ. ಇಲ್ಲಿಯ 'ಜ್ಞಾನ' ವಾಸ್ತವ ಸ್ವರೂಪದ್ದೇ ಅಥವಾ ಅವಾಸ್ತವ ಸ್ವರೂಪದ್ದೋ ಎನ್ನುವುದು ಮುಖ್ಯವಾಗುತ್ತದೆ. ಹೀಗಾಗಿ ಪುರಾಣಕ್ಕೆ ಜ್ಞಾನವೇ ಜೀವಾಳವಾಗುತ್ತದೆ ಜ್ಞಾನವೇ ಆರಾಧನ ಶಕ್ತಿಯಾಗುತ್ತದೆ. ಐತಿಹ್ಯ ನೆಲಕ್ಕೆ ಹತ್ತಿರವಾದುದು. ಪವಾಡ ಆಕಾಶಕ್ಕೆ ಹತ್ತಿರವಾದ್ದು ಎಂದರೆ, ಒಂದು ಲೌಕಿಕ ಜಗತ್ತನ್ನು ಪ್ರತಿನಿಧಿಸಲು

ಪ್ರಯತ್ನಿಸುದರೆ ಮತ್ತೊಂದು ಅಲೌಕಿಕ ಜಗತ್ತನ್ನು ಪ್ರತಿನಿಧಿಸಲು ಪ್ರಯತ್ನಿಸುತ್ತಿರುತ್ತದೆ. ಹೀಗಾಗಿ ಪವಾಡ ಮತ್ತು ಐತಿಹ್ಯಗಳ ಮಧ್ಯಂತರ ಜಗತ್ತಿನಲ್ಲಿ ಪುರಾಣ ವಿಹರಿಸುತ್ತದೆ ಎಂದು ಹೇಳಬಹುದು. ಪವಾಡ ಅಥವಾ ಐತಿಹ್ಯಗಳು ಪ್ರಮುಖವಾಗಿ ಒಂದೇ ಆಶಯವನ್ನು ಹೊಂದಿರುತ್ತದೆ. ಹೀಗಾಗಿ ಪವಾಡಗಳ ಸ್ವರೂಪದ ಪುರಾಣ ಕೃತಿಗಳಿಗೆ ಹಾಗೆಯೇ ಐತಿಹ್ಯ ಸ್ವರೂಪವುಳ್ಳ ಕಾಲಗಳು ಇವೆ. ಪುರಾಣ, ಜ್ಞಾನವನ್ನೇ ಆರಾಧಿಸುವ ಶಕ್ತಿಯಾಗಿರುವುದರಿಂದ ಎಲ್ಲ ಬಗೆಯ ಜ್ಞಾನವನ್ನು ತನ್ನ ತೋಳು ತೆಕ್ಕೆಯಲ್ಲಿ ಹಿಡಿಯಲು ಸದಾ ಪ್ರಯತ್ನಿಸುತ್ತದೆ. ಹಾಗಾಗಿ ಪುರಾಣ ಧಾರ್ಮಿಕ ನೀತಿತತ್ವ ಬೋಧಕವಾಗಿದ್ದು, ಅದು ಸಮಾಜದ ಪಾಮರರನ್ನು ತನ್ನ ಕಪಿಮುಷ್ಠಿಯೊಳಗೆ ಸೇರಿಸುವ ಹುನ್ನಾರ ಅದರದು ಎಂದೇ ಹೇಳಬೇಕಾಗುತ್ತದೆ.

ಪ್ರತಿಯೊಂದು ಧರ್ಮದಲ್ಲೂ ಪುರಾಣಕ್ಕೆ ಬೇರೆ ಬೇರೆ ಮನ್ನಣೆ ಸಿಗುತ್ತದೆ. ಹಿಂದೂಗಳಲ್ಲಿ ಪುರಾಣಕ್ಕೆ ಇರುವ ಮನ್ನಣೆ ಮುಸ್ಲಿಂರಲ್ಲಿ ಇಲ್ಲ. ಅಥವಾ ಕ್ರೈಸ್ತರಲ್ಲಿ ಸಹ ಇಲ್ಲ ಎಂದು ಹೇಳಬಹುದು. ಯಾವುದೇ ಕಾಲದಲ್ಲಿ ಯಾವುದೇ ದೇಶದ ಜನಸಮೂಹದಲ್ಲಿ ಒಂದೇ ವಿಧದ ಒಂದೇ ಮಟ್ಟದ ಜೀವನ ಕ್ರಮ ಅನುಸರಿಸುತ್ತಿರುವುದಿಲ್ಲ. ಎಷ್ಟು ಬಗೆಯ ಜೀವನ ಕ್ರಮಗಳು ಇವೆಯೋ ಅಷ್ಟು ಬಗೆಯ ಸಂಸ್ಕೃತಿಗಳು ಇರುತ್ತವೆ. ಯಾವ ಸಂಸ್ಕೃತಿ ಪ್ರಬಲವಾಗಿರುತ್ತದೋ, ಯಾವ ಧೋರಣೆಗಳು ಬದುಕನ್ನು ಮುಖ್ಯವಾಗಿ ರೂಪಿಸುತ್ತದೋ, ಅದು ಪುರಾಣಗಳ ತಿರುಳನ್ನು ನಿರ್ಧರಿಸುತ್ತದೆ. ಬೇಟೆ ಅಥವಾ ಆಹಾರ ಸಂಗ್ರಹಣೆ ಬದುಕಿನ ಮುಖ್ಯ ವಿಧಾನವಾಗಿದ್ದ ಸಮಾಜಗಳಲ್ಲಿ ಪ್ರಪಂಚ ಹೇಗೆ ಹುಟ್ಟಿತು ಎಂಬ ಪುರಾಣ ಪ್ರಾಣಿಗಳ ಹುಟ್ಟು, ಬೇರೆ ಇವಕ್ಕೆ ಪ್ರಾಮುಖ್ಯ ನೀಡುತ್ತದೆ. ವ್ಯವಸಾಯ ಮುಖ್ಯವಾದ ಸಮಾಜದ ಪುರಾಣಗಳಲ್ಲಿ ಬೇಸಾಯದ ಕೆಲಸಗಳಿಗೆ ಪ್ರಾಮುಖ್ಯತೆ ಸಲ್ಲುತ್ತದೆ. ಧಾರ್ಮಿಕ ತತ್ವ ನಿದರ್ಶನಗಳ ಸಂಗತಿಗಳನ್ನು ಅತ್ಯಂತ ಪ್ರಾಚೀನ ಕಾಲದಿಂದ, ಕಾಲದ ಆರಂಭದಿಂದ ಅಥವಾ ಅನಾದಿಯಿಂದ ಬೆಳೆದು ಬಂದಂತೆ ಚಿತ್ರಿಸುತ್ತವೆ. ನಮ್ಮ ದೇಶದಂತಹ ಅನಂತ ಮುಖಿ ದೇಶದಲ್ಲಿ ಪುರಾಣಗಳನ್ನು ತೀರ ಸರಳವಾಗಿ ವಿವರಿಸುವುದು ಕಷ್ಟದ ಕೆಲಸವಾಗಿದ್ದು, ಅದು ಬಹುಮುಖಿ ಧೋರಣೆಯನ್ನು ಪ್ರತಿಪಾದಿಸುವಂತೆ ಕಂಡರೂ ಅದರ ಒಳಸತ್ವ ಮಾತ್ರ ಏಕಮುಖಿಯಾಗಿರುತ್ತದೆ.

ಆಚರಣೆಗಳು ಆಡಿ ತೋರಿಸಿದರೆ, ಪುರಾಣಗಳು ಹೇಳಿ ತೋರಿಸಿದರೆ ಅದೇ ಸಂಗತಿಯನ್ನು ಮಾತಿನ ರೂಪದಲ್ಲಿ, ವಸ್ತು ರೂಪದಲ್ಲಿ ಗ್ರಹಿಸುವ ಪ್ರಯತ್ನವನ್ನು ಕಾಣುತ್ತವೆ. ಎಲ್ಲ ಧಾರ್ಮಿಕ ಸಂಪ್ರದಾಯಗಳಲ್ಲೂ ಪವಿತ್ರ ವಸ್ತುಗಳನ್ನು ಬಹಳಷ್ಟು ಧಾರ್ಮಿಕ ಸಂಪ್ರದಾಯಗಳಲ್ಲಿ ಪವಿತ್ರ ಮೂರ್ತಿಗಳನ್ನು ಕಾಣುತ್ತವೆ. ಆಚರಣೆ ಮತ್ತು ಪುರಾಣಗಳು ಹೇಗೆ ಸಂಕೇತಗಳು ಹಾಗೆಯೇ ವಸ್ತು ರೂಪಗಳು ಸಾಮಾನ್ಯವಾದದ್ದಕ್ಕಿಂತ ಅಸಮಾನ್ಯವಾದದ್ದನ್ನು ಪ್ರತಿನಿಧಿಸುತ್ತವೆ.

"ಪುರಾಣ ಮತ್ತು ಮಹಾಕಾವ್ಯವಾಗಿದ್ದ ಒಳ ಆತ್ಮಸ್ಥೂಲವಾಗಿ ಒಂದೇ ಆಗಿ ಕಂಡು ಬಂದರೂ ಪುರಾಣಗಳ ವಸ್ತು ಮತ್ತು ರೀತಿಯಲ್ಲಿ ಸೂಕ್ಷ್ಮ ವ್ಯತ್ಯಾಸ ಕಂಡುಬರುತ್ತದೆ. ಇತಿಹಾಸ ಅಥವಾ ಮಹಾಕಾವ್ಯಗಳಲ್ಲಿ ಕಥನವಸ್ತು ಪ್ರಮುಖವಾದರೆ, ಪುರಾಣಗಳಲ್ಲಿ ತಾತ್ವಿಕ ಮತ್ತು ಧಾರ್ಮಿಕ ಅಂಶಗಳು

ಪ್ರಾಮುಖ್ಯತೆಯನ್ನು ಪಡೆದಿವೆ. ಪುರಾಣ ಮತ್ತು ಮಹಾಕಾವ್ಯಗಳು ವೇದಗಳ ಸರಿಸಮಾನವಾಗಿ ನಿಂತಿವೆ" (ಹಿರೇಮಠ ಆರ್. ಸಿ. ಸಂ. ಗುಬ್ಬಿ ಮಲ್ಲಣಾರ್ಯ ವಿರಚಿತ ವೀರಶೈವಾಮೃತ ಪುರಾಣ ಪು. ೧೪). ಹಾಗೇ ನೋಡದರೆ ಧರ್ಮ ಕಥೆಗಳಿಗೂ ಪುರಾಣಗಳಿಗೂ ಇರುವ ಸಂಬಂಧ ಕೂಡ ತುಂಬಾ ಜಟಿಲವಾದದ್ದು. ಕ್ರೈಸ್ತರ ಹಳೆ ಒಡಂಬಡಿಕೆಯಲ್ಲಿ ಪೌರಾಣಿಕ ಎಂಬಂಥ ಆಶಯಗಳಿವೆ. ಆದರೂ ಹೊಸ ಒಡಂಬಡಿಕೆಯ ಎಷ್ಟೋ ಭಾಗಗಳಲ್ಲಿ ಪುರಾಣ ಕಥೆಗಳನ್ನು 'ನಾಸ್ತಿಕ'ವೆಂದೂ ಕರೆಯಲಾಗಿದೆ. ಯಾವುದೇ ಧರ್ಮ ತನ್ನ ಗ್ರಂಥದ ಅಕ್ಷರ ಸತ್ಯಕ್ಕೆ ನಿಷ್ಠುರವಾಗಿ ಬದ್ಧವಾದಾಗ ಪುರಾಣ ಕಲ್ಪನೆ ಬೆಳೆಯುವುದು ಕಷ್ಟವೆಂದೇ ತೋರುತ್ತದೆ.

ಪುರಾಣಗಳು ವೇದಾರ್ಥದ ವಿಸ್ತಾರಕ್ಕಾಗಿ ರಚಿಸಲ್ಪಟ್ಟವು. ವೇದಗಳ ಮಂತ್ರಗಳು ಗೂಢವಾಗಿರುವುದರಿಂದ, ಸೂತ್ರವಾಗಿರುವುದರಿಂದ ಅವುಗಳ ವಿಸ್ತಾರ ವಿವೇಚನೆ ಜನಸಾಮಾನ್ಯರಿಗಾಗಿ ಅವಶ್ಯಕವೆನಿಸಿತು. ಈ ಕಾರಣದಿಂದಲೇ ಪುರಾಣಗಳು ಪ್ರಚಲಿತವಾದವು. ವೇದಗಳಂತೆ ಪುರಾಣಗಳ ಪರಂಪರೆಯೂ ಪ್ರಾಪ್ತವಾಗುತ್ತದೆ. ಕರ್ಮಜಗತ್ತಿನಲ್ಲಿ ಜನರು ಯಾವ ಕರ್ಮಗಳಿಂದ ಕಲ್ಯಾಣದ ಸಿದ್ಧಿ ಎಂಬುದು ತಿಳಿಯದೆ ಮೂಢರ ಕರ್ಮಗಳಿಂದ ಬಿಡಿಸಿ ಅವರ ಕಲ್ಯಾಣಕ್ಕಾಗಿ ಈ ಪುರಾಣಗಳ ರಚನೆಯಾಯಿತು ಎಂದು ಪುರಾಣಕಾರರು ಹೇಳಿದ್ದಾರೆ. ಇವುಗಳ ಆಧ್ಯಾತ್ಮಿಕ ಜಗತ್ತಿನ ನಿತ್ಯಸತ್ಯವನ್ನು ಒಳಗೊಂಡ ಈಶ್ವರೀವಾದದ ಭಂಡಾರಗಳಾಗಿವೆ. ಹಿಂದೂಧರ್ಮದ ಆಕರ ಗ್ರಂಥಗಳಾದ ಪುರಾಣಗಳಲ್ಲಿ ಹದಿನೆಂಟು ಪುರಾಣಗಳು ಪ್ರಸಿದ್ಧವಾಗಿವೆ. ಪುರಾಣಗಳಲ್ಲಿ ಮುಖ್ಯವಾಗಿ ಅವತಾರವಾದ ಹಾಗೂ ದೇವತಾ ಉಪಾಸನೆಯ ಪ್ರತಿಪಾದನೆಯಿದೆ. ಪುರಾಣಗಳಲ್ಲಿ ಮುಖ್ಯವಾಗಿ ಶಿವ, ಶಕ್ತಿ, ಗಣೇಶ, ವಿಷ್ಣು ಹಾಗೂ ಸೂರ್ಯ ಮುಂತಾದ ದೇವತೆಗಳ ಉಪಾಸನೆಯ ವಿಸ್ತೃತವಾದ ವರ್ಣನೆಯಿದೆ. ವೇದಗಳಲ್ಲಿ ಹೇಳಿದ ಆದರ್ಶಗಳನ್ನು ಪ್ರತಿನಿಧಿಸುವ ನಾಯಕರ, ಋಷಿಮುನಿಗಳ ಹಾಗೂ ಅವರ ವಂಶದ ವಿಸ್ತಾರವಾದ ಚರಿತ್ರೆಯಿಂದ ತುಂಬಿದ ಪುರಾಣಗಳು ಲೋಕದಲ್ಲಿ ಧರ್ಮ ಪ್ರಸಾರದ ಮಾಧ್ಯಮವಾಗಿ ಪ್ರತಿಬಿಂಬಿಸಲ್ಪಟ್ಟಿವೆ.

ಶಿಷ್ಟ ಹಾಗೂ ಜನಪದ ಸಾಹಿತ್ಯದಲ್ಲೂ ಪುರಾಣಗಳು ಬಳಕೆಯಲ್ಲಿವೆ. ಆದರೆ ಮಲೆಯ ಮಹದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ ಇವರ ಕುರಿತಾಗಿ ಬಂದ ವ್ಯಕ್ತಿ ನಿಷ್ಠ ಕಾವ್ಯಗಳೆಲ್ಲ 'ಐತಿಹ್ಯ' ಮತ್ತು 'ಪವಾಡ'ಗಳಿಂದಲೇ ಬಂಧಿತವಾಗಿವೆ. ಅತಿಮಾನುಷ ಶಕ್ತಿಯೂ ಪ್ರಕಟಗೊಳ್ಳುತ್ತದೆ. ಇವೆಲ್ಲವೂ ಜನಪದ ಪುರಾಣದ ವ್ಯಾಪ್ತಿಗೆ ಒಳಪಡುತ್ತವೆ. ಹಾಗೆಯೇ ಎಲ್ಲಮ್ಮ, ಮಾರಮ್ಮ ದೇವತೆಗಳಿಗೆ ಸಂಬಂಧಿಸಿದ ಜನಪದ ಪುರಾಣಗಳೂ ಇವೆ. ಆದರೆ ಇವುಗಳನ್ನು ಶಿಷ್ಟ ಪುರಾಣದಲ್ಲಿ ರೇಣುಕೆ, ಮಾರಿಕಾಂಬೆ ಎಂಬ ಹೆಸರಿನಿಂದ ಗುರುತಿಸಲಾಗುತ್ತದೆ. ಇಂತಹ ಕೃತಿಗಳು ಕಾವ್ಯ ಸ್ವರೂಪದಲ್ಲಿ ಇರುವುದರಿಂದ ಇವುಗಳನ್ನು ಪುರಾಣ ಕಾವ್ಯಗಳೆಂದೇ ಕರೆಯಲಾಗುವುದು.

ಈ ರೀತಿಯ ಜನಪದ ಪುರಾಣ ಹಾಗೂ ಐತಿಹ್ಯಗಳು ಧಾರ್ಮಿಕ ವಿಚಾರ ಕೇಂದ್ರವಾಗಿಸಿಕೊಂಡು ರೂಪಗೊಳ್ಳದೆ, ಸಾಮಾಜಿಕ ವ್ಯವಸ್ಥೆಯನ್ನು ಕೇಂದ್ರವಾಗಿಟ್ಟುಕೊಂಡಿರುತ್ತವೆ. ಶಿಷ್ಟಪುರಾಣ ದಂತಕತೆಗಳಿಗಿಂತ

ಪ್ರಗತಿಪರವಾದ ಆಶಯವನ್ನು ಹೊಂದಿರುತ್ತವೆ. ಈ ಆಶಯಗಳು ಮೂಲದಲ್ಲಿ ಪ್ರಗತಿಪರವಾಗಿದ್ದಾಗಲೂ ಕಾಲಾಂತರದಲ್ಲಿ ಬೇರೊಂದು ಆಶಯ ಸೇರಿ ಮತ್ತೆ ಸಾಮಾಜಿಕ ವ್ಯವಸ್ಥೆಯನ್ನು ಭದ್ರಪಡಿಸುವ ಸ್ವರೂಪವನ್ನು ತಾಳುತ್ತವೆ. ಜನಪದರಲ್ಲಿ ಬಳಕೆಯಿರುವ ಮಾರಮ್ಮ ಮತ್ತು ಎಲ್ಲಮ್ಮನ ಐತಿಹ್ಯಗಳನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ. ಮಾರಮ್ಮ ಬ್ರಾಹ್ಮಣ ಹೆಣ್ಣಾಗಿ ಬಂದರೆ ಆಕೆಯನ್ನು ಮದುವೆಯಾಗುವವನು ಮಾದಿಗರ ಅಥವಾ ಚಮ್ಮಾರ ವ್ಯಕ್ತಿ. ಹಾಗೆಯೇ ಮಾದಿಗಳಾದ ಎಲ್ಲಮ್ಮಳನ್ನು ಮದುವೆಯಾದ ವ್ಯಕ್ತಿ ಬ್ರಾಹ್ಮಣ ಹೀಗೆ ಅನುಲೋಮ ಹಾಗೂ ವಿಲೋಮ ಎರಡೂ ಬಗೆಯ ವಿವಾಹಗಳಿಂದ ಕೂಡಿದ ಐತಿಹ್ಯಗಳಿವೆ. ಆದರೆ ಜನಪದರಿಂದ ಶಿಷ್ಟ ಪುರಾಣಕ್ಕೆ ಹೋದಾಗ ಅದರ ಇತಿಹಾಸವೆ ತಿರುಚು ಮುರುಚಾಗಿರುವ ಬದಲಾವಣೆ ಕಾಣುತ್ತದೆ.

ಮೇಲಿನ ಜನಪದ ಪುರಾಣಗಳ ವ್ಯವಸ್ಥೆಯನ್ನು ಒಟ್ಟಾಗಿ ಪರಿಗಣಿಸಿದಾಗ ಸಾಮಾಜಿಕ ವ್ಯವಸ್ಥೆಯೇ ಮುಖ್ಯವಾಗುತ್ತದೆ ಎಂದು ಹೇಳಿದರೂ, ಆರಂಭದ ಪ್ರಗತಿಪರ ವಿಚಾರಗಳು ಸಾಮಾಜಿಕ ವ್ಯವಸ್ಥೆಯ ಪರವೂ ಆಗಿರದೇ, ಧರ್ಮಪರವೂ ಆಗಿರದೆ, ಅವು ಮನುಷ್ಯರ ಬದುಕಿನ ನಿಲುವಿಗೆ ಮೌಲ್ಯಗಳಾಗಿರುತ್ತವೆ. ಜನಪದ ಪುರಾಣಗಳಿಗೆ ಒಂದು ವ್ಯವಸ್ಥಿತವಾದ ಚೌಕಟ್ಟು ಇರುವುದು ಕಂಡುಬಂದಿಲ್ಲ. ಇಲ್ಲಿ ಹಲವಾರು ಪಾಠಾಂತರಗಳು, ರೂಪಾಂತರಗಳು ದೊರೆಯುತ್ತವೆ. ಕೆಲವೊಮ್ಮೆ ಆಶಯಗಳನ್ನೆ ಪಲ್ಲಟಗೊಳಿಸಿಕೊಂಡ ಬಗೆಯನ್ನು ಕಾಣುತ್ತಿವೆ. ಆದರೆ ಶಿಷ್ಟ ಪುರಾಣಗಳಲ್ಲಿ ಮೂಲ ಆಶಯ ಬದಲಾಗಿದೆ. ಹಿಗ್ಗುವ ಅಥವಾ ಕುಗ್ಗುವ ಬಗೆಯನ್ನು ಗುರುತಿಸಿಕೊಳ್ಳುತ್ತೇವೆ. ಜನಪದ ಪುರಾಣಗಳಲ್ಲಿ ತಂತ್ರಕ್ಕೆ ಅಷ್ಟೇ ಮಹತ್ವವಿದ್ದು ವೈವಿಧ್ಯತೆಯಿರುತ್ತದೆ. ಮೌಲಿಕತೆಯನ್ನು ಮನುಷ್ಯರ ಬದುಕಿನ ಅಂಗಳಕ್ಕೆ ಯಾವುದೇ ವಿಧಿ ವಿಧಾನಗಳ ತಾರತಮ್ಯವಿಲ್ಲದೆ ದಿಢೀರನೆ ಬಂದು ಬಿಡುತ್ತವೆ.

ಮೂಲಭೂತವಾದಿಗಳು ಪುರಾಣಗಳನ್ನು ಉನ್ನತಿಗೇರಿಸಿದರು. ಅವುಗಳ ಸದ್ಗುಣಗಳ ಸಂತ ದಯೆ, ಸಮಾನತೆ, ಏಕತೆಯನ್ನು ಒತ್ತಿಹೇಳವ ಒಂದು ಮಾಧ್ಯಮ ಇದಕ್ಕೆ ತನ್ನದೇ ಆದ ಒಂದು ಪರಿಭಾಷೆಯಿದೆ. ಈ ಪರಿಭಾಷೆಯ ಮೂಲಕ ಅದನ್ನು ನಿಭಾಯಿಸುತ್ತದೆ. ಹೀಗೆ ನಿಭಾಯಿಸಿಕೊಂಡು ಕಾಲಕಾಲಕ್ಕೂ ಮುಂದುವರೆಯಲು ವೈಜ್ಞಾನಿಕ ಸರಕನ್ನು ಒದಗಿಸುತ್ತದೆ. ಈ ಹಿಂದೆ ಹೇಳಿದಂತೆ ಪುರಾಣ ಜ್ಞಾನದ ಆರಾಧನೆಯನ್ನು ಮಾಡುವ ಗುಣ ಹೊಂದಿರುವುದರಿಂದ ವೈಜ್ಞಾನಿಕ ಗುಣವನ್ನು ವಿರೋಧಿಸದೆ ತನ್ನದೇ ಆದ ಮಾಧ್ಯಮಗಳ ಮೂಲಕ ಅದನ್ನು ಅರಗಿಸಿಕೊಂಡು ಎದ್ದು ನಿಲ್ಲುತ್ತದೆ. ಮುಖ್ಯವಾಗಿ ಪುರಾಣಗಳು ಧರ್ಮ ಪ್ರಧಾನವಾದ ಜೀವನವನ್ನೇ ಪ್ರತಿಪಾಧಿಸುತ್ತವೆ. ಆದರೆ ನಿಸರ್ಗದೊಡನೆ ಅತ್ಯಗತ್ಯ ನೇರ ಸಂಬಂಧವನ್ನು ಕಾಣಬಹುದು. ಪುರಾಣಗಳಲ್ಲಿ ಬರುವ ವಿವಿಧ ಪಕ್ಷಿ, ಪ್ರಾಣಿಗಳು ಆರೋಪಿತವಾದ ದೈವತ್ವದ ಕಲ್ಪನೆಯು ಸಕಲ ಜೀವರಾಶಿಗಳು ಪರಮಾತ್ಮನ ಅಭಿವ್ಯಕ್ತ ರೂಪಗಳೇ ಎಂಬುದನ್ನು ದೃಢಪಡಿಸುತ್ತವೆ. ಗರುಡ, ಇಲಿ, ಹಂಸ, ಎತ್ತು ಮುಂತಾದ ಪಶುಪಕ್ಷಿಗಳು, ಗಿಡಮರಗಳು ಇಲ್ಲಿ ವಸ್ತುವಾಗಿವೆ. ನೀರು ಬದುಕಿನ ಮೂಲದ್ರವ್ಯ ಮತ್ತು ಎಲ್ಲ ಸಂಸ್ಕೃತಿಗಳ ತೊಟ್ಟಿಲು ನಮ್ಮ ದೇಶದ

ಪುರಾಣಗಳಲ್ಲಿ ಹೇಗೋ, ಉತ್ತರ ಅಮೇರಿಕೆಯ 'ಆದಿ' ಪುರಾಣ ನಿರೂಪಣೆಗಳಲ್ಲೂ ನೀರು ಮುಖ್ಯವಾದ ಅಂಶವಾಗಿದೆ. ಕೊನೆಯಿಲ್ಲದ ಶಕ್ತಿಯ ಆಗರವೆಂದೂ, ಬದುಕಿನ ಮೂಲದ್ರವವೆಂದು ನೀರನ್ನು ಕಾಣಲಾಗಿದೆ. ಈ ರೀತಿಯ ನಿಸರ್ಗದ ಆರಾಧನೆಗೆ ಪುರಾಣಗಳು ಸಹಕಾರಿಯಾಗಿವೆ ಎಂದೇ ಹೇಳಬಹುದು.

ಹೀಗೆ ಮುಂದುವರೆದು ಮನುಷ್ಯನ ಹುಟ್ಟಿಗೂ, ವಿಶ್ವದ ಹುಟ್ಟಿಗೂ ದೈವತ್ವದ ಪರಿಕಲ್ಪನೆಗೂ ಪುರಾಣ ಕಥೆಗಳು ಉತ್ತರವನ್ನು ಬಿತ್ತರಿಸುವಲ್ಲಿ ಮತ್ತು ಅವುಗಳನ್ನು ಜನ ಪಾಮರರ ಅರಿವಿಗೆ ತಳಕುಹಾಕುವಂತೆ ಮಾಡುತ್ತವೆ. ಧಾರ್ಮಿಕ ಅಂಧಶ್ರದ್ಧೆಯನ್ನು ಸಾರುವುದು, ಆ ಮೂಲಕ ಪ್ರತಿಬಂಧನದ ತತ್ವದಡಿಯಲ್ಲಿ ಮನುಷ್ಯನನ್ನು ಬಂಧಿಸಿ ನಿರ್ಲಿಪ್ತ ಸ್ಥಿತಿಗೆ ತಲುಪಿಸಿರುತವೆ.

ಪುರಾಣವೆಂದರೆ ಅವೈಜ್ಞಾನಿಕವಾದುದು, ಅವಾಸ್ತವವಾದುದು ಎನ್ನುವುದು ಒಂದು ವಾದ. ಪುರಾಣದಲ್ಲಿಯೂ ವೈಜ್ಞಾನಿಕ ಮನೋಧರ್ಮವಿದೆ ಎನ್ನುವುದು ಇನ್ನೊಂದು ವಾದ. ಒಮ್ಮೊಮ್ಮೆ ಪುರಾಣಗಳು ಅವಾಂತರದೊಳಗೆ ಬದುಕನ್ನು ಒದ್ದಾಡಿಸಿ ಬಿಡುತ್ತವೆ. ಪುರಾಣಗಳು ಏಕಮುಖಿ ಧೋರಣೆಗೆ ಹೆಚ್ಚು ಒತ್ತು ನೀಡುವುದರಿಂದ ಅವುಗಳ ನಿರಾಕರಣೆಯನ್ನು ಅನೇಕ ಪ್ರಗತಿಪರ ಚಿಂತಕರು ನಿರ್ಲಕ್ಷಿಸಿದರು. ಇದಕ್ಕೆ ಅಲ್ಲಮ ಪ್ರಭುವಿನ ಒಂದು ವಚನ ಉಲ್ಲೇಖಾರ್ಹವೆನಿಸುತ್ತದೆ.

"ವೇದವೆಂಬುದು ಓದಿನ ಮಾತು
ಶಾಸ್ತ್ರವೆಂಬುದು ಸಂತೆಯ ಸುದ್ದಿ
ಪುರಾಣವೆಂಬುದು ಪುಂಡರ ಗೋಷ್ಠಿ
ತರ್ಕವೆಂಬುದು ತಗರ ಹೋರಟೆ
ಭಕ್ತಿವೆಂಬುದು ತೋರುಂಬ ಲಾಭ
(ತ.ಸು. ಶಾಮರಾಯ ಕನ್ನಡ ಸಾಹಿತ್ಯ ಚರಿತ್ರೆ ಪು. ೫೦.)

ಮಾನವೀಯ ತತ್ವಗಳಿಗೆ ಒಳಪಡದೆ ಕೇವಲ ಕೆಲವೇ ಜನರ ಅದರಲ್ಲೂ, ಪಂಡಿತ ವರ್ಗದ ಬದುಕಿಗೆ ಹತ್ತಿರವಾದಂತಹ ಧೋರಣೆಗಳನ್ನು ಸಾರುವ ಉಪದೇಶವಿರುವ ಇಂತಹ ವೇದ, ಆಗಮ, ಪುರಾಣ, ಶಾಸ್ತ್ರ, ತರ್ಕ ಇವುಗಳನ್ನು ಅಸಡ್ಡೆ ಪಡಿಸಲಾಯಿತು. ಹನ್ನೆರಡನೆಯ ಶತಮಾನದಲ್ಲಿಯಂತು ಸಂಪೂರ್ಣವಾಗಿ ಅವುಗಳನ್ನು ತೆಗೆದು ಹಾಕಿದರು ಎಂಬುದಕ್ಕೆ ಮೇಲಿನ ವಚನವೇ ಸಾಕ್ಷಿಯಾಗಿದೆ. ಏಕಮುಖಿ ಚಿಂತನೆಗಿಂತ ಬಹುಮುಖೀ ಮತ್ತು ಸಮಾಜಮುಖಿ ಚಿಂತನೆಗೆ ಹೆಚ್ಚು ಇಂಬುಕೊಡಲಾಗಿತ್ತು. ಸಂಪ್ರದಾಯ ಬದ್ಧ ಧಾರ್ಮಿಕ ವಿಧಿ ವಿಧಾನಗಳನ್ನು ನವಿರಾಗಿ ಜನವರ್ಗದ ಮೇಲೆ ಹೇರುತ್ತಿತ್ತು. ಪುರಾಣಗಳು ಇವುಗಳನ್ನು ಬೆಸುಗೆಯ ಕೊಂಡಿಯಂತೆ ಪರಸ್ಪರ ವಿಲೀನತೆಗೆ ಹೆಚ್ಚು ಜ್ಞಾನವನ್ನು ಬರೆಯುತ್ತಿದ್ದವು. ಹಾಗಾಗಿಯೇ ಪುರಾಣಗಳು ಬಿಡಿಸುವುದಕ್ಕಿಂತ ಬಂಧಿಸುವುದೇ ಅದರ ಮೂಲಧ್ಯೇಯವೆಂದು ತೋರುತ್ತದೆ.

ಸಂಪ್ರದಾಯ ಬದ್ಧ ಧಾರ್ಮಿಕ ಮೂಲಭೂತವಾದಿಗಳು ಅವುಗಳ ಸಂಬಂಧಕ್ಕೆ ಜೋತುಬಿದ್ದರು. ಆದರೆ ಪ್ರಗತಿಪರ ವಿಚಾರವಾದಿಗಳು ಪುರಾಣಗಳನ್ನು ಉದ್ಧಟತನವೆಂಬಂತೆ ನಿರ್ಲಕ್ಷಿಸಿ ಬಹುಜನರ

ಧೋರಣೆಗಳಿಗೆ ಸಮೀಪ್ಯವಾಗಿಲ್ಲದ ಸಿದ್ಧಾಂತಗಳನ್ನು ಕೈಬಿಟ್ಟರು. ಅದಕ್ಕಾಗಿಯೇ ಅಂದಿಗಿಂತಲೂ ಇಂದು ಅವುಗಳ ಮಹತ್ವ ಕಡಿಮೆಯಾಗಿರುವುದು ತಿಳಿದುಬರುತ್ತದೆ.

**ಲೀಲಾಮೃತ ಪುರಾಣ**

ಪಂಡಿತ ವೈ ನಾಗೇಶಶಾಸ್ತ್ರಿಗಳು ಈ ಪುರಾಣವನ್ನು ಬರೆದಿದ್ದಾರೆ. ಅದರಲ್ಲಿ ಹದಿನೇಳು ಸಂಧಿಗಳಿದ್ದು, ಏಳುನೂರ ಎಪ್ಪತ್ತೇಳು ಪದ್ಯಗಳಿಂದ ಕೂಡಿದ ಬೃಹತ್ ಗ್ರಂಥವಾಗಿದೆ. ಇದು ಚೇಳಗುರಿಕೆ ಎರ್ರಿತಾತನ ಕುರಿತು ಬೆಳಕು ಚೆಲ್ಲುವ ಕೃತಿಯಾಗಿದ್ದು ಸು. ೧೯೬೭ರಲ್ಲಿ ರಚಿಸಲಾಗಿದೆ. ಅಂದಿನಿಂದ ಇಂದಿನವರೆಗೂ ಹಲವಾರು ಬದಲಾವಣೆ ಕಂಡುಬಂದಿರುವುದು ಸಹ ಗಮನಿಸತಕ್ಕದ್ದಾಗಿದೆ. ಪ್ರತಿಯೊಂದು ಸಂಧಿಗಳಲ್ಲಿ ಎರ್ರಿತಾತನ ಕುರಿತಾದ ವಿವಿಧ ವಿಷಯಗಳನ್ನು ಬರೆಯಲಾಗಿದ್ದು, ಪ್ರತಿಯೊಂದು ಸಾಲುಗಳು ಭಾಮಿನಿ ಷಟ್ಪದಿಯಲ್ಲಿ ರಚನೆಗೊಂಡಿವೆ. ಎರ್ರಿತಾತನ ಬಾಲ್ಯದ ಕನಸು ಕನವರಿಕೆಗಳು ಯೌವ್ವನದ ಬ್ರಾಂತಿಯೊಳಗೆ ಬೆಸೆದು ಮಹಾನಿರ್ವಾಹಣಾಧಿಕಾರಿಯಾಗಿ ಸಂಚರಿಸಿದ ಆತನ ಅನುಭಾವಿಕ ಪರಂಪರೆಯನ್ನು ಸೆರೆಹಿಡಿದು ಮಹೋನ್ನತ ಹಾಗೂ ಸೂಕ್ತ ನಿರೂಪಣೆಯನ್ನು, ವಿಶಿಷ್ಟವಾದ ಮನೋಭೂಮಿಕೆಯಲ್ಲಿ ಸಿದ್ಧವಾದ ಅಪರೂಪದ ಕೃತಿಯಾಗಿದೆ.

ಪ್ರತಿಯೊಂದು ಸಂಧಿಯ ಪ್ರಾರಂಭದಲ್ಲಿ ಆ ಸಂಧಿಯ ಒಳನೋಟಗಳನ್ನು ಸೂಕ್ಷ್ಮವಾಗಿ ಗ್ರಹಿಸಲಾಗಿದ್ದು, ಪ್ರತಿಯೊಂದು ಸಂಧಿಯ ಚರಣಗಳು ವಿವಿಧ ವರ್ಣನೆಗಳೊಂದಿಗೆ ತುಲನಾತ್ಮಕವಾಗಿ ಓದುಗರ ಲೋಕಕ್ಕೆ ಅಲೌಕಿಕತೆಯ ಸವಿಯನ್ನು ಪೂರ್ಣವಾಗಿ ಅಲ್ಲದಿದ್ದರೂ ಹಿತವಾಗಿ ಉಣಬಡಿಸುವಲ್ಲಿ ನೆರವಾಗುತ್ತದೆ. ಜೋಳದರಾಶಿ ದೊಡ್ಡನಗೌಡರು ತಿಳಿಸಿದಂತೆ ತಾವು ಕಂಡು ಕೇಳಿದ ಶ್ರೀ ಎರ್ರಿಸ್ವಾಮಿಗಳ ಲೀಲೆಗಳನ್ನು ಶ್ರೀ ವೈ.ಯಂ ಚಂದ್ರಯ್ಯನವರು ಬಹುಪರಿಶ್ರಮದಿಂದ ಸಂಗ್ರಹಿಸಿದ್ದನ್ನು ಶ್ರೀ ಶಿವ ಚನ್ನಬಸವೇಶ್ವರರು ತಮ್ಮ ಪ್ರತಿಭಾಮಯವಾದ ಶೈಲಿಯಲ್ಲಿ ಶ್ರೀ ಎರ್ರಿಸ್ವಾಮಿಗಳ ಲೀಲಾವಿಲಾಸ ಎನ್ನುವ ಗ್ರಂಥವನ್ನು ಪ್ರಕಟಿಸಿದ್ದಾರೆ. ಈ ಗ್ರಂಥದ ಆಧಾರದಿಂದ ಹಾಗೂ ಶ್ರೀ ವೈಯಂ ಚಂದ್ರಯ್ಯನವರ ಕ್ಷೇತ್ರಕಾರ್ಯದ ಆಧಾರಗಳನ್ನು ಗಮನದಲ್ಲಿಟ್ಟುಕೊಂಡು ಶಾಸ್ತ್ರಿಗಳು 'ಲೀಲಾಮೃತ' ಎಂಬ ಪುರಾಣವನ್ನು ರಚಿಸಿದ್ದಾರೆ.

"ವೈ.ಯಂ.ಚಂದ್ರಯ್ಯನವರ ಸಂಗ್ರಹ ವಿಷಯಗಳನ್ನು ಬಹುಮಟ್ಟಿಗೆ ಇದ್ದುದಿದ್ದಂತೆ ಚಿತ್ರಿಸಲು ಯತ್ನಿಸಿದ ಶಿ.ವ.ಚನ್ನಬಸವೇಶ್ವರರಿಗಿಂತಲೂ ಶಾಸ್ತ್ರಿಗಳು ಎರ್ರಿಸ್ವಾಮಿಗಳ ಲೀಲಾವಿಲಾಸಗಳ ಕಥನದಲ್ಲಿ ಉತ್ತರಭಾಗವನ್ನು ಇದ್ದುದಿದ್ದಂತೆ ಚಿಕ್ಕ ವ್ಯತ್ಯಾಸಗಳೊಂದಿಗೆ ಸಂಗ್ರಹಿಸಿ ನಿರ್ಣಯಾತ್ಮಕವಾಗಿ ಹೇಳಲಾಗಿದ್ದ ಪೂರ್ವಭಾಗವನ್ನು ಮಾತ್ರ ಉತ್ತರಭಾಗದ ಲೀಲಾವಿಲಾಸಗಳ ವಿಕಾಸಕ್ಕೆ ಅನುಗುಣವಾದ ಪುರಾಣದ ಕಥಾವಿಧಾನಕ್ಕೆ ಅವಶ್ಯಕವಾದ ಕಲ್ಪನೆಯೊಂದಿಗೆ ಕಥೆಯನ್ನು ಕಟ್ಟಿಕೊಂಡಿದ್ದಾರೆ". (ಲೀಲಾಮೃತ ಪುರಾಣ, ನಾಗೇಶಶಾಸ್ತ್ರಿಗಳು ಪು.೦೪) ಈ ಸಂವಿಧಾನವ ಕಲ್ಪನೆಯೆಂದು ಕರೆಯುವುದಕ್ಕಿಂತ ಲೀಲಾವಿಲಾಸದಲ್ಲಿ ಸಂದೇಹಗಳಾಗಿ, ಉಕ್ತವಾದ ವಿಷಯಗಳನ್ನು ಸಂಗ್ರಹಿಸಿ ಕಥೆಗೊಂದು ಕ್ರಮವನ್ನು ನೀಡಿದ್ದಾರೆಂದು ಹೇಳುವುದು

ಸೂಕ್ತ. ಇದ್ದುದೆಲ್ಲವನ್ನು ಬಿಟ್ಟು ಇಲ್ಲದುದರಯೆಡೆಗೆ ನಡೆದ ಎರ್ರಿತಾತನ ಯೋಗದ ಚರಿತ್ರೆಯನ್ನು ವಿಶ್ಲೇಷಣಾತ್ಮಕ, ವಿಮರ್ಶಾತ್ಮಕತೆಯ ಗೋಜಿಗೆ ಹೋಗದೆ ಅನುಭಾವಿಗಳ ಪರಂಪರೆಯ ವಸ್ತು ವಿಶ್ಲೇಷಣೆಗೆ ಹೆಚ್ಚು ಮಹತ್ವನೀಡಲಾಗಿದೆ. ಸಂಸಾರ ಪರಿತ್ಯಾಗಿಯಾಗಿ ಆಧ್ಯಾತ್ಮಿಕ ಜಗತ್ತಿನೊಂದಿಗೆ ಅನುಭಾವಿಗಳಾದ ಎರ್ರಿತಾತರು ಹೇಗೆ ಪ್ರಭಾವ ಹಾಗೂ ಪ್ರೇರಣಶಕ್ತಿಗಳಾಗಿದ್ದರು ಪರ ಇಹ ಜ್ಞಾನದ ತುಡಿದ ಹಾಗೂ ದುಡಿತವನ್ನು ಅನುಭವಿಸಿದ ಪರಿಯನ್ನು ಇಲ್ಲಿ ಚಿತ್ರಿಸಲಾಗಿದೆ.

ಮಹಾತ್ಮರ ಕುರಿತ ಪೂರ್ವಚರಿತ್ರೆಯು ಗೌಣವಾಗಿರುವುದರಿಂದ ಇದು ಹೀಗೆ ಎಂದು ಖಂಡಿತ ಎಂಬ ಅಭಿಪ್ರಾಯ ತಾಳುವುದು ಕಷ್ಟವಾಗುತ್ತದೆ. ಏಕೆಂದರೆ ಮಹಾತ್ಮರ ಮಹಿಮಾ ಚರಿತ್ರೆಯ ಭಾಗವೇ ಬಹುತೇಕವಾಗಿ ರಚನೆಗೊಂಡಿರುವುದು. ಆವಧೂತರಷ್ಟೇ ಅಲ್ಲ, ಪ್ರತಿ ಔನತ್ಯ ಪಡೆದ ಮಹಿಮರೆಲ್ಲರು ಇದೇ ಸಾಲಿನಲ್ಲಿ ಬರುತ್ತಾರೆ. ಪೂರ್ವಚರಿತ್ರೆಯು ಎಷ್ಟೇ ಶಾಸ್ತ್ರೀಯವಾಗಿ ರಚನೆಗೊಂಡರು ಸಹ ಅದು ಅಂತೆಕಂತೆಗಳ ಇತಿಹಾಸ ಸೇರುವುದು ಸಾಮಾನ್ಯವಾಗಿದೆ. ಮೃತ್ಯುಂಜಯಪ್ಪಗಳ ಸ್ತೋತ್ರ, ಶಿವಸ್ತೋತ್ರ, ಶಿವೆಯ ಸ್ತೋತ್ರ, ಗಣಪತಿಸ್ತೋತ್ರ, ಅಷ್ಟಾವರಣಸ್ತೋತ್ರ, ಪಂಚಾಚರ ಸ್ತೋತ್ರ ಹಾಗೂ ಷಟ್‌ಸ್ಥಲ ಸ್ತೋತ್ರಗಳಿಂದ ಪ್ರಾರಂಭವಾಗುವ ಈ ಗ್ರಂಥವು ಪುರಾಣ ಗ್ರಂಥಗಳ ಎಲ್ಲಾ ರಚನಾ ವಿನ್ಯಾಸವನ್ನು ಹೊಂದಿದೆ ಎಂದು ಹೇಳಬಹುದು.

ಎರ್ರಿತಾತನ ಚರಿತ್ರೆಯು ಎರಡನೆಯ ಸಂಧಿಯಿಂದ ಪ್ರಾರಂಭವಾಗುತ್ತದೆ. ನಿರ್ಮಲಾಂಬಿಕೆ ಮತ್ತು ನೀಲಕಂಠರಾಧ್ಯ ಎಂಬ ಇಬ್ಬರು ಶಿವಭಕ್ತರಲ್ಲಿ ನಂಜುಂಡಯ್ಯನು ಜನಿಸಿದಾಗ ವಿಧಿ ವಿಧಾನಗಳಂತೆ ನಾಮಕರಣ ಮಾಡುತ್ತಾರೆ.

"ಬಳಿಕೆ ತಂದೆಯು ಜಾತಕರ್ಮಂ

ಗಳನೆಸಗಿತತ್ತನುಜನಿಗೆ ಗುರು

ತಿಲಕರಿಂ ಶಿವಲಿಂಗಧಾರಣವಾಗಿಸುತೆ ಮತ್ತಂ

ನಲಿದು ನಂಜುಂಡಯ್ಯನೆಂಬು

ಜ್ವಲಿತ ನಾಮವನಿದಿಸಿ ಸಂತಸ

ಗೊಳಿಸಿದನು ಸಸ್ಕರಿಸಿ ತತ್ಪತಿಗಾಗಮಿಸಿದವರಂ (ಲೀಲಾಮೃತ, ಪಂಡಿತ, ವೈ ನಾಗೇಶಶಾಸ್ತ್ರಿ, ಸಂಧಿ ೦೨, ಪು.೩೬) ಮಾನವರಾಗಿ ಜನಿಸಿದ ಧಾರ್ಮಿಕ ಮಹಾ ಪುರುಷರು, ದೇವಮಾನವರಾಗಿ ಬೆಳೆಯುತ್ತ ಜನಸಾಮಾನ್ಯರ ಕಣ್ಣಲ್ಲಿ ಅವತಾರ ಪುರುಷರಾಗಿ ಪರಿಣಮಿಸುವುದುಂಟು. ನಂತರದ ಜನತೆ ಇಂಥವರಿಗೆ ದೈವತ್ವದ ಪಟ್ಟಕಟ್ಟಿ ದೇವಾಲಯ ನಿರ್ಮಿಸಿ ಪೂಜಿಸುವುದನ್ನು ಭಾರತೀಯ ಪರಂಪರೆಯಲ್ಲಿ ಕಾಣುತ್ತೇವೆ.

ಈ ಗ್ರಂಥವು ನಂಜುಂಡಯ್ಯನು ಬಾಲ್ಯದ ನೆನೆಪುಗಳೊಂದಿಗೆ ಬೆಳೆದು ದೊಡ್ಡವನಾಗಿ ಸಂಸಾರದ ನೊಗವನ್ನು ಹೊತ್ತವನು, ಇದ್ದಕ್ಕಿದ್ದಂತೆ ಎಲ್ಲವನ್ನೂ ತೊರೆದು ನಿಸ್ಸಾಂಗಿಯಾಗಿ ತಂದೆ ತಾಯಿಗಳ,

ಮಡದಿ ಮಕ್ಕಳ ಪರಿವೆಯಿಲ್ಲದವನಂತೆ ಮನಃ ಬಂದ ಕಡೆಗೆ ಪಯಣ ಬೆಳೆಸಿದ್ದನ್ನು ನಿರೂಪಿಸುತ್ತದೆ. ಗಗನಾಯಕ ಬಳಿ ಯೋಗದೀಕ್ಷೆಯ ಸಿದ್ಧಿಗಳನ್ನು ಅರ್ಥೈಸಿಕೊಳ್ಳುವ ಬಗೆಯನ್ನು ಚಿತ್ರಿಸುತ್ತದೆ. ಮುಂದುವರೆದು ನಂಜುಂಡಯ್ಯನ ಅಲೌಕಿಕತೆಯ ಹುಡುಕಾಟದ ಪರಿಯನ್ನು ತಿಳಿಸುತ್ತದೆ. ಎಲ್ಲರ ಸಂಗ ಸಾಕೆಂದು. ತನ್ನ ಬದುಕಿನ ಎಲ್ಲಾ ಹಂತಗಳನ್ನು ಮೀರಿದವನಂತೆ ಉನ್ಮತ್ತನಾಗಿ ಮೈಸೂರು ಸೀಮೆಯನ್ನು ಬಿಟ್ಟು ಬಂದಿರುವುದರ ಒಟ್ಟು ಚಿತ್ರಣವನ್ನು ನೀಡಲು ಸಹಕಾರಿಯಾಗಿದೆ.

ನಂಜುಂಡಯ್ಯನು ಸಂಸಾರ ಪರಿತ್ಯಾಗಮಾಡಿ ಹೋಗುವುದನ್ನು ಸಂಧಿ ಐದರಲ್ಲಿ ಮನೋಜ್ಞವಾಗಿ ಚಿತ್ರಿಸಲಾಗಿದೆ. ಬದ್ಧಜೀವಿಯ ಆತ್ಮವು ಪಂಜರದ ಪಕ್ಷಿಯಂತಿದ್ದರೆ ಜ್ಞಾನಿಯ ಆತ್ಮವು ಗೂಡಿನ ಪಕ್ಷಿಯಂತೆ ಇರುವುದು. ಗೂಡಿನ ಪಕ್ಷಿ ತನಗೆ ಬೇಕೆನಿಸಿದಾಗ ಹಾರಿಹೋಗುವ ಸ್ವಾತಂತ್ರ್ಯ ಹೊಂದಿರುವಂತೆ ಮುಕ್ತಾತ್ಮನ ಆತ್ಮ ಬೇಕೆನಿಸಿದಾಗ ದೇಹದ ಬಂಧನ ದಾಟಿಕೊಂಡು ಹೊರಗೆ ಹೋಗಬಲ್ಲದು. ಇದನ್ನೇ ಉರಿಲಿಂಗ ದೇವರು "ಮುಕ್ತಿಯಂತ ಹೋಹರು" ಎಂದಿದ್ದಾರೆ. ಚೆನ್ನಾಗಿ ಪಕ್ವವಾದ ಕೊಬ್ಬರಿ ತುಂಬಾ ಸಹಜವಾಗಿ ಚಿಪ್ಪು ಒಡೆದಾಗ ಜಾರುವುದು, ಮಾಗಿದ ಹಣ್ಣು ತೊಟ್ಟಿನಿಂದ ಸಹಜವಾಗಿ ಕಳಚುವುದು. ಹಾಗೆಯೇ ಮುಕ್ತಾತ್ಮಚೇತನವೂ ಮರ್ತ್ಯತೋರದ ಯಾತ್ರೆಯನ್ನು ನಿಶ್ಚಿಂತವಾಗಿ ಪೂರೈಸುವುದು.

"ಮರೆದು ಸನ್ಯಾಸಿಯವೊಲೀ ಮಂ
ದಿರವ ತೊರೆಯುತ್ತಾವುದೋ ಜನ
ವಿರಹಿತ ಸ್ಥಲದಲ್ಲಿ ಸೇರುವ ಬಯಕೆ ಸರಿಯಲ್ಲಂ
ಇರುತ ಮನೆಯೋಳ್ ನಿನ್ನವರ ಸಲೆ
ಪೊದೆಯುತಂ ಲಿಂಗಾಂಗಿ ಧರ್ಮಾ
ಚರಣದಿಂ ಚಿರಶಾಂತಿ ಪಡೆಯಲದೇ ಸಮಾಧಿ ಫಲಂ (ಸಂಧಿ ೫ ಪು.೫೪)

ಇಲ್ಲಿನ ಪ್ರತಿಯೊಂದು ಪದ್ಯವು ಕರತಲಮಲಕವಾದಂತೆ ಮೂಡಿಸುತ್ತಾ ಭವದಬಂಧನದಿಂದ ಜಾರುವುದನ್ನು ಗಮನಿಸಬಹುದಾಗಿದೆ. ಮಡದಿಯ ತಂದೆ ತಾಯಿಗಳು ಇಲ್ಲೇ ಇದ್ದು ಶಿವನಿಗೆ ಭಕ್ತಿಯನ್ನು ತೋರು ಎಂದು ಹೇಳಿದರೆ ನಂಜುಂಡಯ್ಯನು ವಿರಹದ ಬೇಗೆಯಲ್ಲಿ ಸಂಪೂರ್ಣ ತಲ್ಲೀನನಾದವನಂತೆ ಚಡಪಡಿಸುತ್ತಿರುವುದು ತಿಳಿಯಪಡಿಸಲಾಗಿದೆ. ಇಲ್ಲಿನ ಸಂದರ್ಭಕ್ಕೆ ತಕ್ಕಂತೆ ಅಕ್ಕಮಹಾದೇವಿಯ ಒಂದು ವಚನವನ್ನು ಗಮನಿಸಿದಾಗ ಈ ರೀತಿಯಾಗಿ ಭಾಸವಾಗುತ್ತದೆ.

ಸಂಸಾರ ಬೆಂಬಿಡದೆ ಕಾಡುತ್ತಿದೆಯಲ್ಲಾ ಏವೆನೇವೆನಯ್ಯಾ
ಅಂದಂದಿನ ದಂದುಗಕ್ಕೆ ಏವೆನೇವೆನಯ್ಯ
ಬೆಂದ ಒಡಲ ಹೊರವುದಕ್ಕೆ ನಾನಾರೆ

ಚೆನ್ನ ಮಲ್ಲಿಕಾರ್ಜುನಯ್ಯ ಕೊಲ್ಲು ಕಾಯಿ ನಿಮ್ಮ ಧರ್ಮ

ಹಿಂಡನಗಲಿ ಹಿಡಿವಡೆದ ಕುಂಜರ

ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯ

ಬಂದನಕ್ಕೆ ಬಂದ, ಗಿಳಿ ತನ್ನ ಬಂಧುವ ನೆನೆವಂತ ನೆನೆವೆನಯ್ಯಾ

ಕಂದ ನೀನಿತ್ತ ಬಾ ಎಂದು ನೀವು ನಿಮ್ಮಂದವ ತೋರಯ್ಯ

ಚೆನ್ನ ಮಲ್ಲಿಕಾರ್ಜುನಾ

ಸಂಸಾರವೆಂಬ ಹಗೆ ನನಗೂ ತಪ್ಪದೆ ಅರಸಿಕೊಂಡು ಬರುತ್ತಿದೆ. ನನ್ನನ್ನು ಕೊಲ್ಲುತ್ತಿದೆ. ನೀನಾಡಿಸಿದಂತೆ ನಾನು 'ಕೋಲ ತುದಿಯ ಕೋಡಗನಂತೆ' ಇರುವವರೆಗೆ ಆಡಿದ್ದೇನೆ. ಬಾರದ ಭವಂಗಳಲ್ಲಿ ಬಂದಿದ್ದೇನೆ. ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದಿದ್ದೇನೆ. ಏರಿಲ್ಲದ ಗಾಯದಲ್ಲಿ ನೊಂದಿದ್ದೇನೆ. ಇನ್ನು ಸಾಕು ಮಾಡು ಎನ್ನದೇವಾ ಚನ್ನಮಲ್ಲಿಕಾರ್ಜುನ ನಿಮ್ಮ ಹೊದ್ದುವಂತೆ ಮಾಡಾ ನಿಮ್ಮಧರ್ಮದ ಎಂದು ಸಂಸ್ಕಾರದ ವಿರಹವನ್ನು ತೋಡಿಕೊಂಡಿದ್ದಾಳೆ.

ಹೀಗೆ ಶರಣರು ಉಪಮಾತೀತರು ಉಳಿದೆಲ್ಲ ಜನರಂತೆ ಬಾಲ್ಯದಲ್ಲಿ ಹಣ್ಣು ಹಣ್ಣು ಎಂದು ಯೌವ್ವನದಲ್ಲಿ ಹೆಣ್ಣು ಹೆಣ್ಣು ಎಂದು, ಮಧ್ಯಮಾವಸ್ಥೆಯಲ್ಲಿ ಹೊನ್ನು ಹೊನ್ನು ಎಂದು, ವಾಧಿಕ್ಯದಲ್ಲಿ ಮಣ್ಣು ಮಣ್ಣು ಎಂದು ಹಂಬಲಿಸದೆ ದೇವನೇ ಸರ್ವಸ್ವವೆಂದು ಹಂಬಲಿಸುವರು, ಸಾಧಿಸುವರು. ಸಮಾಜಕ್ಕಾಗಿ ಹಗಲಿರುಳು ದುಡಿಯುವರು, ಮಡಿಯುವರು. ಹೋರಾಟ, ದ್ವೇಷ, ಅಹಂಕಾರ ಮುಂತಾದವುಗಳಿಗೆ ಇಂಬುಕೊಡದೆ ದೇವನಿಗೆ ಶರಣಾಗಿ ಬಾಳುವ ಉಪಮಾತೀತರು ಆಗಿದ್ದಾರೆ. ಇಂಥಹ ಹಲವಾರು ಸಂಧಿ ಸಂದೇಹಗಳು ಈ ಕೃತಿಯಲ್ಲಿ ನಿರೂಪಿಸಲಾಗಿದೆ.

ಎಲ್ಲಿಹೋಗುವುದೆಂಬ ನಿರ್ಣಯ

ವಿಲ್ಲದಯೆ ಹೊರಬಿದ್ದ ತದ್ಬುಧ

ವಲ್ಲಭನ ಹಿಡಿದಳೆದು ತರಲಿಂತಾ ನೆಲದ ಗುಣವು

ಅಲ್ಲಿ ತಾಂಸಲೆ ನೆಲೆಸಿ ಪಕ್ಕದ

ಹಳ್ಳಿಗಳ ಲಿಂಗಾಂಗಿ ನಿಲಯಗ

ಳಲ್ಲಿ ಭಿಕ್ಷಾನ್ನಕ್ಕೆ ತೆರಳುತ್ತಿದ್ದ ಸಮಯದೊಳ್ (ಸಂಧಿ ೫, ಪು.೫೭)

ಅಲ್ಲಲ್ಲಿ ತಿರುಗಾಡುತ್ತಿದ್ದ ನಂಜುಂಡನೆಂಬ ಹೆಸರು ಮಾಯವಾಗಿ ನಂಜುಂಡಯ್ಯ, ನಂಜುಂಡಶಾಸ್ತ್ರಿ, ನಿರಂಜನಾಮೂರ್ತಿ ತಾತ, ಎರ್ರಿ ತಾತ ಹೀಗೆ ಪಕ್ವವಾದ ಹೆಸರು ಆತನಿಗೆ ರೂಢಿಗತವಾಗಿ ಬಂದವು. ಮುಂದೆ ಎರ್ರಿತಾತನ ಆವಧೂತ ಸ್ಥಿತಿಯ ಪ್ರಾರಂಭದ ಸ್ಥಿತಿಯನ್ನು ಈ ಕೃತಿಯು ಉಲ್ಲೇಖಿಸಿರುವುದು ಹೀಗೆ.

ತಲೆಯ ಜಡೆಯೊಳು ಗಡ್ಡಮೀಸೆಗೆ

ಳೊಳು ಸುಧೀರ್ಘ ನಂಖಗಳೊಳು ಶಿವ

ಕಳೆಯೊಳ ಸವಾ ಸ್ವಾಮಿಯಂತಿಕ ಕೂರವರು ಬಂದು

ಅಲಘುಭಕ್ತಿಯೊಳೆರಗಿ ಬಯಸಿದ

ಫಲವನೀಯುವ ಯೋಗಿ ಯಾರೋ

ನೆಲಸಿದುದು ಬಂದಿಲ್ಲಿನೆಮ್ಮಯ ಪುಣ್ಯವೆಂದರಿದು (ಸಂಧಿ ೫, ಪು.೬೩)

ಲೌಕಿಕದಲ್ಲಿ ಏಕವೂ ಉಂಟು, ಅನೇಕವೂ ಉಂಟು. ಏಕದ ಅನುಭಾವಕ್ಕಿಂತ ಅನೇಕದ ಅನುಭಾವ ಸುಲಭ. ಭೇದವೂ ಉಂಟು ಅಭೇದವೂ ಉಂಟು. ನಮಗೆ ಭೇದ ಜ್ಞಾನ ಆಗುವಷ್ಟು ಮಟ್ಟಿಗೆ ಅಭೇದ ಜ್ಞಾನ ಅಷ್ಟು ಸುಲಭವಲ್ಲ. ನಮ್ಮ ಮುಂದೆ ಭೇದಗಳು ಅಸಂಖ್ಯಾವಾಗಿವೆ. ನಾವು ಭೇದಭಾವಗಳ ಜೊತೆಗೆ ಬದುಕಿದ್ದೇವೆ. ಇಂತಹ ಭೇದಗಳನ್ನು ಬಿಟ್ಟಿರುವವನನ್ನೆ ಆವಧೂತ ಎಂದು ಕರೆಯುತ್ತೇವೆ. ಜಾತಿ, ವರ್ಣ, ಮೇಲು, ಕೀಳು, ನೀಚ, ಉಚ್ಚ, ನಾನು, ನೀನು ಇಂಥವೆಲ್ಲ ಭೇದಗಳೇ. ಇಂಥ ಭೇದಗಳು ಇಲ್ಲದವನು ಯಾರೋ ಅವನು ಅವಧೂತ" (ಮಲ್ಲೇಪುರಂ ಜಿ.ವೆಂಕಟೇಶ: ಅರಿವಿನ ಕಥನ ಪು.೦೪) ಆವಧೂತ ಸ್ಥಿತಿಯ ಒಟ್ಟು ಪರಿಕಲ್ಪನೆಯ ನೆಲೆಯೊಳಗೆ ಮೇಲಿನ ಚರಣವು ಸಾಕ್ಷಾತ್ಕರಿಸಿದಂತಿದೆ. ಎರ್ರಿತಾತನ ಪೂರ್ಣಾವಧೂತ ಸ್ಥಿತಿಯ ಹೊಂದುವುದಕ್ಕೆ ಮುಂಚಿನ ಆತನ ನಿರ್ಲಿಪ್ತತೆಯ ಬದುಕಿನಿಂದ ಬಹುದೂರ ಸರಿದುದನ್ನು ಚಿತ್ರಿಸಲಾಗಿದ್ದು, ಮೌಕಿಕ ನಿಲುವಿನೊಂದಿಗೆ ಪುರಾಣ ಪ್ರಧಾನವಾದ ರೀತಿಯಲ್ಲಿ ಬಹು ಸರಳ ಶೈಲಿಯಲ್ಲಿ ಜನ ಸಾಮಾನ್ಯರ ಮನಸ್ಸಿಗೆ ನಿಲುಕುವಂತೆ ವಿಡಂಬಿಸಲಾಗಿದೆ.

ನಂಜುಂಡನು ಯೋಗಿಯಾಗಿ ಬೆಳೆದು, ಮಾತು ಮಿತವಾದಾಗ ಅವನ ಸ್ಥಿತಿಯನ್ನು ಗಮನಿಸಿ ಮೂಲತಃ ಇದ್ದ ನಂಜುಂಡಯ್ಯ ಎಂಬ ಹೆಸರು ಹೋಗಿ ನಂಜುಂಡಶಾಸ್ತ್ರಿ, ನಂಜುಂಡಯ್ಯ, ನಿರಂಜನಮೂರ್ತಿ ಎಂಬ ಹೆಸರುಗಳು ಪ್ರಾಪ್ತವಾಗುವುದನ್ನು ಹಂತಹಂತವಾಗಿ ಈ ಕೃತಿಯು ನಿರ್ವಚಿಸುತ್ತದೆ. ಇದು ಆತನ ಸ್ಥಿತಿಗೂ ಹೊಂದಿಕೆಯಾದುದನ್ನು ಇಲ್ಲಿ ಗಮನಿಸಲಾಗಿದೆ. ಬೆಳಗುಪ್ಪೆ, ವೆಲಗೊಂಡ ಮೊದಲಾದ ಊರುಗಳಲ್ಲಿ ಮಾಡಿದ ಈತನ ಲೀಲೆಗಳಿಂದ ಜನರು ಈತನನ್ನು ತಾತನೆಂದು ಆತನ ವಿಚಿತ್ರ ವರ್ತನೆಯನ್ನು ಕಂಡು 'ಎರ್ರಿ' ಎಂದು ಕರೆಯುತ್ತಿದ್ದರೆಂದು ಈ ಗ್ರಂಥವು ತಿಳಿಸುತ್ತದೆ. ಮುಂದುವರೆದು ಆತನು ಚೇಳಗುರಿಕೆಗೆ ಬರುವ ಮುಂಚೆಯೇ ಅನೇಕ ಲೀಲೆಗಳನ್ನು ತೋರಿದನೆಂದು ತಿಳಿಸಲಾಗಿದೆ. ಬೆಳಗುಪ್ಪೆಯಲ್ಲಿ ಎರ್ರಿತಾತನು ತರುಣೆಯ ಬಂಜೆತನವನ್ನು ನಿವಾರಿಸಿದ್ದು ಈ ರೀತಿಯಾಗಿ ಬಿಂಬಿತವಾಗಿದೆ.

"ತೆರಳ ಮುಂದಕೆ ನೇಡಿದವರ

ಚ್ಚರಿಯ ನಾಂತಿರಪತ್ತರುಣಿತನ

ಗಿರುವ ದುಃಖದ ಬಂಜೆತನ ಮಂಪರಿಹರಿಸಿಕೊಂಡು

ತರುಳನೋರ್ವನ ಪಡೆದಳೊಂದೇ

ಬರಿಸದೊಳಗೀತರದ ವಿಸ್ಮಯ

ಕರದ ಲೀಲೆಯನೆಸಗಿದಾತನು ಗೈದುದೇನೆನಲು" (ಸಂಧಿ ಏಳು ಪು.೨೨ರಲ್ಲಿ) ಮುಂದುವರೆಯುತ್ತಾ ಈ ಕೃತಿಯಲ್ಲಿ ಅನೇಕ ಪವಾಡಗಳನ್ನು ಕುರಿತು ವಿವರಿಸಲಾಗಿದೆ. ಕಾಲದಿಂದ ಕಾಲಕ್ಕೆ ಕಾಣಿಸಿಕೊಂಡ ಆಚಾರ್ಯರು, ಪ್ರವಾದಿಗಳು ಹಾಗೂ ಸಂತರ ಜೀವನ ಚರಿತ್ರೆಯು ಪವಾಡಗಳಿಂದ ಕೂಡಿರುತ್ತದೆ. ಇಲ್ಲಿನ ಒಂದು ಹಾವನ್ನು ಬಂಗಾರವಾಗಿಸಿದ ಪವಾಡವನ್ನು ಈರೀತಿಯಾಗಿ ನೋಡಬಹುದು.

"ಗುರುಪೊರೆದ ವೋಲರ್ಚಿಸುತಕ

ಟ್ಟಿರುವ ಕಂಬಳಿಗಂಟ ಬಚ್ಚಿದೊ

ಡುರಗವದು ಚೆಂಬೊನ್ನ ಗಟ್ಟಿಯದನಿಸಿ ಕಂಗೊಳಿಸೇ

ಹರಿದಿಸನು ಬಡತನವನೆನ್ನಯ

ಮೊರೆಯ ಕೇಳ್ದಾಮಹಿಮನಾತನು

ಕರುಣೆಯುಳ್ಳವನೆಂದು ಲಕ್ಷ್ಮಮ್ಮನು ಕಳೆದಳೊಲವಾ (ಸಂಧಿ ೨, ಪು.೮೦)

ಮುಂದೆ ಮುಸ್ಸೂರಿಗೆ ಬಂದು ಕಲ್ಲು ಬಸವನನ್ನು ನಡೆದಾಡುವಂತೆ ಮಾಡಿದ್ದು, ತಾತನು ಸಮಾಧಿ ಮಗ್ನನಾಗಿರಲು ಕಳ್ಳರು ಬಂದು ತಮ್ಮ ದರೋಡೆಗೆ ಸಹಾಯಕವಾಗುವಂತೆ ನುಡಿ ಎಂದು ಒತ್ತಾಯ ಮಾಡಿದರು. ನಂತರ ಕಳ್ಳರು ತಲೆಯ ಮೇಲೆ ಕಾಯಿಹೊಡೆದರೂ ಅವರಿಗೆ ಯಾವುದೇ ಅಘಾತ ಸಂಭವಿಸದೇ ಕಳ್ಳರ ತಲೆಗೆ ಪೆಟ್ಟಾಗಿ ರಕ್ತ ಸೋರುವಂತೆ ಮಾಡಿದರು. ಈ ರೀತಿಯ ಹಲವಾರು ಪವಾಡಗಳನ್ನು ಚೇಳಗುರಿಕೆ ಗ್ರಾಮಕ್ಕೆ ಬರುವ ಮುಂಚೆ ಮಾಡಿದರು ಎಂಬುದು ಈ ಕೃತಿಯ ಮೂಲಕ ತಿಳಿಯಪಡಿಸಲಾಗಿದೆ. ಸಂಕ್ಷಿಪ್ತವೆಂಬಂತೆ ಕೆಲವು ಮಾತ್ರ ಕೃತಿಯ ವಿಶ್ಲೇಷಣೆ ದೃಷ್ಟಿಯಿಂದ ಮಾಡಲಾಗಿದ್ದು ಉಳಿದ ಹಾಗೂ ಎಲ್ಲಾ ರೀತಿಯ ಪವಾಡಗಳನ್ನು ಮುಂದಿನ ಪವಾಡ ಸಾದೃಶ್ಯ ಎಂಬ ಭಾಗದಲ್ಲಿ ಚರ್ಚಿಸಲಾಗುವುದು.

ಹೀಗೆ ಎರ್ರಿತಾತನು ಬೆಳಗುಪ್ಪೆ, ವೆಲಂದೂರು, ಉರವಕೊಂಡ, ವೆಲಕೊಂಡ, ಚಿಕಲಗುರಿಕೆ ಮುಂತಾದ ಗ್ರಾಮಗಳಲ್ಲಿ ಸಂಚರಿಸಿ ಚೇಳಗುರಿಕೆ ಗ್ರಾಮಕ್ಕೆ ಬರುವುದನ್ನು ಕ್ರಮಬದ್ಧವಾಗಿ ಈ ಕೃತಿಯಲ್ಲಿ ಉಲ್ಲೇಖಿಸಲಾಗಿದೆ. ಸಂಧಿ ಹತ್ತರಲ್ಲಿ ಎರ್ರಿತಾತನು ಚೇಳಗುರಿಕೆಯಲ್ಲಿ ಬರುವುದಕ್ಕಿಂತ ಮುಂಚೆ ಮಲ್ಲಪ್ಪನ ಮಟ್ಟಿಯಲ್ಲಿ ಬಂದು ಹುಚ್ಚನಂತಿರುವುದು, ಗ್ರಾಮದ ಹಿರಿಯರು ಬಂದು ತಾತನವರನ್ನು ಗ್ರಾಮಕ್ಕೆ ಮೆರವಣಿಗೆ ರೂಪದಲ್ಲಿ ಕರೆದೊಯ್ದು ಅನೇಕ ಪೂಜಾ ವಿಧಿವಿಧಾನಗಳ ಮೂಲಕ ಗೌರವಿಸಿದ್ದು, ಇಲ್ಲಿಯೂ ಅನೇಕ ಪವಾಡಗಳನ್ನು ಮಾಡಿದ್ದು, ಹಾಗೂ ಮಠದಲ್ಲಿ ಅನೇಕ ರೀತಿಯ ಬೆಸಗೊಳ್ಳುವ ಕಾರ್ಯವೆಸಗಿದ್ದು ತನ್ನ ಶಿಷ್ಯ ಸಂಕುಲವನ್ನು ಪರೀಕ್ಷಿಸಿದ್ದು, ಬೆಳೆಸಿದ್ದು ಈ ರೀತಿಯ ಅನೇಕ ಕಾರ್ಯಗಳನ್ನು ಈ ಲೀಲಾಮೃತ ಪುರಾಣವು ಚಿತ್ರಿಸುತ್ತಾ ಹೋಗುತ್ತದೆ. ಶಿಷ್ಯನಾದ ಶಿವರಾಮಾವಧೂತನಿಗೆ ತುಮಕೂರಿನ ಚಕ್ಕುಲಿಗಳನ್ನು ತರಲು ತಿಳಿಸಿದಾಗ ಚೇಳಗುರಿಕೆಯಿಂದ ಕಾಲ್ನಡಿಗೆಯಲ್ಲಿ ತುಮಕೂರಿಗೆ ಹೋಗಿ ಚಕ್ಕಲಿ ತರುವುದು ಶಿಷ್ಯತ್ವ ಹಾಗೂ ಗುರುತ್ವಗಳ ನಡುವಿನ ವಿಧೇಯತೆ ದೀನತೆಭಾವವನ್ನು ತಿಳಿಸುತ್ತದೆ.

ಪುಟ್ಟಗೋಸಿಯದುಳಿದು ಮತ್ತೇಂ
ಬಟ್ಟೆಯಿಲ್ಲದೆ ತೆರಳುವಾತಗೆ
ಬಟ್ಟೆಯೋಳ್ ಬಿದ್ದೊಂದು ವಸನವು ಸಿಕ್ಕುದುದ ಗುರುವು
ಕೊಟ್ಟನೆನಗೆಂದರಿದು ಹಿಗ್ಗುತೆ
ಕಟ್ಟಿ ತದ್ವಸ್ತ್ರದೊಳು ಜೋಳಿಗೆ
ಯಿಟ್ಟು ಚಕ್ಕುಲಿಗಳ ನದರೊಳ್ಳೆ ತರಲು ನಿರ್ಧರಿಸಿ (ಸಂಧಿ ೧೨ ಪು.೧೩೮).

ತನಗೆ ರುಚಿಸಿದ ಚಕ್ಕುಲಿಗಳನು
ತಿನತಿನುತ ಜೋಳಿಗೆಯೊಳವುಗಳ
ಮನವಲದೆ ತಾನಿಟ್ಟುಕೊಂಡತಿ ಜವದೆ ಬರುತಿರ್ದು
ದಣಿದ ಕತದಿಂದಂದಿನಿರುಳ
ಲ್ಲನ ಘನಾತನು ನೆಲಸಿದನು ಮುಂ
ದಿನ ಪಯಣಮಂಬಿಟ್ಟು ಭೀಮ ಸಮುದ್ರ ವೆಂಬೂರೋಳ್ (ಸಂಧಿ ೧೨, ಪು.೧೪೯)

ಸಾಧಕ ಜೀವಿಯು ಸಾಧನೆಮಾಡುತ್ತಾ ಮುನ್ನಡೆಯುವನು. ದೇಹ, ಮನಸ್ಸುಗಳ, ಪ್ರಾಣಾತ್ಮಗಳ ಸ್ವಾಭಾವಿಕ ಗುಣಗಳನ್ನು ಒಂದೊಂದನ್ನಾಗಿ ಕಳೆದುಕೊಂಡು ಅವುಗಳಿಗೆ ಬದಲಾಗಿ ದೈವೀಗುಣಗಳನ್ನು ಅಳವಡಿಸಿಕೊಂಡು ಬಾಳುತ್ತಾನೆ.

ಮುಂದುವರೆದು ಎಲ್ರಿತಾತನು ಬೇಡಿದವರ, ಭಕ್ತ ಸಮೂಹಗಳ ಇಷ್ಟಾರ್ಥವನ್ನು ಈಡೇರಿಸಿದ್ದು. ಚೇಳಗುರಿಕೆ ಗ್ರಾಮದಲ್ಲಿ ಹರಡಿದ ಕಾಲರಾ ರೋಗವನ್ನು ನಿವಾರಿಸಿ ಮತ್ತು ಇದೇ ಗ್ರಾಮದಲ್ಲಿ ಮಾಡಿದ ಅನೇಕ ಲೀಲೆಗಳನ್ನು ಈ ಕೃತಿಯು ತಿಳಿಸುತ್ತದೆ. ತಾತನವರು ಶಿವೈಕ್ಯವಾದದ್ದು (ಜೀವಸಮಾಧಿ) ಮಠಕ್ಕೆ ಆಗಮಿಸಿದ ಗುರು ಜಂಗಮಾದಿಗಳ ಕುರಿತು ಉಲ್ಲೇಖಿಸಲಾಗಿದೆ. ಕೊನೆಯದಾಗಿ ಮಹಿಮಾಕಥನದ ಮಂಗಳ ಗೀತೆಯೊಡನೆ ಈ ಕೃತಿಯನ್ನು ಮುಗಿಸುತ್ತಾರೆ.

ಹೀಗೆ ಮಹಾತ್ಮರ ಬರವು, ಇರವು ವಿಶೇಷವಾಗಿರುವಂತೆ "ನಿರ್ಗಮನ ಸಹ ಅಷ್ಟೇ ವಿಶೇಷವಾಗಿರುತ್ತದೆ. "ಶರಣರ ಜೀವನವನ್ನು ಮರಣದಲ್ಲಿ ಕಾಣು" ಎಂಬ ನುಡಿಯಂತೆ ಮರಣವನ್ನೆದುರಿಸುವಲ್ಲಿ ಅವರು ವಿಶೇಷತೆಯನ್ನು ತೋರುವರು. ಹರಳಯ್ಯ, ಮಧುವಯ್ಯ, ತತ್ವಜ್ಞಾನಿ ಸಾಕ್ರೆಟಿಸ್ ಮುಂತಾದವರು ಅವರು ಶಿಕ್ಷೆಯನ್ನು ಸ್ವೀಕರಿಸಿ ಸಾಯುವ ಪ್ರಸಂಗ ಬಂದಾಗ ವಿಚಲಿತರಾಗದಿರುವುದನ್ನು ಕಾಣುತ್ತೇವೆ. ತತ್ತ್ವಭ್ರಷ್ಟರಾಗಿ ನೂರು ವರುಷ ಬಾಳುವುದಕ್ಕಿಂತಲೂ ತತ್ತ್ವನಿಷ್ಠರಾಗಿ ನಾಲ್ಕುದಿನ ಬಾಳಿದರಾಗದೆ? ಎಂಬ ನಿಲುವು ಅವರದು. ತಮ್ಮ ಕರ್ತವ್ಯದ ಪೂರೈಕೆಗಾಗಿ ದೇಹಧಾರಣೆ ಮಾಡಿಕೊಂಡು ಇರುವ ಅವರು ಮರ್ತ್ಯದ ಮಣಿಹ ಪೂರೈಸಿತು ಎಂದು ದೇವರಿಂದ ಕರೆಬರುತ್ತಿದ್ದಂತೆಯೇ ಸಂತೋಷದಿಂದ ದೇಹಬಿಡಲು ಅಣಿಯಾಗುವರು. ತೊಟ್ಟು ಬಿಟ್ಟು ಕಳಚಿದ ಹಣ್ಣು ಸಹಜವಾಗಿ ಜಾರುವಂತೆ, ಅವರ ಜೀವವು ಸಹಜವಾಗಿ

ಇಹಲೋಕ ತ್ಯಜಿಸಿ ಪರಲೋಕಕ್ಕೆ ಹಾರಿ ದೈವೀ ಸಾಕ್ಷಾತ್ಕಾರ ಹೊಂದುವುದು ಎಂಬುದು ಅವರ ಗಾಢ ವಿಶ್ವಾಸವೂ ಆಗಿದೆ.

ಮುಖ್ಯವಾಗಿ ಈ ಗ್ರಂಥದಲ್ಲಿ, ಅಲ್ಲಲ್ಲಿ ವಿಷಯಕ್ಕೆ ಸಂಬಂಧಿಸಿದ ಅಪರೂಪದ ಭಾವಚಿತ್ರಗಳನ್ನು ಸೇರಿಸಲಾಗಿದ್ದು, ಅವುಗಳನ್ನು ಪ್ರತಿಸಂಧಿಗೆ ಎಂಬಂತೆ ಪೂರಕವಾಗಿ ನೀಡಲಾಗಿದೆ. ಎರ್ರಿತಾತನ ಭಕ್ತಿಯ ಚಿತ್ರ, ಶ್ರೀಮಠದ ಕಛೇರಿ, ಮಠದ ವಸತಿಗೃಹಗಳು, ಶ್ರೀ ಎ.ಜಿ.ಶಾಮಣ್ಣ ಬೆಂಗಳೂರು, ಶ್ರೀಮಠದ ನಿರ್ಮಾಪಕರಾದ ಶ್ರೀ ತಿಕ್ಕಯ್ಯಾವಧೂತರು, ಅಲ್ಲಲ್ಲಿ ಆತನ ಪವಾಡ ಸಾದೃಶಗಳ ಚಿತ್ರಗಳು ಇಲ್ಲಿ ಬಿತ್ತರಿಸಲಾಗಿದೆ. ಕೊನೆಯದಾಗಿ ಈ ಪುರಾಣ ಕೃತಿಗೆ ಸಹಾಯ ಮಾಡಿದ ದಾನಿಗಳ ವಿವರವನ್ನು ಸಹ ಕೊಡಲಾಗಿದೆ. ಇಂಥಹ ಮಹತ್ವಪೂರ್ಣವಾದ ಕೃತಿಯು ಚೇಳಗುರಿಕೆ ಎರ್ರಿತಾತನ ಕುರಿತು ಬಂದ ಒಂದು ಅಪರೂಪದ ಗ್ರಂಥವೆನ್ನಬಹುದು. ನಾಗೇಶಶಾಸ್ತ್ರಿಗಳ ಅದ್ಭುತ ಪ್ರತಿಭೆ, ಪಾಂಡಿತ್ಯದಿಂದ ಕೂಡಿದ ಅಪರೂಪದ ಕೃತಿ ಇದಾಗಿದೆ. ಎರ್ರಿತಾತನ ಬದುಕು ಲೀಲೆಗಳ ಹಾಗೂ ಆತನ ಮಠದ ವಿವರಗಳನ್ನು ೧೯೬೭ರಲ್ಲಿ ರಚಿಸಲಾಗಿದ್ದು ಇದರ ವ್ಯಾಪ್ತಿ, ಅಂದಿನ ಎಲ್ಲಾ ಮಹತ್ವ ಘಟನೆಗಳನ್ನು ತಿಳಿಸುವಲ್ಲಿ ಸಹಾಯಕವಾಗಿದೆ.

### ೪.೩. ಭಕ್ತಿ ಗೀತೆಗಳು

ಭಕ್ತಿಗೀತೆಗಳು ದೈವತ್ವವನ್ನು ಕುರಿತು ಜನರಲ್ಲಿ ಭಕ್ತಿಯ ಸಂಚಲನವನ್ನುಂಟುಮಾಡಲು ಪ್ರಧಾನ ಪಾತ್ರವಹಿಸುತ್ತವೆ. ಜೀವನ ಚರಿತ್ರೆ, ಕತೆ, ನಾಟಕ ಮುಂತಾದ ಸಾಹಿತ್ಯಿಕ ಪ್ರಸಾರಗಳಿಗಿಂತಲೂ ಬಹುಬೇಗನೆ ಹೃದಯ ಸಂಬಂಧಿಗಳಾಗಿ ಬಿಡುತ್ತವೆ. ಆದುದ್ದರಿಂದಲೇ ಇಂದು ಪ್ರತಿಯೊಬ್ಬ ಸಂತ, ಯೋಗಿಗಳ, ಆರೂಢರ, ಸಿದ್ಧರ, ಸಾಧುಗಳ ಮಹಾಮಹಿಮೆಗಳನ್ನು ಕುರಿತ ಅನೇಕ ಭಕ್ತಿಗೀತೆಗಳು, ಜನರ ಬಾಯಿಯಿಂದ ಬಾಯಿಗೆ ಹರಿದು ಅವರ ಚರಿತ್ರೆಗೆ ಔನತ್ಯತರುವಲ್ಲಿ ಪ್ರೇರಕಗಳಾಗಿವೆ. ಈ ಭಕ್ತಿಗೀತೆಗಳು ಕೇವಲ ಭಕ್ತಿಯ ನಿರೂಪಕಗಳಾಗಿರದೇ ತತ್ವ ಹಾಗೂ ಧರ್ಮೋಪದೇಶಗಳನ್ನು ಹಾಡುಗಳ ಮೂಲಕ ಜನಪದರನ್ನು ಎಚ್ಚರಿಸುತ್ತವೆ. ಹಾಗಾಗಿಯೇ ಇವುಗಳು ಭಕ್ತಿಯ ಪ್ರೇರಕ ಶಕ್ತಿಯೂ ಹೌದು, ಅವರ ದೈವತ್ವ ಕುರಿತ ಎಚ್ಚರಿಕೆಯ ಮನೋಭೂಮಿಕೆಯನ್ನು ಬೆಳೆಸುವ ಮಾಧ್ಯಮಗಳು ಹೌದು.

ಚೇಳಗುರಿಕೆ ಎರ್ರಿತಾತ ಎಂಬ ಅವಧೂತನ ಕುರಿತು ಅನೇಕ ಭಕ್ತಿ ಗೀತೆಗಳ ಸಾಗರವೇ ಹರಿದುಬಂದಿದೆ. ಆತನ ಶಿಷ್ಯಸಂಕುಲದಲ್ಲಿಯೇ ಆಶುಕವಿಯಂತಿದ್ದ ತಿಕ್ಕಯ್ಯನವರು ತಾತನ ಕುರಿತು ಅನೇಕ ಗೀತೆಗಳನ್ನು ರಚಿಸಿದ್ದಾರೆ. ಅವರ ಗೀತೆಗಳನ್ನು ಕುರಿತು ಮುಂದಿನ ಅಧ್ಯಾಯದ ಶಿಷ್ಯ ಸಂಕುಲ ಎಂಬ ಭಾಗದಲ್ಲಿ ನಿರೂಪಿಸುವುದು ಹೆಚ್ಚು ಸೂಕ್ತವೆನಿಸುತ್ತದೆ. ಪ್ರಸ್ತುತ ಅಧ್ಯಾಯದಲ್ಲಿ ತಿಕ್ಕಯ್ಯನವರನ್ನು ಬಿಟ್ಟು, ಉಳಿದ ಭಕ್ತರ ಗೀತೆಗಳನ್ನು ಕುರಿತು ಅವಲೋಕಿಸಲಾಗುವುದು.

ಎರ್ರಿತಾತನ ಕುರಿತ ಭಕ್ತಿಗೀತೆಗಳನ್ನು ಹಲವು ವಿಶಿಷ್ಟವಾದ ಮತ್ತು ವಿಭಿನ್ನವಾದ ನೆಲೆಯಲ್ಲಿ ಅವಲೋಕಿಸಿದಾಗ ಅವುಗಳ ಒಟ್ಟು ಪರಿಕಲ್ಪನಾತ್ಮಕ ಪ್ರಕ್ರಿಯೆಯಲ್ಲಿ ಅವುಗಳನ್ನು ಈ ರೀತಿಯಲ್ಲಿ ನೋಡುವ ಸಾಧ್ಯತೆ ಹೆಚ್ಚಾಗಿರುವುದು ತಿಳಿದುಬರುತ್ತದೆ. ದೊಡ್ಡನಗೌಡರು ಮತ್ತು ವಕ್ರ ಸಂಬಂಧಿತ

ಹಿನ್ನೆಲೆಯ ಗೀತೆಗಳು, ವೈ ಯಂ ಚಂದ್ರಯ್ಯನವರ ಸಂಬಂಧಿತ ಗೀತೆಗಳು, ಹಾಗೂ ವಿಡಿಯೋ, ಆಡಿಯೋಗಳ ಇತ್ತೀಚಿನ ಗೀತೆಗಳಿಗೆ ಸಂಬಂಧಿತ ಮೂರು ನೆಲೆಗಳಾಗಿ ಪ್ರಸ್ತುತ ಅಧ್ಯಯನದಲ್ಲಿ ನೋಡುವುದೇ ಹೆಚ್ಚು ಸೂಕ್ತವೆನಿಸುತ್ತದೆ.

೧. ದೊಡ್ಡನಗೌಡರು ಮತ್ತು ಮಠ ಸಂಬಂಧಿತ ಗೀತೆಗಳು

ಕರ್ನಾಟಕ ಗಮಕ ಕಲಾನಿಧಿಗಳು, ಜಾನಪದ ಸಾಹಿತಿಗಳು, ಕವಿಗಳು, ರಂಗನಟರು ಬಳ್ಳಾರಿ ಜಿಲ್ಲೆಯ ಹೆಸರನ್ನು ಆಗಲೇ ಬಹು ಉತ್ತುಂಗ ಶಿಖರಕ್ಕೆ ಏರಿಸಿದ ಡಾ.ಜೋಳದರಾಶಿ ದೊಡ್ಡನಗೌಡರು ತಾತನವರನ್ನು ಕಣ್ಣಾರೆ ಕಂಡ ಹಲವು ಚಿಂತಕರಲ್ಲಿ ಇವರು ಒಬ್ಬರಾಗಿದ್ದಾರೆ. ತಾತನ ನಂತರ ಮಠದ ಬಗೆಗೆ ಭಜನಾ ಪದ್ಯವೊಂದನ್ನು ಅವರು ರಚಿಸಿದ್ದು, ಅದು ಇಡೀ ಮಠದ ಚರಿತ್ರೆಯನ್ನು ಕಟ್ಟಿಕೊಡುತ್ತಿದೆ. 'ನಾನೊಲ್ಲೆ' ಎಂಬ ಶೀರ್ಷಿಕೆಯ ಗೀತೆ ಹೀಗಿದೆ.

ನಾನೊಲ್ಲೆ ನಾನೊಲ್ಲೆ ಮಠದ ಜಂಜಾಟ
ಏನಾರ ಮಾಡಿಕೊನೇ ಎರ್ರಿತಾತ ||ಪ||

ಮಠಕಟ್ಟಿ ನಿನಗೆ ದೂರಾದನು ತಿಕ್ಕಯ್ಯ
ಮಠದಲ್ಲಿ ಸಿದ್ಧಲಿಂಗಪ್ಪನ ಕಾಲೋಯ್ತು
ಮಠದ ಗುದ್ದಾಟದಿ ನೆಲೆಗೆಟ್ಟ ಬಸವಯ್ಯ
ಸಟೆಯೇನು ನಿನ್ನಾಟ ಬಲ್ಲವರಾರಯ್ಯ ||೧||

ಕೊಡುವವನೊಬ್ಬ ಕದಿವವನೊಬ್ಬ
ಕೊಟ್ಟರೂ ಮುದವಿಲ್ಲ ಕದ್ದರು ಚಿಂತಿಲ್ಲ
ಇದ್ದವಕೊಟ್ಟರೆ ಇಲ್ಲದವ ನೊಯ್ಯುವ
ಸಿದ್ದರ ಮಠ ಪೀಕಲಾಟದ ಬೀಡಯ್ಯ ||೨||

ಹಣವೆಣಿಸಿ ನಿನ್ನನೆ ಮರೆತರು
ನಿನ್ನ ಮಠದ ಧನಧರ್ಮದರ್ಶಿಗಳು
ನಾನಂತೆಯಾಗಿದ್ದೆ ಬಿಟ್ಟೆನಾ ಸಹವಾಸ
ನಿನ್ನ ಮರೆಸುವ ಮಠಕ್ಕೆ ಸಾವಿರ ಶರಣಾರ್ಥಿ ||೩||

ದೊಡ್ಡವರು ಶ್ಯಾಮಣ್ಣಮಾಪತಿ ಸ್ವಾಮಿಗಳು
ಮಠವ ಸಿಂಗರಿಸಿತಾವ್ ತೊತ್ತಾಗಿ ಸವೆದರು
ಬಡವ ನಾ ಮಠವೊಲ್ಲೆ ನೀನೊ ಆದರೆ ಸಾಕು

ಮೃಡರೂಪರಾಮೇಶನ ಸಂಪ್ರೀತಿ ಎರ್ರಿತಾತ ||೪||

ಆಡಂಬರದ ಭಕ್ತಿ ತಾವು ಪಾಲಿಸಲಾರದ ಉಪದೇಶವನ್ನು ಕುರಿತು ಅನೇಕರಿಗೆ ಹೇಳುವುದು ಮಾತ್ರ ಅವರ ಕರ್ತವ್ಯದಂತೆ, ಪಾಲಿಸುವುದು ಪರರ ಹಣೆಬರಹವೆಂಬಂತೆ ನಡೆದುಕೊಳ್ಳುತ್ತಾರೆ. ಬಸವಣ್ಣನವರ 'ನುಡಿದಂತೆ ನಡೆ' ಎಂಬ ತತ್ವವು ಮಾಯವಾಗಿ ಇಂದು 'ಮನಸಿಚ್ಛೆಯಂತೆ ನಡೆ' ಎಂಬುದು ಉಂಭದೊಳಗೆ ಸಾಗುವ ಇತರೆ ಯೋಗಿಗಳಂತೆ ನೀನಲ್ಲ. ನಿನ್ನದೋ ವಿಶಿಷ್ಟ ದೈವತ್ವ ಎಂಬುದನ್ನು ದೊಡ್ಡನಗೌಡರು 'ಸದ್ಗುರು' ಎಂಬ ಗೀತೆಯಲ್ಲಿ ಹೀಗೆ ತಾತನವರನ್ನು ಕುರಿತು ಹಾಡಿದ್ದಾರೆ.

ಎನಿ ಬರೆನಿಬರೊಬಂದು ಇಲ್ಲಿದ್ದು ಹೋದರು
ಎನಿತೆನಿತೋವೇದಾಂತ ಬೋಧೆಗಳ ಮಾಡಿದರು
ಮೌನದಿಂದೆರಿ ತಾತ ಬೋಧೆಗಳ ಮಾಡದಲೆ
ತಾನೆ ಬ್ರಹ್ಮವದೆಂಬ ಸತ್ಯವನು ತೋರಿದನು

ವೇದಗಳು ಶಾಸ್ತ್ರಗಳು ಉಪನಿಷತ್ ಸೂತ್ರಗಳು
ಸಾಧ್ಯವಲ್ಲವದೆಂದು ಬೆಚ್ಚಿಬೆರಗಾಗಿರುವ
ಚಿದ್ರೂಪದಾ ಬ್ರಹ್ಮವೀ ಲೋಕ ಭಾಗ್ಯದಲಿ
ಉದಿಸಿ ತ್ರೈಗುಣ ರೂಪದೆರಿತಾತನಾಗುತಲಿ

ಮಾತನಾಡಿದೊಡದುವೆ ಬ್ರಹ್ಮತಾನಲ್ಲಂತೆ
ಮಾತಾಡದಿದೆ ಬ್ರಹ್ಮವನು ಅರಿಯಲರಿದಂತೆ
ಮಾತಾಡಿ ಆಡದಲೆ ಮಾತು ಮರ್ಮವನರುಹಿ
ತಾತ ಚೇಳ್ಗುರಿಕೆಯಲಿ ನಿಂದ ಸದ್ಗುರುವಾಗಿ

ಮೌನದಲ್ಲಿಯೇ ಸಮಸ್ತವನ್ನು ಸಾಧಿಸಿದವನಂತಿದ್ದ ಎರ್ರಿತಾತನಿಗೆ ಮೌನವೇ ಬಂಗಾರ, ಮಾಣಿಕ್ಯವೆಂಬ ಉಕ್ತಿಯು ಆತನಿಗೆ ಸರಿಯಾಗಿ ಅನ್ವಿಯಿಸುತ್ತಿತ್ತು. ಮಾತಿನ ಬಡಿವಾರದ ಗೊಡವೆಗೆ ಹೋಗದೆ ನಿರ್ಮಲ ಮೂರ್ತಿಯಾಗಿದ್ದನೆಂಬುದು ದೊಡ್ಡನಗೌಡರು ಒಂದು ಚಿಕ್ಕಪಲ್ಲವಿಯಲ್ಲಿ ಹೀಗೆ ತಿಳಿಸಿದ್ದಾರೆ.

ಮಹಾಸ್ವಾಮಿ ಜಿತಕಾಮಿ ಎರ್ರಿಸ್ವಾಮಿ ||ಪ||
ಶಿವಯೋಗಶತನೇಮಿ ನತಪ್ರೇಮಿ ||ಅ||
ವಿದಿತ ನಿರ್ಮಲ ನಿರ್ಣಯಾತ್ಮ
ಮೌನ ಮುದ್ರಾಂಕಿತ ವಿರಾಜಿತ
ಮುದಿತ ಮಂಗಳ ರೂಪ ಶೋಭಿತ

ಸಹಜ ಸುಗುಣಾನಂದರಂಜಿತ

ಸದಯ ಸದ್ಭಕ್ತಾಳಿಸೇವಿತ ಚೇಳ್ಗುರಿಕೆ ಶಿವ ಸಲಹುಸತ

ಎರ್ರಿತಾತನು ಸಮಾಧಿಯಾದ ನಂತರ ಹಲವಾರು ಭಕ್ತರಿಗೆ ಕನಸಿನ ಮೂಲಕ ದರ್ಶನವಿತ್ತನಂತೆ. ಹಾಗೆ ಕನಸಿನಲ್ಲಿ ದರ್ಶನ ಪಡೆದ ಭಕ್ತರಲ್ಲಿ ಶ್ಯಾಮಣ್ಣನು, ದೊಡ್ಡನಗೌಡರು ಸಹ ಸೇರುತ್ತಾರೆ. ಇಲ್ಲಿ ಗೌಡರಿಗೆ ತಾತನ ಕನಸು ಬಿದ್ದಾದ ಮೇಲೆ, ಬಹಳ ದಿನಗಳ ನಂತರ ದರ್ಶನವಿತ್ತನಂತೆ. ಅದಕ್ಕಾಗಿಯೇ ತಂದೆಮಗನನ್ನು ಎಷ್ಟು ತಪ್ಪುಗಳು ಮಾಡಿದರು ಸಹ ಕ್ಷಮಿಸಿ ನನಗೆ ದರ್ಶನವಿತ್ತ ಮಹಿಮನು ನೀನು ಎಂದು "ದಯಬಂದಿತೆ" ಎಂಬ ಗೀತೆಯಲ್ಲಿ ಕೊಂಡಾಡಿದ್ದಾರೆ.

ಇಂದಿಗೆ ದಯ ಬಂದಿತೇನಾ ||ಪ||
ಮಂದ ಭಾಗ್ಯನ ನೋಡಿ ನಿನಗೆ ||ಅ||

ಅಂದು ತಾಯಿಯ ಮರಣಕ್ಕಂಜಿ
ಬಂದು ಬೇಡಿದೆ ರಕ್ಷಿಸೆಂದು
ಕಂದೆರದು ನೀ ನೋಡಿ ಭರದಿ
ಇಂದೆ ಮರಣವು ತಪ್ಪದೆಂದು
ಕಂದನನು ನಡೆಯೆಂದ ಮುನಿವರ ||೧||

ಒಂದು ದಿನ ಕನಸಿನಲಿ ಕಂಡು
ಸುಂದರದ ಮೃದು ಹೂಗಳಿತ್ತು
ಆದರಿಸಿ ಜ್ಞಾನವನು ಬೋಧಿಸಿ
ಅಂದಿನಿಂದರ್ಶನವನೀಯದೆ
ಕಂದನನು ಮರುಗಿಸಿದ ಮಹಿಮ ||೨||

ಎಂತು ನಿನ್ನನು ನಿಂದಿಸಿದರೂ
ಎಂತು ಅಪರಾಧಗಳ ಗೈದರೂ
ತಂದೆ ಮಗನನು ಮರೆಯಲುಂಟೆ
ಇಂದು ದರ್ಶನವಿತ್ತು ಸಲಹಿದೆ
ಮುದದಿ ಚೇಳ್ಗುರೇಶ ಎರಿಗುರು ||೩||

(ದೊಡ್ಡನಗೌಡರು ಜೋಳದರಾಶಿ: ಜೋಳದ ರಾಶಿ ಕಾವ್ಯ ಪು.೭೬)

ಅವರವರ ಭಾವಕೆ, ಅವರವರ ಭಕುತಿಗೆ, ಅವರವರಿಗೆಲ್ಲ ಗುರುವು ನೀನೊಬ್ಬನೇ ಎಂಬಂತೆ ಹಲವು ಭಕ್ತರ ಮನಸ್ಸಿನ ನಿಲುವುಗಳಿಗೆ ಒಂದೊಂದು ತರಹ ಕಾಣುವ ತಾತನ ಕುರಿತು ದೊಡ್ಡನಗೌಡರು ಈ ರೀತಿ ರಚಿಸಿದ್ದಾರೆ.

ಊರಿಗೆ ದಾರಿಯ ಸಾರನು ಕೇಳಲಿ
ದಾರಿಗೆ ಬಾರದೆ ದೂರ ಹೋಗುವರೆಲ್ಲ ||ಪ||

ಕೇಳಿದರೊಬ್ಬೊಬ್ಬರೊಂದೊಂದು ಮಾತು
ಕೇಳಿದ್ದು ಹೇಳುವರು ಕಂಡವರಾರಿಲ್ಲ
ಅಲ್ಲುಂಟು ಇಲ್ಲುಂಟು ಎಲ್ಲೆಲ್ಲೊ ಉಂಟೆಂಬ
ಸೊಲ್ಲಿಗೆ ಬೆರಗಾದೆ ನಿಂತಲ್ಲೆ ಕುಸಿದೆ ||೧||

ಹೇಳಿದರೊಬ್ಬರು ನಿನ್ನ ಕೇಳುವುದೆಂದು
ಕೇಳುವ ಮುನ್ನ ನೀ ಕಾಣಬೇಕಲ್ಲವೆ
ಕಾಣುವುದಾದರೆ ಕೇಳುವುದಿನ್ನೇಕೆ
ಕೇಳುವ ಊರೇ ಸೇರಿದಂತಹುದು ||೨||

ಯಾರೇನು ಹೇಳಿದರು ಎಂತು ಕೇಳಿದರು
ತೋರದು ನಿನ್ನರಿವಿನ ದಾರಿ ಸಿಕ್ಕದು
ಕರುಣಾಳು ರಾಮೇಶ ಸಂಪ್ರೀತೆರಿತಾತ
ಗುರುವಾಗಿ ನೀ ಬಂದು ತೋರುವ ತನಕ ||೩||

(ಹಾಡಿದವರು ಹನುಮಂತಪ್ಪ ಮಾದಾರ್, ವಯಸ್ಸು ೭೦, ಗ್ರಾಮ ಚೇಳಗುರಿಕೆ)

ಭವದ ಬಂಧನವೇ ತಿಳಿದಿಲ್ಲವೆಂಬಂತೆ ಸದಾಕಾಲವು ಮೌನಿಯಂತೆ ತೋರುತ್ತೆ. ಮೌನದಲ್ಲಿಯೇ ಸಕಲ ವಿಷಯಗಳನ್ನು ಅರಿತವನಂತೆ ಇರುವ ತಾತನ ವಿಭಿನ್ನ ರೀತಿಯ ವ್ಯಕ್ತಿತ್ವದ ಶೈಲಿಯನ್ನು ಈ ರೀತಿಯಾಗಿ ಗಮನಿಸಬಹುದು.

ಶ್ರೀಗುರು ಎರ್ರಿತಾತ ಶುಭಾನ್ವಿತ
ಸಕಲ ಸುಜನನುತ ಸುಚರಿತ ಭರಿತ

ನರರೂಪವ ತಾಳಿ ಧರೆಯೊಳು ಉದಿಸಿದ
ಹರನೀನಲ್ಲದ ನರಸೀ ನೋಡಲು

ಮರುಳನ ತೆರನಂತೆ ಮರವೆಯ ನಟಿಸಿದ
ವರಋಷ್ಯಶೃಂಗನೀ ಮರುಳನೆ ನೋಡಲು

ಜನರೇನು ಗೈದರು ಮುನಿಸನು ತೋರದೆ
ಮೌನಿ ಶಮೀಕನೀ ಮನುಜನೆ ನೋಡಲು

ನಳಿನಾಕ್ಷಿಯರ ಬಳಗದಿ ಸುಳಿದರು
ಚಲಿಸದ ಶುಕನೀ ತಿಳಿಯೆ ಮಾನವನೆ
ಅರಿಯದೆ ಚೇಳ್ಗುರಿಕೆರ್‍ರಿತಾತನೆ ನೀನೆಂದು
ಕರೆದವರೆರ್‍ರಿಯತ್ತಿ ನೀನೆನೆರ್‍ರಿತಾತ
(ಹಾಡಿದವರು ಎರ್‍ರಪ್ಪ ವಯಸ್ಸು ೬೦ ಚೇಳಗುರಿಕೆ ಗ್ರಾಮ)

ಭಕ್ತಿಪಂಥದಲ್ಲಿ ತತ್ತ್ವಕ್ಕೆ, ಉಪದೇಶ ಹಾಗೂ ಆಚರಣೆಗಳಿಗಿರುವಷ್ಟು ಮಹತ್ವ ಬೇರೊಂದಕ್ಕೆ ಅಷ್ಟಾಗಿ ಇಲ್ಲದಿರುವುದು ತಿಳಿದುಬರುತ್ತದೆ. ಇಲ್ಲಿ ಭಕ್ತನ ಹಾಗೂ ತಾತನ ನಿಲುವಿಗೆ ಇರುವ ಅಂತರ್ ಸಂಬಂಧವೆಂಬಂತೆ ಓಲೈಸಿ ಬರೆಯಲಾದ ದೊಡ್ಡನ ಗೌಡರ ಒಂದು ರಚನೆ ನೋಡಿದರೆ ಅವರ ಭಕ್ತರ ನಿಜಸ್ಥಿತಿ ಗೊತ್ತಾಗುತ್ತದೆ.

ಶ್ರೀವಿಮಲ ಮುನಿದೇವ ಭವವನ
ದಾವ ನಿರುಪಮ ನಿಜ ಗುಣೋನ್ನತ
ಭಾವ ನಿಶ್ಚಲ ನಿರ್ವಿಕಾರ ನಿರಾಮಯಾನಂದ
ಪಾವನನೆ ಘನಮೃತ್ಯುದಾಡೆಯ
ನೋವ ಲೆಕ್ಕಿಸದಸಮ ಮಹಿಮನೆ
ಕಾವುದೈ ಗುರು ಎರ್‍ರಿತಾಥನೆ ಎಮ್ಮನನುದಿನದಿ ||೧||

ಮುನ್ನ ಮಾಡಿದ ಪಾಪದಕ್ಕಸ
ಬನ್ನ ಬಡಿಸುತಲಿಕಲು ಒಳಗಿಹ
ಪುಣ್ಯದೇವಂ ಅಡಗಿ ಕುಳಿತಿಹನಯ್ಯೊ ಗುರುನಾಥ
ಎನ್ನ ಈ ಮನಮಥನದಲಿ ಕಾ
ರ್ಪಣ್ಯ ವಿಷಮದ ಪುಟ್ಟಿ ಸುಡುತಿಹು
ದಿನ್ನಿದನು ಪರಿಹರಿಸಿ ರಕ್ಷಿಸು ನಿರತ ಎರ್‍ರಿನಾಥ ||೨||

ಭೋಗವೊಲ್ಲದ ಯೋಗಿ ನೀನೆಲೆ
ಭೋಗದ ಬಯಸುವವನಾಗಿ ನಾನೆಲೆ
ತ್ಯಾಗಶೀಲನು ನೀನು ನಾನತಿಲೋಭಿ ಗುಣದವನು
ಲೋಕ ವಂದಿತ ಎರ್ರಿನಾಥನೆ
ಹೇಗೆ ನಿನಗೆನಗೆಂತು ಮೇಳವು
ಸಾಗದಿರಲಾನೆಂತು ನಿನ್ನನು ಸ್ತಿತಿಸಿ ಮೆಚ್ಚಿಸಲಿ ||೩||

ಏನನರಿಯದ ಮಂದಮತಿಗತಿ
ಹೀನ ಭವಸಾಗರದಿ ಬಳಲುವ
ದೀನ ಸತಿಸುತ ಮೋಹ ಭ್ರಾಂತನು ನಿನ್ನ ಮರೆದವನು
ನೀನೆ ಕರುಣದಿ ಕೈಪಿಡಿದು ಈನ
ಸಾನು ರಾಗದಿ ಬಳಿಯೊಳಿರಿಸುತ
ಧ್ಯಾನ ದನುವಂ ತಿಳಿಸಿ ಪಾಲಿಸು ದಯದಿ ಎರ್ರಿನಾಥ ||೪||

ಏಸು ಜನ್ಮದ ಸುಕೃತವೊ ತಾ
ನೇಸು ಪೂಜಾಫಲವೊ ಮತ್ತಾ
ನೇಸು ದಿನದಾ ಪುಣ್ಯ ಬಲವೋ ಏನನು ಸುರುತಿಸು
ರಾಗ ಭಾಸುರದ ತದ ಪಾದಸನ್ನಿದಿ
ದಾಸನೆನಿಸುವ ಸುದಿನವದಗಿತು
ವಾಸನಾಕ್ಷಯ ಎರ್ರಿನಾದನೆ ಧನ್ಯನಾದೆನಲ ||೫||

(ಜೋಳದರಾಶಿ ದೊಡ್ಡನಗೌಡ: ಜೋಳದರಾಶಿ ಕಾವ್ಯ: ಪು.೭೩)

ಅಲೌಕಿಕ ಪುರುಷರ ಸ್ವಭಾವವನ್ನು ಕುರಿತು ಅಲ್ಲಮ ಪ್ರಭುವಿನ ದಾಟಿಯಲ್ಲಿ ನೋಡಿದರೆ ಅವರ ವ್ಯಕ್ತಿತ್ವದ ಅರಿವು ಸ್ಪಷ್ಟವಾಗುತ್ತದೆ.

ಅಯ್ಯಾ, ಕ್ರಿಯಾಚಾರದಲ್ಲಿ ಮೋಹವುಳ್ಳಾತನೆ ಸದ್ಗುರುವೆಂಬೆ, ಜ್ಞಾನಾಚಾರದಲ್ಲಿ ನಿಷ್ಠೆಯುಳ್ಳಾತನೇ ಸಚ್ಚಿದಾನಂದ ಲಿಂಗವೆಂಬೆ ನೋಡಾ, ಭಾವಚಾರದಲ್ಲಿ ಪ್ರಿಯವುಳ್ಳಾತನೇ ಪರಾತ್ಪರ ಜಂಗಮವೆಂಬೆ ನೋಡಾ, ಈ ತ್ರಿವಿಧಾಚಾರದಲ್ಲಿ ಆಕಾಂಕ್ಷೆಯುಳ್ಳಾತನೇ ನಿಜ ಶರಣನೆಂಬೆ ನೋಡಾ, ಇಂತು ಆಚಾರ ಸನ್ಮಾರ್ಗ, ಗುರುಲಿಂಗ ಜಂಗಮ ಶರಣರೇ ಗುಹೇಶ್ವರ ಲಿಂಗಕ್ಕೆ ಮೋಕ್ಷಮಂದಿರವೆಂಬೆ ನೋಡಾ, ಚನ್ನಬಸವಣ್ಣ ಎಂಬುದು ಅಲ್ಲಮನ ಪ್ರಭುವಿನ ಯೌಗಿಕ ಪುರುಷರ ದೃಷ್ಟಿಕೋನ ಇದಾಗಿದೆ. ಅದೇ ಎರ್ರಿತಾತನ

ನಿಜಸ್ಥಿತಿಯ ಕುರಿತು ತಮ್ಮ ಹಾಡಿನಲ್ಲಿ ಮನೋಜ್ಞವಾಗಿ 'ನೀನ್ಯಾರೋ' ಎನ್ನುವ ಗೀತೆಯಲ್ಲಿ ಈ ರೀತಿ ವರ್ಣಿಸಿದ್ದಾರೆ.

ಬಿಳುಪಿಡಿದ ಜಡೆಮುಡಿಯ ಸಿರಿಮೊಗದ ನಿಜಶಾಂತಿ
ಚೆಲುವೇರಿದವಯವದ ನಿಲುವಿಕೆಯ ತನುಕಾಂತಿ
ಸುಳಿವ ಕರಣಂಗಳನು ತಡೆದ ಗುರುತರ ದಾಂತಿ
ಇಳೆಗಿಳಿದ ನಿಸ್ವಾರ್ಥ ನಿರ್ಲೇಪ ವೈರಾಗ್ಯಮೂರ್ತಿ

ಜಾತಿ ಮತ ಕುಲ ಪಂಥ ಸೂತಕಾದಿಗಳಳಿದು
ಭೀತಿ, ಮಾನವಮಾನ, ನಿಂದೆನುತಿಗಳ ತುಳಿದು
ಖ್ಯಾತಿ, ಪಾತಕ, ಪುಣ್ಯ, ಸ್ವರ್ಗ, ನರಕಗಳೊದೆದು
ಶಾಂತಿಯಿಂದೆಲ್ಲವನು ಸಮದಿ ಸಂಭಾವಿಸಿದ

ಅರಿವಿನರ ಮನೆಯಲ್ಲಿ ಚಿರಮುಕ್ತಿ ಕಾಂತೆಯಲಿ
ಸುರತ ಶಿವ ಸುಖ ಪಾರದಾನಂದ ವಾರ್ಧಿಯಲಿ
ಅರಿವು ಮರೆವೆಯನೀಗಿ ಶೂನ್ಯದಲಿ ಗುರುತಳಿದು
ಗುರುತಾಗಿ ಗುರುವಾಗಿ ಹೊರಗಿಂತು ತೋರುವ

ಅರಿಯಬಹುದೇ ನಿನ್ನ ಎಲ್ರಿಯಾ ಮರ್ಮವನು
ಅರಿತವನು ತಾನೊಬ್ಬ ನಿನ್ನಂತೆ ತಿಕ್ಕಯ್ಯ
ಎಲ್ರಿ ತಿಕ್ಕುಗಳೊಂದೆ ಲೌಕಿಕದ ನೋಟದಲಿ
ಯಾಜರಿಯ ಬಲ್ಲರೋ ನೀನೆ ಪೇಳುವ ತನಕ

ಧರೆಯ ಚೇತನವೆಸೆದು ಗಗನಮಂ ಭೇದಿಸುವ
ತೆರನಂತೆ ನರನಾಗಿ ಭವದಿಂದ ಹರನಾಗಿ
ದುರಿತಕಂಜಿದ ನರರ ಕರುಣದಿಂದೋಜೆಯಲಿ
ಅರಿವಿತ್ತು ಸಲಹುವಾ ರಾಮೇಶನಲಿ ಬೆರೆದ

ನೀನಾರೋ? ಹೆಸರೇನೋ? ಯಾವ ನಾಡಿನ ಮೃಡನೋ?
ಎಲ್ರಿತಾತನೆಂದೆನಿಸಿ ಚೇಳ್ಗುರಿಕೆಯಲಿನಿಂದೆ
(ಚನ್ನಬಸವೇಶ್ವರ ಸಿ.ವ.: ಶ್ರೀ ಎಲ್ರಿಸ್ವಾಮಿಗಳ ಲೀಲಾವಿಲಾಸ ಪು.೪೯-೫೦)

ಬಣ್ಣ ಬಣ್ಣದ ಮಾತಿನಲ್ಲಿ, ಕವಿಯಂತೆ ಬಣ್ಣಿಸಲು ಬಾರದ ಒಬ್ಬ ಹೆಂಗಸು ತನ್ನ ಸ್ತ್ರೀ ಸಹಜವಾದ ರೀತಿಯಲ್ಲಿ ಗ್ರಾಮ್ಯವಾಣಿಯಲ್ಲಿ ಅಂದಾಳ ಅಂದವಾಗಿ

"ಅವರ ಮುಖದಲ್ಲಿ ಎದುರು ನಿಂತವರ ಮುಖ
ಕಾಣುವ ತೆರದ ಬಣ್ಣದವರು ನಮಸ್ಕರಿಸಲು
ಮುಟ್ಟಿದರೆ ತಗ್ಗು ಬೀಳುವ ರೀತಿ ಇದ್ದರು"
(ಅದೇ ಪುಟ ೫೦ರಲ್ಲಿ)

ಮನುಷ್ಯನಲಿ ಅಹಂಕಾರದ ಆಳ್ವಿಕೆಯು ಮೈತುಂಬಿದಾಗ ನಾನೊಬ್ಬನೇ, ನನ್ನಿಂದಲೇ, ನನಗಾಗಿಯೇ, ನಾನೇ ಎನ್ನುವ ಭಾವಗಳು ಹೊರ ಹೊಮ್ಮುತ್ತವೆ. ದೀನತೆಯ ಭಾವಗಳಿಲ್ಲದೆ ಏನು ಇದ್ದರೂ ಎಲ್ಲವೂ ಇಲ್ಲದಂತೆ ಎಂಬುದು 'ಬಿಡದಹಂಕಾರ' ಎನ್ನುವ ಗೀತೆಯಲ್ಲಿ ತಾತನವರ ದಯೆಯನ್ನು ಬೇಡುತ್ತಾ ಈ ರೀತಿ ಹೇಳಿದ್ದಾರೆ.

ಬಿಡದು ಪಿಡಿದಂಹಾಕರ ಕಾಡುವ ಬೇತಾಳನಂತೆ ||ಪ||.
ಒಡೆಯಾ ಎರಿನಾಥ ನಿನ್ನ ಬಕ್ತನೆಂತಪ್ಪನಯ್ಯಾ ||ಅ||

ನಿನ್ನ ಮಹಿಮೆಯ ಕೇಳಿ ಕೃತಿ ರಚಿಸಿ ಹಾಡಿದೆ
ನಿನ್ನ ಕಥೆಗಳ ನೋದಿ ಪ್ರವಚನ ಮಾಡಿದೆ
ನಿನ್ನ ಪೂಜೋತ್ಸಾಹವ ಸಂಭ್ರಮವ ನೋಡಿದೆ
ಏನಾಯ್ತು ನಾಯಿಯ ಬಲಾದಂತಾಯ್ತು ಕೊನೆಗೆ ||೧||

ಓದಿದ ಓದೆಲ್ಲ ಗಿಳಿಯೋದಿನಂತಾಯ್ತು
ಮಾಡಿದ ಬದುಕೆಲ್ಲ ಹುಡುಗಾಟದಂತಾಯ್ತು
ಸಾಧಿಸಲಿಲ್ಲ ನಂಬಿ ಫಲವಿಲ್ಲದಂತಾಯ್ತು
ಕಡೆಗೆ ನೀರೊಳು ಕೈಯಿಕ್ಕಿ ನೆಕ್ಕಿದಂತಾಯ್ತು ||೨||

ಮುಪ್ಪಾದೆನಲ್ಲದೆ ಮುಪ್ಪಾಗದಹಂಕಾರ
ಬಪ್ಪದನ್ಯರಜರೆದು ಇಪ್ಪುದು ಯೌವನದಿ
ಅಪ್ಪರಾಮೇಶಪ್ರೀಯ ಎನ್ನಗತಿ ಎಂತಯ್ಯ
ತಪ್ಪು ನೋಡದೆ ಮಗನ ಒಪ್ಪಿಸಿಕೊ ತಾತಯ್ಯ ||೩||
(ಜೋಳದರಾಶಿ ದೊಡ್ಡನಗೌಡರು: ತಾತನ ಗೀತಾಂಜಲಿ ಪು.೭೦)

ನಿರ್ಲಿಪ್ತಸ್ಥಿತಿಯಲ್ಲಿ ತನ್ನನ್ನು, ಕೈಹಿಡಿದು ನಡೆಸು ಎಂಬುದನ್ನು ಕುರಿತು ತಾತನೊಡನೆ ಸಂಬಂಧೀಕರಿಸಿ ಕೊಂಡು 'ಕೈ ಹಿಡಿದು ಸಲಹು' ಎಂಬ ಗೀತೆಯಲ್ಲಿ ತಮ್ಮ ಮನೋವೇದನೆಯನ್ನು ತೋಡಿಕೊಂಡಿದ್ದಾರೆ.

ಇಂತೆನ್ನ ಕೈಹಿಡಿದು ಸಲಹುಗುರು ಎರಿತಾತ ||ಪ||
ಎಂತಾತದರು ನಿನ್ನ ಬಳಿಸಂದ ಮಗುವೆಂದು ||ಅ||

ಏನನೋಡಿದೊಡದುವೆ ನಿನ್ನ ರೂಪಾಗಿರಲಿ
ಏನಕೇಳಿದೊಡೆದುವೆನಿನ್ನ ಕತೆಯಾಗಿರಲಿ
ಏನನುಡಿದೊಡೆ ನಿನ್ನ ಗುಣಗಾನವಾಗಿರಲಿ
ಏನ ನೆನೆದೊಡೆ ನಿನ್ನ ಮಂತ್ರವಾಗಿರಲಯ್ಯ ||೧||

ಏನ ಮಾಡಿದೊಡದುವೆ ನಿನ್ನ ಸೇವೆಗೆ ಸಲ್ಲಲಿ
ಯನ್ನೆಲ್ಲ ಬಯಕೆಗಳು ನಿನ್ನ ಗುರಿಯಾಗಿರಲಿ
ಆನೆಂಬುದೆಲ್ಲವು ನೀನಾಗಿರಾಜಿಸಲು
ಏನಾದರರಂತೆಲ್ಲ ನಿನ್ನ ಕೃಪೆಯಾಗಿರಲಿ ||೨||

ಅಂದಿಂದು ಮುಂದುಗಳು ನಿನ್ನೊಂದಿಗಿರಲಿ
ಅಂದಂದಿಗೆನ್ನ ಗಡಿ ಮಡಿಯು ನೀನಾಗಿರಲಿ
ಎಂದೆಂದಿಗೀ ಬಾಳು ಶರಣಕಾರವಾಗಿರಲಿ
ಇಂದು ಧರರಾಮೇಶ ಸಂಪ್ರೀತ ಎರ್ರಿತಾತ ||೩|| (ಅದೇ ಪು.೬೯)

ಭಕ್ತಿಯೆಂಬುದು ತೀರಾ ವೈಯಕ್ತಿಕ ಭಾವಕ್ಕೆ ಸಂಬಂಧಿಸಿದ್ದು, ಅದು ಮೇಲುನೋಟಕ್ಕೆ ಸಾಮೂಹಿಕತೆಯ ತಳಹದಿಯಂತೆ ಕಂಡುಬರುತ್ತದೆ. ಅಕ್ಕಮಹಾದೇವಿಯರು ಪರಲೌಕಿಕ ಶಕ್ತಿಯನ್ನೇ ತನ್ನ ನಿಜ ಗಂಡನೆಂದು ಅವಳ ಹುಡುಕಾಟ ತಾಕಲಾಟಗಳು ಪ್ರಾಪಂಚಿಕ ಜ್ಞಾನಕ್ಕೆ ತೀರ ವೈರುಧ್ಯದಂತೆ ಕಂಡರೂ ಅವಳದು ವೈಯಕ್ತಿಕ. ಮನಸ್ಸಿನ ಆಲಾಪನೆ ಅದಕ್ಕಾಗಿಯೇ, ಗಿರಿಗುಹೆಗಳು, ಕದಳಿವನವೆಂಬ ಇಹಲೋಕದ ಪರಿಧಿಯೊಳಗೆ ಅಲೌಕಿಕತೆಯ ಅನುಸಂಧಾನ ಮಾಡಲು ಹೊರಟ ಪರಿಯೇ ಬೇರೆ ಹಾಗಾಗಿಯೇ ಭಕ್ತರ ಭಕ್ತಿಯು ವೈಯಕ್ತಿಕ ಪ್ರತಿಯೊಬ್ಬರಲ್ಲಿ ವಿಭಿನ್ನವಾದ ಹಾರಾಟ ತಾಂಡವಾಡುತ್ತದೆ. ಈ ಕೆಳಗಿನ ಹಾಡು ದೊಡ್ಡನಗೌಡರನ್ನು ನಿರಂತರವಾಗಿ ಕಾಡುವ ಮಾತು ಕೇವಲ ಮಾತಾಗದೆ ಅಂತರಂಗದ ಆವೇದನೆಯಾಗಿದೆ.

ಮಾತಾಡು ಮಾತಾಡು ಮಾತಾಡು ತಾತ
ಮಾತಾಡದಿದ್ದರೆ ನಾನೆಂತು ಬದುಕುವೆ
ಮಾತಾಡಿ ನಡೆಯದನಡೆ ಹೀನ ನಿವನೆಂದು

ಖ್ಯಾತಿಗೆ ಮರುಳಾಗಿ ನೀತಿ ಗೆಟ್ಟವನೆಂದು
ಪತಿತರ ಸಂಗದಿ ಪಾಪಿಯಾದವನೆಂದು
ಮಾತಾಡಲೊಲ್ಲೆಯ ಪಪಿತಾತ್ಮ ಚೈತನ್ಯ

ಪರಸತಿಗೆ ಪರಧನಕಳುಪಿದನಿವನೆಂದು
ಮರೆಮೋಸ ವಂಚನೆಯ ಧಾಂಬಿಕನೆಂದು
ಗುರುದ್ರೋಹಿ ಇವನೆಂದು ಮಾತಾಡಲೊಲ್ಲೆಯ
ಸರ್ವದೋಷ ಹರಗುರುವೆನೀ ಮುನಿಯದೆ

ನಿನಗೊಪ್ಪುವ ಮಗನು ನಾನಲ್ಲವಾದರು
ಗುಣಹೀನಮಗ ತಂದೆಗಪವಾದವಲ್ಲದೆ
ನಾನೆಂತು ಸಹಿಸುವೆ ಮಾತಾಡಿ ಸಲಹಯ್ಯ
ಚಿನ್ಮಯ ರಾಮೇಶ ಸಂಪ್ರೀತ ಎರ್ರಿತಾತ

(ಹಾಡಿದವರು ಲಕ್ಷ್ಮಮ್ಮ, ವಯಸ್ಸು ೬೦, ಚೇಳಗುರಿಕೆ ಗ್ರಾಮ)

ಎರ್ರಿತಾತನ ಚರಿತ್ರೆಯು ಗ್ರಾಮದಲ್ಲಿ ಮಾತ್ರವಲ್ಲದೇ ಬೇರೆ ಬೇರೆ ದಿಕ್ಕುಗಳಲ್ಲಿ ಆತನ ಪವಾಡ ಲೀಲೆಗಳು ಜನಮಾನಸದಲ್ಲಿ ಒಂದೊಂದು ರೀತಿಯ ವಿಭಿನ್ನ ಭಕ್ತಿಯ ಹಲವಾರು ಬಗೆಗಳು ಆತನನ್ನು ಸುತ್ತಿಕೊಂಡಿವೆ. ಒಬ್ಬ ಸಾಮಾನ್ಯ ಭಕ್ತಿಯು ಸಹ ಆತನ ಕುರಿತ ಅನಂತ ಭಕ್ತಿಯನ್ನು ಮೆರೆದಿರುವುದಕ್ಕೆ ಈ ಹಾಡು ಸಾಕ್ಷಿಯಾಗಿದೆ.

ಜಯ ಗುರುನಾಥ ಜಯ ಸುಖದಾತ
ಜಯ ಜನಪೂಜಿತ ಜಯ ಜಗವಂದಿತ

ಜಯ ಮಹಿಮೋನ್ನತ
ಜಯ ಸುಗುಣಾನ್ವಿತ
ಜಯ ನಿಜಭರಿತ
ಜಯ ಘನಚರಿಚ

ಇಳೆಯೊಳು ಮೆರೆವ
ಚೇಳ್ಳಗುರಿಕೆಯೊಳು
ನೆಲಸಿದ ಎರ್ರಿತಾತ

ಘನ ಮಾಯಾಜಿತ

ಸಲಹು ಮಂಗಲವಿತ್ತು

ವ್ರೋಕವನಿರತ

(ಹಾಡಿದವರು ರಂಗಮ್ಮ, ೭೦ ವಯಸ್ಸು, ಚೇಳ್ಳಗುರಿಕೆ ಗ್ರಾಮ, ಜಾತ್ರೆಯ ಸಮಯದಲ್ಲಿ ಕ್ಷೇತ್ರಕಾರ್ಯಕ್ಕೆ ಹೋದಾಗ ಮಂಗಳಗೀತೆಯನ್ನು ಹಾಡಿದ್ದು)

ಇದುವರೆಗೂ ಗಮನಿಸಲಾದ ಕೆಲವು ಗೀತೆಗಳನ್ನು ದೊಡ್ಡನಗೌಡವರು ಮತ್ತು ವಕ್ಕ ಸಂಬಂಧಿತ ಗೀತೆಗಳು ಎಂಬ ಅವಲೋಕನದಿಂದ ವಿಭಾಗಿಸುವುದರಲ್ಲಿ ಕಾರಣವಿಷ್ಟೇ ದೊಡ್ಡನಗೌಡರೆ ಕೆಲವೊಂದು ಗೀತೆಗಳನ್ನು ಕುರಿತು ಪ್ರಸ್ತಾಪಿಸಿರುವುದು ತಮ್ಮ ಕೆಲವು ಕೃತಿಗಳಲ್ಲಿ ಕಂಡುಬಂದಿದೆ. ಅವುಗಳನ್ನು ಅಲ್ಲಿಯೇ ಸಂಬಂಧಿಸಿದ ಕೃತಿಗಳನ್ನು ಸಹ ಉಲ್ಲೇಖಿಸಲಾಗಿದೆ. ಆದರೆ ಕ್ಷೇತ್ರಕಾರ್ಯಕ್ಕೆ ಹೋದಾಗ ಅವರ ಗೀತೆಗಳೆ ವಕ್ಕಗಳ ಬಾಯಲ್ಲಿ ಕಂಡುಬಂದವು. ಅವುಗಳನ್ನು ದೊಡ್ಡಗೌಡರೇ ರಚಿಸಿರಬಹುದು. ಹಾಗಾಗಿಯೇ ಮೇಲಿನ ಗೀತೆಗಳನ್ನು ಈ ರೀತಿ ನೋಡುವುದೇ ಹೆಚ್ಚು ಸೂಕ್ತವೆನಿಸಿತು.

**ವೈ.ಯಂ.ಚಂದ್ರಯ್ಯನವರ ಸಂಬಂಧಿಸಿದ ಭಕ್ತಿಗೀತೆಗಳು**

ಎರ್ರಿತಾತನು ಜೀವ ಸಮಾಧಿಯಾದ ನಂತರದ ದಿನಗಳಲ್ಲಿ ಎರ್ರಿತಾತನ ಕುರಿತ ಸಮಗ್ರ ಚರಿತ್ರೆಯನ್ನು ಕಟ್ಟುವ ನಿಟ್ಟಿನಲ್ಲಿ ಅನೇಕ ರೀತಿಯ ಚಿಂತನೆಗಳು ನಡೆದವು. ಅಂಥಹ ಚಿಂತನೆಗಳಿಗೆಲ್ಲ ಇಂಬುಕೊಡುವಂಥಹ ಮಹನೀಯರಲ್ಲಿ ಬೆಂಗಳೂರಿನ ಎ.ಜಿ.ಶಾಮಣ್ಣನವರು ಬಹುಮುಖ್ಯರು. ಏಕೆಂದರೆ ದೊಡ್ಡನಗೌಡರು, ಎ.ಜಿ, ಶ್ಯಾಮಣ್ಣನವರು, ನಾಗೇಶ ಶಾಸ್ತ್ರಿಗಳು, ಉಮಾಪತಿ ಮಠದಯ್ಯನವರು ಎರ್ರಿತಾತನ ಚರಿತ್ರೆ ಕಟ್ಟುವುದರಲ್ಲಾಗಲೀ, ಮಠವನ್ನು ಏಳಿಗೆಗೆ ತರುವುದರಲ್ಲಾಗಲೀ ಬಹುನಿಷ್ಠೆಯಿಂದ ಫಲಾಪೇಕ್ಷೆ ಇಲ್ಲದೆ ದುಡಿದವರು. ಅವರುಗಳ ನಿಸ್ವಾರ್ಥ ಸೇವೆಯ ಫಲವೇ ಇಂದು ವ್ಯಾಪಕವಾದ, ವಿಸ್ತಾರವಾದ ಎರ್ರಿತಾತನ ಕುರಿತು ತಿಳಿಯಲು ಸಹಾಯಕವಾಯಿತು ಎನ್ನಬಹುದು.

ಅಂತಹ ಸಂದಿಗ್ಧ ಹಾಗೂ ಸಂಕರದ ಸ್ಥಿತಿಯಲ್ಲಿ ಶ್ಯಾಮಣ್ಣನವರ ಮಾತಿಗೆ ಬೆನ್ನೆಲುಬಾಗಿ ನಿಂತವರಲ್ಲಿ ಸಿಡಿಗಿನ ಮೊಳೆ ವೈ.ಯಂ.ಚಂದ್ರಯ್ಯನವರು. ಶ್ಯಾಮಣ್ಣನವರ ಬಹುದಿನಗಳ ಕನಸು ನನಸಾಗಲು ಚಂದ್ರಯ್ಯನವರು ಕೈ ಜೋಡಿಸಿದರು. ಪರವಶ ಸ್ಥಿತಿಯ ವೈರಾಗ್ಯಮೂರ್ತಿಯಾದ ಎರ್ರಿತಾತನು ಸಂಚರಿಸಿದೆನ್ನಲಾದ ಅನೇಕ ಸ್ಥಳಗಳಿಗೆ ಕ್ಷೇತ್ರಕಾರ್ಯಕ್ಕೆಂದು ವೈ.ಯಂ.ಚಂದ್ರಯ್ಯನವರನ್ನು ನೇಮಿಸಲಾಯಿತು. ಆತನ ಮೂಲ, ಮಾತೃ ಪಿತೃಗಳು ಮೊದಲಾದ ಅವರ ಪೂರ್ವಚರಿತ್ರೆ ತಿಳಿಯಲು ಕಂಗಾಲಾಗಿ ಅವರು ಪಟ್ಟ ಎಲ್ಲಾ ನೋವುಗಳು, ಭಾವಗಳಾಗಿ ವ್ಯಕ್ತವಾಗಿದ್ದು ಹೀಗೆ.

ಎನ್ನಯ್ಯ ಎರ್ರಿತಾತ ನಿಮ್ಮೂರಾವುದು ಪೇಳಾ

ಸುಮ್ಮನಿರುವ ನಿನ್ನೂರು ಎನಗೆ ಬೇಕಯ್ಯಾ ||ಪ||

ನಿಮ್ಮೂರು ಬೇಕೆಂದು ಎನ್ನಗುರುವು ಪೇಳ
ನಿಮ್ಮೂರು ಹುಡುಕಿದೆ ಎನಗೆ ಸಿಗದಯ್ಯಾ
ಸುಮ್ಮನಿರುವ ನಿಮ್ಮೂರು ಅನ್ಯಶೀಲ ಬಲ್ಲರು
ನಿಮ್ಮೇನೆಂದು ಎನಗೆ ನನ್ನಿಯೊಳ್ಪೇಳ್ವಾತಾ ||೧||

ಹಿರಿಯೂರ ಕಡೆಯೆಂಬ ಹಿರಿಯರ ನುಡಿನಂಬಿ
ಹಿರಿಯೂರ ಕಡೆಗೋಗಿ ಪರಿಪರಿ ಕೇಳಿದೆ
ಅರಿಯೇವೆಂಬುರು ನಿನ್ನ ಪರದೇಶಿಯೇ ನೀನು
ಅರಿಯುವದೆಂತು ನಿನ್ನ ಪದಮಾರ ಮಾರ್ಗವ ||೨||

ಪ್ರಸ್ತುತ ಭಾಗದ ಸನ್ನಿವೇಶಕ್ಕೆ ಪೂರಕವೆಂಬಂತೆ ಅಕ್ಕಮಹಾದೇವಿಯು ತನ್ನ ಅಲೌಕಿಕ ಪತಿಯ ಹುಡುಕಾಟ ತಾಕಲಾಟಗಳು ನಡೆದಾಗ ಪರಿತಪಿಸಿದ ರೀತಿ ಇಂತಹದ್ದು ಇರಬೇಕು. ಈ ಎರಡು ಸನ್ನಿವೇಶಗಳು, ಸಂದರ್ಭಗಳು ಬೇರೆ ಬೇರೆಯಾಗಿದ್ದರೂ ಅಂತರಂಗದ ತುಮುಲಗಳ ವೇದನೆ ಹಾಗೂ ನಿವೇದನೆಗಳ ಸಾಮ್ಯಗಳನ್ನು ಕಾಣುವುದರಲ್ಲಿ ಸಂದೇಹವಿಲ್ಲ ಎನ್ನಬಹುದು. ಆತನ ಪೂರ್ವಚರಿತ್ರೆ ಕುರಿತು ಅರಿಯಲು ಹೋಗಿ ಸಾಗಿಸಲಾದ ನಿರ್ಲಿಪ್ತತೆಯಿಂದ ಕೂಡಿದ ಮನಸ್ಸು ಈ ರೀತಿಯಾಗಿತ್ತು.

ಪರತರರು ದುರ್ಗದ ಜಗದ್ಗುರು
ವರರು ಜಯದೇವ ಪ್ರಭುಗಳಾ
ದಪರದೊಳ್ ಶ್ಯಾಮಣ್ಣನೆಸಗಿದ ಭಿನ್ನಪದೊಳೊಮ್ಮೆ
ಕರುಣದಿಂದಾಗಮಿಸಿ ಮಡಿಮಾ
ಕರನ ತಾತನ ಮಠದೊಳೈಸಲೆ
ಹರಸಮರ್ಚಾಪದಿಗಳ ಗೈದುರು ತೃಪ್ತಿಯೊಂದಿದರು.
(ನಾಗೇಶ ಶಾಸ್ತ್ರಿಗಳು ವೈ: ಲೀಲಾಮೃತ ಸಂಧಿ, ೧೬, ಪು.೧೮೭)

ಮೇಲಿನ ವಾಕ್ಯಗಳನ್ನು ಗಮನಿಸಿದಾಗ ಶ್ಯಾಮಣ್ಣನವರಿಗೆ ತಾತನವರ ಕುರಿತು ಇದ್ದ ಶ್ರದ್ಧೆ ಭಕ್ತಿ ಗೌರವಗಳನ್ನು ಸೂಚಿಸುತ್ತದೆ. ಅದಕ್ಕಾಗಿಯೇ ಅನೇಕ ರೀತಿಯ ಪ್ರಚಾರಗಳಿಂದ ಜಗದ್ಗುರು ಮುಂತಾದ ಸ್ವಾಮೀಜಿಗಳ ದರ್ಶನಕ್ಕೆ ಭಿನ್ನವಿಹಿಸಿದರು. ತಾತನ ಮಠದ ಸರ್ವತೋಮುಖ ಪ್ರಗತಿಗೆ ಪ್ರಯತ್ನಿಸಿ ತಮಿಳುನಾಡಿನಿಂದ ಶಿಲ್ಪಿಗಳನ್ನು ಕರೆಸಿ ವಿಗ್ರಹ, ಗೋಪುರಗಳನ್ನು ಕಟ್ಟಿಸಿದರು. ರಾಜ್ಯದ ನಾನಾ ಭಾಗಗಳಿಂದ ಬರುವ ಭಕ್ತರಿಗೆ ಸಕಲ ಸೌಹಾರ್ದಗಳನ್ನು ಏರ್ಪಡಿಸಿ ಹಗಲಿರುಲು ಆತನ ಸೇವೆಗೆ ಮುಡುಪಾಗಿಸಿದ್ದರು.

ದೇಹದೊಳಗಣಾತ್ಮ ಕಾಣದಂತೆ ಮಾಯೆಯಾಯಿತೆಂಬಂತೆ ೨೪.೧೧.೧೯೬೦ರಂದು ಇಹಲೋಕದ ಎಲ್ಲಾ ಕಾರ್ಯಗಳಿಗೆ ಸಮಾಪ್ತಿ ಹೇಳಿ ಬಾರದಿರುವ ಜಾಗಕ್ಕೆ ನಡೆದರು. ಅವರ ಸಮಾಧಿಯನ್ನು ಮಠದಲ್ಲಿಯೇ ನೆರವೇರಿಸಲಾಗಿದೆ. ಇಂಥಹ ಮಹಾತ್ಮ ಶ್ಯಾಮಣ್ಣನವರ ಸಾವನ್ನು ಕಂಡ ಚಂದ್ರಯ್ಯನವರು "ಅನ್ಯಾಯ ಮಾಡಿದೆಯ್ಯಾ" ಎನ್ನುವ ದುಃಖತಪ್ತ ಮೊರೆಯಲ್ಲಿ ತಾತನನ್ನು ನಿಂದಿಸಿದ ಪರಿಯನ್ನು ಈ ರೀತಿಯಾಗಿ ನುಡಿದಿದ್ದಾರೆ.

ಓ ತಾತ ಅನ್ಯಾಯ ಮಾಡಿದೆಯಾ

ನಮ್ಮ ಶ್ಯಾಮಣ್ಣನನು ಕರೆದೊಯ್ದು

ನೀನೆಮಗೆ ಅನ್ಯಾಯ ಮಾಡಿದೆಯಾ ||೧||

ಕಾಡಿ ಬೇಡುವರುಂಟು ಕೊಡ ಬಯಸುವುರುಂಟು

ನಾಡ ಕಂಟಕರುಂಟು ಕೇಡಿಗರು ಉಂಟು

ಕೇಡಿಗಾಸೆಗೆ ಸಿಲ್ಕಿ ನಾಡಿಸುಲಿವರ ಬಿಟ್ಟು

ಕೇಡನರಿಯದ ನಮ್ಮ ಶ್ಯಾಮಣ್ಣನೆಂತೊಯ್ದು ||೨||

ಒಳ್ಳೆಯವರಿಗೆ ಉಳಿಗಾಲವಿಲ್ಲವೆಂಬ ಸಂದೇಶವನ್ನು ಸಾರುವನೆಂಬಂತೆ ಚಂದ್ರಯ್ಯ ತನ್ನ ಗುರು ಶ್ಯಾಮಣ್ಣನನ್ನು ಅಗಲಿದಾಗ ತಾತನನ್ನು ಪ್ರಶ್ನಿಸಿದ್ದು ಭಕ್ತಿಯ ವಿಧದಲ್ಲೊಂದಾಗಿದೆ. ಭಕ್ತ ಶ್ಯಾಮಣ್ಣನು ತನ್ನಲ್ಲಿಗೆ ಕರೆದೊಯ್ದು ನಿನಗೆ ಹುಚ್ಚನೆಂಬುವ ಹೆಸರ ಸಾರ್ಥಕ ಮಾಡಿಕೊಂಡೆಂದು ನಿಂದಿಸಿದ್ದಾರೆ.

ಚಂದ್ರಯ್ಯನವರ ಮನದ ಇಂಗಿತ ಹೇಗಿತ್ತೆಂದರೆ ಪ್ರತಿವರ್ಷ ನಡೆಯುವ ಜಾತ್ರೆಗೆ ಶ್ಯಾಮಣ್ಣನವರ ಪರಿಶ್ರಮ ಎಷ್ಟಿತ್ತೆಂಬುದು ಈ ಸ್ಥಿತಿಯಲ್ಲಿ ವ್ಯಕ್ತಪಡಿಸಿದ್ದಾರೆ.

ಎತ್ತ ಹೋದಿರಿ ನೀವು ಶ್ಯಾಮಣ್ಣನವರೇ

ಗೊತ್ತಾಗಲೊಲ್ಲದೇ ನೀವಿರುವ ತಾಣ

ತಾತನೊಡಗೂಡಿ ಪರಲೋಕಯಾತ್ರೆಗೆ ತೆರಳಿ

ನೀ ತಡವ ಮಾಡಿದೆಯಾ ಜಾತ್ರಗಾ ಬರದೆ

ಆತ ನೋಡನೇಕ್ಹೋದ ಲೋಕದಾಟವ ಬಿಟ್ಟು

ಜಾತಿ ಭೇದವನಳಿದ ಅದ್ವೈತೆಯೊಡನೆ

(ಜೋಳದರಾಶಿ ದೊಡ್ಡನ ಗೌಡರು (ಸಂ), ಭಕ್ತಿಗೀತೆಗಳು ಪು.೬೩)

ಮಠದಗೋಪುರ, ಜಾತ್ರೆಯ ವೈಭವವನ್ನು ನೋಡಿ ಜಾತ್ರೆಗೆ ಬಂದವರು ಇವುಗಳನ್ನು ಯಾರು ಕಟ್ಟಿಸಿದರು ಎಂದು ಕೇಳಿದಾಗ ನಾನೇನು ಹೇಳಲಿ ಪ್ರತಿ ಜಾತ್ರೆಗೆ ನೀನಿದ್ದು ಎಲ್ಲಾ ಕಾರ್ಯವನ್ನು ಮಾಡುತ್ತಿದ್ದೆ. ನೀನು ತಾತನೊಡನೆ ಪರಲೋಕದ ಯಾತ್ರೆಗೆ ಹೋದೆಯಾ ಎನ್ನುವ ಸಂತಾಪ ಪರಿತಾಪಗಳೆರಡು ಇಮ್ಮಡಿಗೊಂಡಿರುವುದು ಈ ಗೀತೆಯಿಂದ ತಿಳಿಯಲಾಗುತ್ತದೆ.

ಅಜ್ಞಾತ ಕವಿಯೊಬ್ಬರು ಬರೆದಿರಬಹುದಾದ ಜೋಗುಳ ರೂಪದ 'ಪರಬ್ರಹ್ಮ ಜೋಗುಳ' ಎನ್ನುವ ಹಾಡು ತಾತನವರ ಸಿದ್ಧಿಯನ್ನೇ ಪರಿಗ್ರಹಿಸುವಂತಿದೆ.

ಜೋ ಜೋ ಪರಬ್ರಹ್ಮರೂಪ ಜೋ ಜೋ
ಜೋ ಜೋ ಸಿದ್ಧಯೋಗಿ ಹೃದ್ದೀಪ ಜೋ ಜೋ
ಜೋ ಜೋ ದ್ವೈತಗುಣಾವಳಿ ಲೋಪ
ಯತಿರಾಜ ವಿರಾಜಿತ ಕರ್ಮನಿರ್ಲೇಪ ಜೋ ಜೋ ||೧||

ಅದು ಇದು ಎನ್ನುವ ಅಖಿಲ ತತ್ತ್ವ ಜರಿದು
ವಿದಿತ ಚಿದಾನಂದ ನೀನೆ ಎಂದರಿದು ಜೋ ಜೋ
ಹೃದಯದಿ ನಂಬಿ ದ್ವೈತಮತಿ ಮರೆದು
ಸದಮಳ ಜ್ಞಾನಿಯಾಗಿಹೆ ಸುಖಮರೆದು ಜೋ ಜೋ ||೨||

ಭೂತಳದಿ ನರರೂಪವನ್ನು ನೀ ತಳೆದು
ಭೂತ ಪರಿಚರದ ವಿಸ್ತಾರವನು ತಿಳಿದು ಜೋ ಜೋ
ಜಾತಿ ನಾಮಗಳೆಂಬ ಸಂಕಲ್ಪವಳಿದು ಎರ್ರಿ
ತಾತನೇನೆನಿಸದೆ ವಾಸನೆ ಕಳೆದು ಜೋ ಜೋ ||೩||

ಪಿತಮಾತೆ ಜನ್ಮಭೂಮಿಗಳೆಲ್ಲ ಬಿಟ್ಟು
ಕ್ಷಿತಿಯ ಭೋಗವನ್ನೆಲ್ಲಾ ದ್ವೇಷಿಸಿ ಸುಟ್ಟು ಜೋ ಜೋ
ಮತಿಯೊಳು ವೈರಾಗ್ಯ ತಾಳಿ ಗೃಹ ಬಿಟ್ಟು ಸತ್ಯ
ಯತಿಯೆನಿಸಿದ ಬ್ರಹ್ಮನೊಳು ಚಿತ್ತವಿಟ್ಟು ಜೋ ಜೋ ||೪||

(ಕರಿಯಪ್ಪ ಜೆ: ಬಳ್ಳಾರಿ ಜಿಲ್ಲೆಯ ಅವಧೂತರು ಅಪ್ರಕಟಿತ ಮಹಾಪ್ರಬಂಧ ಪು.೨೦೫)

ಮೇಲಿನ ಗೀತೆಗಳನ್ನು ವೈ.ಯಂ.ಚಂದ್ರಯ್ಯನವರು ಎರ್ರಿತಾತನ ಚರಿತ್ರೆಯನ್ನು ತಿಳಿದುಕೊಳ್ಳಲು

ಎ.ಜಿ.ಶ್ಯಾಮಣ್ಣನವರ ಮಾತಿಗೆ ಒಳಗಾಗಿ ಕ್ಷೇತ್ರಕಾರ್ಯ ಕೈಗೊಂಡಾಗ ಎದುರಾದ ಹಲವಾರು ಪರಿಸ್ಥಿತಿಯನ್ನು ತಮ್ಮ ಭಾವನೆಗಳ ಮೂಲಕ ಗೀತೆಗಳನ್ನು ಕಟ್ಟಿದ್ದಾರೆ.

**೩. ವೀಡಿಯೋ, ಆಡಿಯೋಗಳ ಸಂಬಂಧಿತ ಭಕ್ತಿ ಗೀತೆಗಳು**

ಇಂದು ನಾವು ಪ್ರಗತಿ ಪಥದತ್ತ ದಾಪುಗಾಲಿಡುತ್ತಿರುವುದು ಕೇವಲ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ವಲಯಗಳಲ್ಲಿ ಅಷ್ಟೇ ಅಲ್ಲ. ಧಾರ್ಮಿಕ ಕ್ಷೇತ್ರದಲ್ಲಿಯೂ ಅದರ ವ್ಯಾಪಕತೆ ಹೆಚ್ಚಾಗಿ ಕಂಡುಬರುತ್ತಿದೆ. ಪುಣ್ಯ ಪುರುಷರ ಜೀವನ ಚರಿತ್ರೆ, ಅವರ ಪವಾಡಗಳು, ಅಲೌಕಿಕತೆಯ ಸಿದ್ಧಿಯು ಔನ್ನತ್ಯತೆಗಳನ್ನೆಲ್ಲಾ ಈ ವಿವಿಧ ಮಾಧ್ಯಮಗಳ ಮೂಲಕ ಪಸರಿಸುವ ಮತ್ತು ಆ ಮೂಲಕ ದೈವೀ ಸಂಬಂಧಿ ಕ್ಷೇತ್ರಗಳ, ದೈವೀ ಪುರುಷರ ಬದುಕನ್ನು ಕಟ್ಟುವ ಪ್ರಯತ್ನದಲ್ಲಿ ಮಾಧಮಗಳು ಸಹಕಾರಿ. ಇಂಥಹ ಬಹುಸಂಬಂಧಿ ಮಾಧ್ಯಮಗಳಲ್ಲಿ ವೀಡಿಯೋ, ಆಡಿಯೋ ಕ್ಷೇತ್ರವೂ ಒಂದು. ತ್ವರಿತಗತವಾಗಿ ಜನರನ್ನು ಅವರ ಬದುಕನ್ನು ಮುಟ್ಟುವ ಕಾರ್ಯಗಳನ್ನು ಮಾಡುತ್ತವೆ. ದೊಡ್ಡನಗೌಡರು ಮತ್ತು ಕೆಲವು ವಕ್ತೃ ಸಂಬಂಧಿದ ಭಕ್ತಿ ಗೀತೆಗಳು, ವೈಯಂ ಚಂದ್ರಯ್ಯನವರ ಸಂಬಂಧಿತ ಭಕ್ತಿಗೀತೆಗಳಂತೆ ಇತ್ತೀಚಿನ ದಿನಗಳಲ್ಲಿ ವೀಡಿಯೋ ಹಾಗೂ ಆಡಿಯೋಗಳ ಮೂಲಕ ಎರ್ರಿತಾತನ ಕುರಿತ ಪ್ರಸ್ತುತ ರಾಜ್ಯದ ವಿವಿಧ ಭಾಗಗಳಿಗೆ ಪಸರಿಸಿರುವುದನ್ನು ಕಾಣುತ್ತೇವೆ. ಇಲ್ಲಿ ಕೆಲವು ಸೂಕ್ತವಾದ ಮತ್ತು ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದ ಭಕ್ತಿ ಗೀತೆಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಶಿವನ ಜಡೆಯಿಂದ**

ಶಿವನ ಜಡೆಯಿಂದ ಸೃಷ್ಟಿ ಸೊಬಗಿನಿಂದ ಇಳಿದು ಬಂತುಕಿರಣಾ
ಎದ್ದು ಗುಡಿಯಿಂದ ಬಂದು ಋಷಿಯಿಂದ ತೋರು ನಿನ್ನ ಚರಣ
ಶಿವನ ಜಡೆಯಿಂದ ಸೃಷ್ಟಿ ಸೊಬಗಿನಿಂದ ಇಳಿದು ಬಂತು ಕಿರಣಾ
ಎದ್ದು ಗುಡಿಯಿಂದ ಬಂದು ಋಷಿಯಿಂದ ತೋರು ನಿನ್ನ ಚರಣ
ತಂಪು ಸೂಸುತ್ತಿದೆ, ಇಂಪು ಹಾಡುತ್ತಿದೆ
ನಿನ್ನ ನಾಮ ಕೋಟಿ
ಗುರುವರ್ಯ ಬಂದು, ನಿನ್ನ ಕೃಪೆಗಿಂದು
ಗುರುವರ್ಯ ಬಂದು ನಿನ್ನ ಕೃಪೆಗಿಂದು
ಹೇಳು ಯಾರು ಸಾಟಿ
ಬೆಳಗಾಯಿತು ಏಳು ಗುರುವೇ, ಶ್ರೀ ಎರ್ರಿತಾತ ಪ್ರಭುವೇ.
ಬೆಳಗಾಯಿತು ಏಳು ಪ್ರಭುವೇ, ಶ್ರೀ ಎರ್ರಿತಾತ ಗುರುವೇ ||೨||
ಕಾದಿಹೆನು ಜೀವ ಬಂದು ಕಲ್ಲಿನ ಬಸವ ಇಂದು

ತಿಕ್ಕಯ್ಯ ಶಿಷ್ಯನ ಆತ್ಮ ಬಂದಿಹುದು ಸೇವೆಗೆಂದು
ಕಾದಿಹೆನು ಜೀವ ಬಂದು ಕಲ್ಲಿನ ಬಸವಾ ಇಂದು
ತಿಕ್ಕಯ್ಯ ಶಿಷ್ಯ ಆತ್ಮ ಬಂದಿಹುದು ಸೇವೆಗೆಂದು
ಕರುಣಿಸು ಬಂಜೆಗಿಂದೂ, ಕನಿಕರಿಸು ಭಕುತರಿಗಿಂದೂ
ಕರುಣಿಸೂ ಬಂಜೆಗಿಂದೂ, ಕನಿಕರಿಸು ಭಕುತರಿಗಿಂದೂ
ಸಕಲ ಜೀವಿ ಭಕ್ತಸ್ತೋಮ ನಿಂತಿಹಿದೂ ಕಾಣಲೆಂದೂ
ಸಕಲ ಜೀವಿ ಭಕ್ತಸ್ತೋಮ ನಿಂತಿಹಿದೂ ಸೇವೆಗೆಂದೂ ||ಬೆಳಗಾಯಿತು||
ದೀಪದೂಪ ಮಂಗಳ ನಿಮಗೆ, ಕಷ್ಟ ನಷ್ಟ ಕೆಳವಾತನಿಗೆ
ಶಿವನೇ ನೀನೇ, ನೀನೇ ಶಿವನೊ, ಒಂದೂ ಅರಿಯಾದಾಯಿತು ನಮಗೆ ||೨||
ಯೋಗ ನಿದ್ರೆ ತೋರಿದು ಏಳು, ಘನ ಪೂಜೆ ಧ್ಯಾನವ ಕೇಳು ||೨||
ನಿನ್ನವರ ಕರುಣೆಯ ಇರಿಸಿ ನೀ ಬೆಳಗು ಭಕ್ತರ ಬಾಳು ||೨|| ||ಬೆಳಗಾಯಿತು||
ಶಿವನ ಜಡೆಯಿಂದ ಸೃಷ್ಟಿ ಸೊಬಗಿನಿಂದ ಇಳಿದು ಬಂತು ಕಿರಣಾ...
ಎದ್ದು ಗುಡಿಯಿಂದ ಬಂದು ಖುಷಿಯಿಂದ ತೋರು ನಿನ್ನ ಚರಣಾ...

**ಬಣ್ಣದ ಮನೆಕಟ್ಟಿ**

'ಬಣ್ಣದ ಮನೆಕಟ್ಟಿ' ಎಂಬ ಗೀತೆಯು ಒಂದು ಪ್ರಾತಿನಿಧಿಕ ಗೀತೆಯಂತಿದ್ದು, ಎರ್ರಿತಾತನ ಕೆಲವು ಪವಾಡಗಳ ಹಿನ್ನೆಲೆಯಲ್ಲಿ ಇದನ್ನು ರಚಿಸಲಾಗಿದೆ. ಕಲ್ಲು ಬಸವನ ನಡೆಸಿದ, ಸತ್ತಿರುವ ಹದ್ದನ್ನು ಎಬ್ಬಿಸಿದ ಹಾಗೂ ಸರ್ಪವನ್ನು ಬಂಗಾರವಾಗಿಸಿದ ಪವಾಡಗಳನ್ನು, ಭಕ್ತಿಯ ಸಂಕೇತಗಳಂತೆ ಗೀತೆಗಳಿಂದ ಅಭಿವ್ಯಕ್ತಿಸಲಾಗಿದೆ.

ಬಣ್ಣಾದ ಮನೆಕಟ್ಟಿ ಬಂಗಾರ ಬಾಗಿಲಿಟ್ಟು
ಬಣ್ಣಾದ ಮನೆಕಟ್ಟಿ ಬಂಗಾರ ಬಾಗಲಿಟ್ಟು
ಸರಿಯಿಲ್ಲ ಮನೆಯ ಅಡಿಪಾಯ ||೨||
ಗುರು ಎರ್ರಿತಾತರ ನಾಮವ ಜಪಿಸು ||೨||
ಪಾವನ ಆಗುವುದು ನರಕಾಯ ||೨|| ||ಪ||
ಕಲ್ಲಿನ ಬಸವನ ನಡೆಸಿದ ಯೋಗಿ
ಸತ್ತಿರುವ ಹದ್ದನು ಎಬ್ಬಿಸಿದ ಕೂಗಿ ||೨||
ಶರಣರ ವಾಣಿಯೇ ಅಮೃತಬಿಂದು

ಅರಿಯಲು ಆಗದ ಸಾಗರ ಸಿಂಧು
ಅರಿವಿನ ಜನ್ಮ ಇದು ಅರಿಯೋಣ, ಎರ್ರಿತಾತನಿಗೆ ನಮಿಸೋಣ ||ಪ||

ಮಾಡಿದರು ಹಾವನ್ನು ಚಿನ್ನಗಳಾಗಿ
ನೀಡಿದರು ವರವ ವೀಣೆಗಳಾಗಿ
ಶರಣರ ಮನೆಯೊಳು ಜ್ಞಾನದ ಬಿಂಬ
ಅಲ್ಪನ ಮನೆಯೊಳು ಕುಸದೃತೆ ಕಂಬ ||೨||

ಗುರುವಿನ ಗುಲಾಮ ಆಗೋಣ ಎರ್ರಿತಾತರಿಗೆ ಬಾಗೋಣ ||ಪ||

ದಿನ ಎಷ್ಟೋ ಇದಕ್ಕೆ ಕೊಡತ್ತಿದ್ದ ಕೋಟಿ ಗಳಿಸಿಟ್ಟ, ಗೌಡ ಸಾವಿರ ಕೋಟಿ ||೨||

ಗೌಡನ ಸಾವಿನ ಶಕುನವ ಸಾರಿ ಮೇಲ್ ಹೋಗಿಕುಂತ ಶಿಖರವ ಏರಿ ||೨||

ಯಾರಿಗೂ ತಪ್ಪಿಲ್ಲ ಮಸಣ ಮಾಡದಿರು ನೀ ಪರಿವೈಸನಾ.......||ಪ||

ಭೂಮಿಗಿಳಿದ

ಭಾರತೀಯ ಸಂಸ್ಕೃತಿಯಲ್ಲಿ ಅವತಾರಕ್ಕೆ ಬಹಳಷ್ಟು ವ್ಯಾಪಕತೆಯನ್ನು ನೀಡಿರುವುದು ಸಾಮಾನ್ಯ. ಎರ್ರಿತಾತನ ಬಾಲ್ಯ, ಯೌವ್ವನ, ಕನವರಿಕೆ, ಕನಸುಗಳನ್ನು ಮೀರಿ ಲೌಕಿಕತೆಯಿಂದ ಅಲೌಕಿಕತೆಡೆಗೆ ಪಯಣಿಸಿದ ರೀತಿಯನ್ನು ಅವತಾರ ರೂಪದ ವಾಗ್ಮಿಯತೆಯಡಿಯಲ್ಲಿ ಗೀತೆಗಳ ರೂಪದಲ್ಲಿ ಜೋಡಿಸಿರುವುದು ವಿಶೇಷವಾಗಿದೆ.

ಭೂಮಿಗೆ ಇಳಿದು ಶಿವನಾವತಾರ ಚೇಳ್ಳಗುರ್ಕಿ ಜ್ಯೋತಿ
ಭೂಮಿಗೆ ಇಳಿದು ಶಿವನಾವತಾರ ಚೇಳ್ಳಗುರ್ಕಿ ಜ್ಯೋತಿ
ಭಕ್ತರೆಂದರೆ ಎರ್ರಿತಾತರಿಗೆ, ಭಕ್ತರೆಂದರೆ ಎರ್ರಿ ತಾತರಿಗೆ
ಎಲ್ಲಿಲ್ಲದ ಪ್ರೀತಿ, ಎಲ್ಲಿಲ್ಲದ ಪ್ರೀತಿ.
ಭೂಮಿಗೆ ಇಳಿದು ಶಿವನಾವತರ ಚೇಳ್ಳಗುರ್ಕಿ ಜ್ಯೋತಿ ||೨||

ಎಲ್ಲಿ ಹುಟ್ಟಿದರು, ಎಲ್ಲಿ ಬೆಳೆದರು ಆ ಶಿವನೇ ಬಲ್ಲ
ಗರ್ವ ಆಳಿಸಿದರು, ಮರ್ಮ ತಿಳಿಸಿದರು ಕಾಯಕದಿ ಎಲ್ಲಾ
ಮಲ್ಲಪ್ಪ ಮಟ್ಟಿಯ ಮೇಲೆ ಕುಳಿತು ಯೋಗವನು ಗೈದು
ಭಕ್ತರ ಬೇಡಿಕೆಯಂತೆ ತಾತ ಗ್ರಾಮಕ್ಕೆ ತಾ ಬಂದಾ..
ಗುಡಿಸಲ ಕಂಡಾನೋ, ಗುಡಿಸಲ ಗೋಪುರ ಮಾಡ್ಯಾನೋ ಎರ್ರಿತಾತ ||ಭೂ||
ಹದಿನೆಂಟನೂರು ತೊಂಬತ್ತೇಳರ ಏವಿಳಂಬಿ ವರ್ಷ

ಎರ್ರಿತಾತರ ಪಾದ ಸ್ಪರ್ಶಿಸಿ ಗ್ರಾಮಕ್ಕಾಯಿತು ಹರ್ಷ
ಮುಷ್ಟೂರಿನಲ್ಲಿ ಕಲ್ಲು ಬಸವನ ಕರೆದು ನಡೆಸಿದನು
ಊರ ಗೌಡನ ಮರಣದ ವಾರ್ತೆಯ ಮೊದಲೇ ಸಾರಿದನು.
ಹಾವನು ನೀಡಿದನು, ಹಾವನೂ ಚಿನ್ನವ ಮಾಡಿದನು ಎರ್ರಿತಾತ ||ಭೂಮಿ||

ಇಟ್ಟರೆ ವರವು, ಕೊಟ್ಟರೆ ಶಾಪ, ಮಾತೇ ಮಾಣಿಕ್ಯ
ಗುರುವಿನ ಮನದಾಳ ತಿಳಿದಿದ್ದ ಈತ ಎಂಥಹ ಚಾಣುಕ್ಯ
ಹತ್ತೊಂಬತ್ತುನೂರ ನಲವತ್ತೇಳರ ಇಸವಿಯ ವರ್ಷದಲ್ಲಿ
ದುಂದುವಿ ನಾಮ ಜ್ಯೇಷ್ಠ ಶುದ್ಧದ ಚೌತಿಯ ದಿನದಲ್ಲಿ
ಭಕ್ತರ ಆಗಲಿದರು ಶಿವನ ಪಾದವ ಸೇರಿದರು ಎರ್ರಿತಾತ ||ಭೂಮಿ||

### ಶ್ರೀಕರ ಶುಭಕರ

ಈ ಗೀತೆಯು ಭಕ್ತಿಯ ಭಾವೈಕ್ಯ ಸಂಕೇತವಾಗಿದೆ. ಪ್ರತಿಯೊಂದು ಸಾಲುಗಳು ಆತನ ಪರಮಾರ್ಥಿಕ ವಾಸ್ತವ್ಯಕ್ಕೆ ಸಾಕ್ಷಿಯಾಗಿದ್ದು, ನಿಷ್ಠೆಭಕ್ತಿಯಲ್ಲಿ ಮಿಂದ ಜನರಿಗೆ ಆತನ ಅನುಗ್ರಹ ಹಾಗೂ ವರದಾನ ಪಡೆದದ್ದು ಮತ್ತು ಬಂಜೆಯು ಬಸುರಾಗುವ ಲೀಲೆಯನ್ನು ಮಾರ್ಮಿಕವಾಗಿ ಭಕ್ತಿಯಲ್ಲಿ ಮುಳುಗಿಸಿರುವುದು ಈ ಗೀತೆಯಲ್ಲಿ ಕಂಡುಬರುತ್ತದೆ.

ಶ್ರೀಕರ ಶುಭಕರ ಹೊನ್ನಿನ ನೇಸರ
ಹರಿಸಿದ ಬೆಳಕಿನ ಸಾಗರ ||೨||
ವಿಷಯ ಕಳೆಯಿತು ಜಗದ ಜೀವಿಯ ಬಾಳಿಗೆ ಬರೆದನು ಓಂಕಾರ
ಶ್ರೀಕರ ಶುಭಕರ ಹೊನ್ನಿನ ನೇಸರ ಹರಿಸಿದ ಬೆಳಕಿನ ಸಾಗರ
ವಿಷಯ ಕಲೆಯುತು ಜಗದ ಜೀವಿಯ ಬಾಳಿಗೆ ಬರೆದನು ಓಂಕಾರ
ಏಳೋ ಏಳೂ ಕರುಣಾಕರ ಎರ್ರಿತಾತ ವರ ಬಂದಾನಾ..
ಏಳೂ ಏಳೂ ಯೋಗಜೀವಿಯೇ ಬಾಳ ಬೆಳಗುವ ಜ್ಯೋತಿಯೇ ||೨||
ಮಿಂದು ಮಡಿಯುಟ್ಟು ಭಕ್ತ ನಡೆಯಲಿ ತಂದರು ಗಂಗೆಯ ಅಭಿಷೇಕಕ್ಕೆ
ಹತ್ತು ಹಲವು ವಿಧ ಹೂವ ರಾಶಿ ಇದೆ ತಾತ ನಿನ್ನೆಯ ಪೂಜೆಗೆ
ತುಂಬು ಮನದಲಿ ತಂದ ನೈವೇದ್ಯ ನಿನ್ನ ಪಾದಕೆ ಅರ್ಪಣೆಯಾ.... ||೨||
ಪ್ರಸನ್ನನಾಗಿ ಹರಸು ಭಕ್ತಕುಲ ಚೇಳ್ಳಗುರ್ಕಿ ಶ್ರೀ ದೈವವೇ
ಚೇಳಗುರ್ಕಿ ಶ್ರೀ ದೈವವೇ ||ಏಳು||

ಕೋಟಿ ದೇವರು ಪುಷ್ಪ ಮಳೆಗೇರಿಯೇ ನಿನ್ನ ಗುಡಿ ಮುಂದೆ ಕಾದಿಹಿರು
ಅಷ್ಟು ದಿಕ್ಕಲ್ಲಿ ವಿಶಿಷ್ಟ ನಾದವು ಮೊಳಗಿ ನಿನಗೆ ಶುಭಕೋರಲು
ಎರ್ರಿತಾತನೇ ನಿನ್ನ ನಾಮ ಲೀಲೆಯ ಹಾಡಿ ನಲಿದಿದೆ ಭಕ್ತಕುಲ ||೨||
ನಂದಾದೀಪದ ಸಿರಿ ಬೆಳಕಲಿ ಹೊಳಿದಿದೆ ನಿನ್ನಯ ರೂಪವು
ಹೊಳಿದಿದೆ ನಿನ್ನಯ ರೂಪವು ||ಏಳೂ||

ಬಂಜೆ ಮಡಿಲೊಳು ಕುಲವ ಬೆಳಗಿಸಲು ಕಂದನಾಗಿ ನೀ ಬರಲು
ನಿನ್ನನೇ ನಂಬಿ ಬಾಳುತ್ತಿರುವವಗೆ ಸಿರಿ ಸೌಖ್ಯವನೂ ನೀಡಲು
ಸತ್ತ ಜೀವಿಗೆ ಪ್ರಾಣ ನೀಡಿದ ಅಗಣಿತ ಮಹಿಮಾ ಸಾಗರ
ಸತ್ತ ಜೀವಿಗೆ ಪ್ರಾಣ ನೀಡಿದ ಅಗಣಿತ ಮಹಿಮಾ ಸಾಗರ
ಕಂಬಳಿಯೊಳಗಿದ್ದ ಹಾವ ಚಿನ್ನವ ಮಾಡಿ ತೋರದ ಮಹಾಮಾಯಗಾರ
ಮಾಡಿ ತೋರದ ಮಹಾ ಮಾಯಗಾರ
||ಶ್ರೀಕರ ಶುಭಕರ||

**ಜೋಡೆತ್ತು ಕಟ್ಟಿ**

ಜಾತ್ರೆಯ ಸಂಭ್ರಮದ ಒಟ್ಟು ಪರಿಭಾವಿಸುವಿಕೆ ಈ ಗೀತೆಯಲ್ಲಿ ಅಭಿವ್ಯಕ್ತಗೊಂಡಿದೆ. ಸಾಮಾನ್ಯವಾಗಿ ಗ್ರಾಮಗಳಲ್ಲಿನ ಜಾತ್ರೆಗಳಿಗೆ ವಿವಿಧ ಹಳ್ಳಿಗಳಿಂದ ಜನರು ಜೋಡೆತ್ತು ಬಂಡಿಯಲ್ಲಿಯೇ ಬರುವುದು ಕಂಡುಬರುತ್ತದೆ. ಜೋಡೆತ್ತು ಜೋಡಿ, ಜೋಡಿ ಕಾಯಿ ಇವುಗಳೆಲ್ಲಾ ಶುಭದ ಸಂಕೇತಗಳಾಗಿವೆ. ಒಂಟಿತನದ ಎಲ್ಲೆಯನ್ನು ಮೀರಿ ಸಾಮೂಹಿಕ, ಸಾಮಾಜಿಕ ಪರಿಕಲ್ಪನೆಯೊಳಗೆ ಭಕ್ತರನ್ನು ಹುರಿದುಂಬಿಸುವುದು ಈ ಗೀತೆಯ ಒಟ್ಟು ಆಶಯವಾಗಿದೆ.

ಜೋಡೆತ್ತು ಕಟ್ಟಿಕೊಂಡು ತಾತನನ್ನು ನೆನೆದುಕೊಂಡು
ಜಾತ್ರೆಗೆ ಹೋಗೋಣ ನಾವ್ ಜಾತ್ರೆಗೆ ಹೋಗೋಣ
ಜೋಡೆತ್ತು ಕಟ್ಟಿಕೊಂಡು ತಾತನನ್ನು ನೆನೆದುಕೊಂಡು
ಜಾತ್ರೆಗೆ ಹೋಗೋಣ ನಾವ್ ಜಾತ್ರೆಗೆ ಹೋಗೋಣ
ಭಕ್ತಿಯಿಂದ ಭಜನೆ ಮಾಡಿ ಮುಕ್ತಿಯನ್ನು ಪಡೆಯೋಣ
ಜೋಡೆತ್ತು ಕಟ್ಟಿಕೊಂಡು ತಾತನನ್ನು ನೆನೆದುಕೊಂಡು
ಜಾತ್ರೆಗೆ ಹೋಗೋಣ ನಾವ್ ಜಾತ್ರೆಗೆ ಹೋಗೋಣ
ಗೆಜ್ಜೆ ಕಟ್ಟಿ ಕುಣಿಯುವ ಭಕ್ತರನ್ನು ನೋಡಿರಣ್ಣಾ

ವೈಭವದಿ ಕಾಣುವ ತೇರನ್ನು ಎಳಿಯಿರಣ್ಣಾ ||೨||

ಅಲಂಕಾರದಿಂದ ಹೊಳೆಯುವ ತಾತನನ್ನು ನೋಡಿರಿ ||೨||

ತೀರ್ಥಪ್ರಸಾದದಿಂದ ಮುಕ್ತಿಯನ್ನು ಹೊಂದಿರಿ ||೨||

ದಿನ ನಿತ್ಯ ದಾಸೋಹ ತಾತನ ಸನ್ನಿಧಿಯಲ್ಲಿ

ಪ್ರತಿನಿತ್ಯ ಪೂಜೆಯು ಸ್ವಾಮಿಯ ಗುಡಿಯಲ್ಲಿ

ಹರಕೆ ಹೊತ್ತ ಜನರು ಬರುವರು ಹರುಷದಲ್ಲಿ

ಗುಡಿ ಸುತ್ತ ಪ್ರದಕ್ಷಿಣೆ ಹಾಕುವರು ಭಕ್ತಿಯಲ್ಲಿ ||೨|| ||ಜೋಡೆತ್ತು||

ನಾವೆಲ್ಲಾ ಭಕ್ತಿಯಿಂದ ಭಜನೆಯನ್ನು ಮಾಡೋಣ

ಹರುಷದಿಂದ ಮೈಮರೆತು ಗುಡಿಯಲ್ಲಿ ಕುಣಿಯೋಣ

ಆಸೆಯೆಂಬುದಾ ಬಿಟ್ಟು ಹರಿಯೆಂಬುದಾ ತಿಳಿಯಿರಿ ||೨||

ಅವನ ಪಾದವನ್ನು ಹಿಡಿದು ಪುಣ್ಯವನ್ನು ಪಡೆಯಿರಿ ||೨||

ವೀರೇಶನೂ ನಿನ್ನ ಗೀತೆಯ ರಚಿಸಿದ ಗುರುವೆ

ನಿನ್ನ ಕರುಣೆ ಪ್ರೀತಿಯು ಇರಲಯ್ಯ ಎಂದೂ ಪ್ರಭುವೆ

ನಿನ್ನ ಲೀಲೆ ಪೊಗಳಲು ಕವಿಗೆ ಕಾಲ ಸಾಲದಯ್ಯ

ನಿನ್ನ ಗೀತೆ ಹಾಡಲು ಇನ್ನೂ ಜನ್ಮ ಬೇಕಯ್ಯ ||ಜೋಡೆತ್ತು||

**ಹರ ನಮ್ಮ ಗುರುವಾದ**

'ಹರ ನಮ್ಮ ಗುರುವಾದ' ಗೀತೆಯಲ್ಲಿ ನಮ್ಮ ಮನಸ್ಸಿನ, ದೇಹದ ಹುಚ್ಚು ಬಿಡಿಸಲು ಆತನು ಹುಚ್ಚನಾದ. ಇಲ್ಲಿ ದೈವತ್ವದ ಭೂಮಿಕೆಯಲ್ಲಿ ಎರ್ರಿತಾತನನ್ನು ಕಾಣುವ ಒಂದು ದೃಷ್ಟಿಕೋನ ವ್ಯಕ್ತವಾಗಿದೆ. ಭವ ಬಂಧನವ ಮುರಿದು ನೆಮ್ಮದಿ, ಶಾಂತಿ ತರುವ ಧೂತನಂತೆ ಮನುಜರ ಭಕ್ತಿಯ ಭಾಗ್ಯವಾಗಿ ಬಂದನು. ಪ್ರತಿಚರಣದ ಪ್ರತಿಸಾಲು ಆತನ ಅಲೌಕಿಕತೆಯನ್ನು ಸಾರುವಂತಿದೆ.

ಹರ ನಮ್ಮ ಗುರುವಾದ ಚೇಳಗುರ್ಕಿಯಲ್ಲಿ

ಶಿವಭಕ್ತಿ ಸೆಲೆಯಾದ ನಮ್ಮ ಆತ್ಮದಲ್ಲಿ

ಚೇಳ್ಳಗುರ್ಕಿ ಶಿವಯೋಗಿ ಈ ಎರ್ರಿತಾತ

ಹುಚ್ಚನಂತೆ ಧರೆಯಲ್ಲಿ ಮೆರೆದಾತ ಈ ತಾತ

ನಮ್ಮ ಹುಚ್ಚ ನೀಗಿದ ಭಕ್ತಿ ಹಿರಿಮೆ ತೋರಿದ

ನಮ್ಮ ಹುಚ್ಚ ನೀಗಿದ ಭಕ್ತಿ ಹಿರಿಮೆ ತೋರಿದ

ಶರಣು ಶರಣು ಇಳೆನೇತಾ ಚೇಳ್ಳಗುರ್ಕಿಯ ಶುಭದಾತ

ಶರಣು ಶರಣು ಇಳೆನೇತ ಚೇಳ್ಳಗುರ್ಕಿಯ ಶುಭದಾತ

ನಮ್ಮನು ಹರಸು ಹೇ ತಾತ

ವಂಚಿತ ವರದ ಸುಖದಾತ

ಕಲಿಯ ಆಟದ ಕರ್ಮ ಕಾಂಡವ ತೊಳೆಯಲು ಬಂದ ಸುರನೀತ

ಬಂಗಾರದಂತಹ ಬಾಳಾ ನೀಡಿ ಸಲುಹು ವರದಾತ

ಜೋರು ಮಳೆಯ ಮಧ್ಯದಿ ಕುಳಿತು

ಜ್ಞಾನದಲ್ಲಿ ಮೆರೆದಾತ

ತನ್ನ ಸುತ್ತ ಮಳೆಯ ಹನಿಯು ಬೀಳದಂತೆ ತಡೆದಾತ

ತನ್ನ ಸುತ್ತ ಮಳೆಯ ಹನಿಯ ಬೀಳದಂತೆ ತಡೆದಾತ

ಮನುಜ ವೇಷದಿ ಮಂಜು ಮುಸುಕಿದ

ಬಾಳ ಬೆಳಗಲು ಬಂದಾತ

ನಮ್ಮ ಚಿತ್ತದಲ್ಲಿ ಭಕ್ತಿ ಜ್ಯೋತಿ ಹಚ್ಚಿ ಪೊರೆದಾತ

ಮನುಜ ವೇಷದಿ ಮಂಜು ಮುಸುಕಿದ

ಬಾಳ ಬೆಳಗಲು ಬಂದಾತ

ನಮ್ಮ ಚಿತ್ತದಲ್ಲಿ ಭಕ್ತಿ ಜ್ಯೋತಿ ಹಚ್ಚಿ ಪೊರೆದಾತ

ಮೂಢ ಭಾವಿಯಲ್ಲಿ ನೂಕಲು ಪಾತಾಳಕ್ಕಿಳಿದಾತ

ಮೂಢ ಭಾವಿಯಲ್ಲಿ ನೂಕಲು ಪಾತಾಳಕ್ಕಿಳಿದಾತ

ಮತ್ತೆ ಅವನ ನಯನದ ಎದುರೇ, ಬಸವ ಪೂಜೆ ಗೈದಾತ

ಮತ್ತೆ ಅವನ ನಯನದ ಎದುರೇ ಬಸವ ಪೂಜೆ ಗೈದಾತ

ಕೋಟಿ ಜನ್ಮದ ಪಾಪವ ಕಳೆದು

ಮುಕ್ತಿ ತೋರಲು ಬಂದಾತ

ಈ ಜಗದ ಜಾಲ ಬಿಡಿಸಿ ಜನ್ಮ ಶುದ್ಧಗೈದಾತ

ಕೋಟಿ ಜನ್ಮದ ಪಾಪವ ಕಳೆದು ಮುಕ್ತಿ ತೋರಲು ಬಂದಾತ

ಈ ಗಜದ ಜಾಲ ಬಿಡಿಸಿ ಜನ್ಮ ಶುದ್ಧ ಗೈದಾತ

ಕಾಮ, ಕ್ರೋಧ, ಲೋಭ, ಮೋಹ, ಕೆಟ್ಟ ದಿಟ್ಟ ಈ ತಾತ

ಕಾಮ ಕ್ರೋಧ, ಲೋಭ, ಮೋಹ, ಕೆಟ್ಟದಿಟ್ಟ ಈ ತಾತ
ಚೇಳ್ಳಗುರ್ಕಿ ಕ್ಷೇತ್ರದ ಈಶ ಸುರಯೋಗಿ ಶಿವಧೂತ
ಚೇಳ್ಳಗುರ್ಕಿ ಕ್ಷೇತ್ರದ ಈಶ ಸುರಯೋಗಿ ಶಿವಧೂತ

**ಎರ್ರಿತಾತನೊಲುಮೆ**

ಭಕ್ತರ ಕಷ್ಟಗಳನ್ನು ಪರಿಹರಿಸುವ ವೈವಿಧ್ಯತೆಯನ್ನು ಈ ಗೀತೆಯಲ್ಲಿ ಕಾಣಬಹುದು. ತಾತನ ಪ್ರೀತಿ, ಕರುಣೆಗಳಿಂದ ಆತನು ಸಂಚರಿಸಿದ ವಿವಿಧ ಗ್ರಾಮಗಳಲ್ಲಿ ಮಾಡಿದ ಪವಾಡಗಳನ್ನು ಗೀತೆಯಲ್ಲಿ ನಿರೂಪಿತಲಾಗಿದೆ.

ಎರ್ರಿತಾತನೊಲುಮೆಯ ಪಡೆಯ ಬಾಳು ಧನ್ಯವೋ
ಎರ್ರಿತಾತನಾಮವೋ ಮೋಕ್ಷವೀಯುವ ಮಂತ್ರವೋ
ಎರ್ರಿತಾತನಾಮವೋ ಮೋಕ್ಷವೀಯುವ ಮಂತ್ರವೋ
ಎರ್ರಿತಾತನೊಲುಮೆಯ ಪಡೆಯ ಬಾಳು ಧನ್ಯವೋ
ಎರ್ರಿತಾತನಾಮವೇ ಮೋಕ್ಷವೀಯುವ ಮಂತ್ರವೋ
ಮುಷ್ಟೂರಿನಲಿ ಕಲ್ಲು ಬಸವನ
ನಡೆಯ ಬಸವ ಎಂದು ಹೇಳಿ ನಡೆಸಿ ತೋರಿದ
ಮುಷ್ಟೂರಿನಲ್ಲಿ ಕಲ್ಲು ಬಸವನ
ನಡೆಯ ಬಸವ ಎಂದು ಹೇಳಿ ನಡೆಸಿ ತೋರಿದ
ಎರ್ರಿತಾತ ಭಕ್ತರ ಆತ್ಮ ಜ್ಯೋತಿ ಹಚ್ಚಿದ
ಎರ್ರಿತಾತ ಭಕ್ತರ ಆತ್ಮ ಜ್ಯೋತಿ ಹಚ್ಚಿದ
ಶಿವಧರ್ಮದ ಮರ್ಮ ಅರುಹಿ ಲೋಕ ಸಲುಹಿದ
ಲೋಕ ಸಲುಹಿದಾ ||ಪ||

ಸತ್ತ ಹದ್ದಿಗೆ ಜೀವ ನೀಡಿದ
ಎದ್ದು ಹದ್ದು ಹಾರಲಾರದೆ ಶಕ್ತಿ ನೀಡಿದ
ಸತ್ತ ಹದ್ದಿಗೆ ಜೀವ ನೀಡಿದ
ಎದ್ದು ಹದ್ದು ಹಾರಲಾದರೆ ಶಕ್ತಿ ನೀಡಿದ
ಸತ್ತ ಕರುವ ಪ್ರಾಣ ಉಳಿಸಿ ಮೊಸರ ಬೇಡಿದ
ಸತ್ತ ಕರುವ ಪ್ರಾಣ ಉಳಿಸಿ ಮೊಸರ ಬೇಡಿದ

ಮೃತ್ಯುಂಜಯನಾಗಿ ತಾತ ಲೀಲೆ ತೋರಿದ

ಲೀಲೆ ತೋರಿದ ||ಪ||

ತನ್ನ ಭಕ್ತಗೆ ಹಾವ ನೀಡಿದ

ಪೂಜೆಗೆ ಬಂಗಾರದ ಗಟ್ಟಿ ಮಾಡಿದ

ತನ್ನ ಭಕ್ತಗೆ ಹಾವ ನೀಡಿದ

ಪೂಜೆಗೆ ಬಂಗಾರದ ಗಟ್ಟಿ ಮಾಡಿದ

ಪೂಜೆ ಗೈಯೇ ಬಂಗಾರದ ಹಟ್ಟಿ ಮಾಡಿದ

ಶಿಶುಗಳ ಬೇನೆ ತಲೆಯ ಬೆಲ್ಲ ತಿನಿಸಿದಾ

ಶಿಶುಗಳ ಬೇನೆ ತಲೆಯ ಬೆಲ್ಲ ತಿನಿಸಿದಾ

ಭವ ರೋಗದಿ ಈ ಜಗವ ಮುಕ್ತಿಗೊಳಿಸಿದಾ

ಮುಕ್ತಿಗೊಳಿಸಿದಾ ||ಪ||

**ಶರಣು ಶರಣು ಮೂಖನಾದನು**

ಎಚ್ರಿತಾತನು ಮಲ್ಲಪ್ಪನ ಮಟ್ಟಿಯಲ್ಲಿ ಯೋಗದ ಪರವಸ್ಥಿತಿಯಲ್ಲಿರುವ ಆತನನ್ನು ಹುಚ್ಚನಂತೆ ಕಂಡ ಜನರ ಮರುಳುತನವನ್ನು ಈ ಗೀತೆ ಚಿತ್ರಿಸಲಾಗಿದ್ದು, ಕಳ್ಳರು ತಮ್ಮ ಕಳುವಿಕೆಯ ತಂತ್ರವನ್ನು ಕುರಿತು ಆತನನ್ನು ಹಿಂಸಿಸಿದ ಪರಿ, ಆ ಮೂಲಕ ಅವರು ಅನುಭವಿಸಿದ ಕ್ಲಿಷ್ಟ ಪರಿಸ್ಥಿತಿಯನ್ನು ಗೀತೆಯಲ್ಲಿ ಅಭಿವ್ಯಕ್ತಿಸಲಾಗಿದೆ.

ಶರಣು ಶರಣು ಶರಣು ಶರಣು ಎರ್ರಿತಾತನೇ ಶರಣು

ಭಕ್ತರ ಆತ್ಮ ಪೂಜೆ ಪಡೆದ ಭಕ್ತ ಪ್ರೀತನೇ

ಮಲ್ಲಪ್ಪ ತಿಪ್ಪೆ ಏರಿ ಶಿವಧ್ಯಾನ ಗೈದೆ

ಪುರಡನ ಕೂಗೆ, ಬರದೇ ಮುಂಡಾಟ ಗೈದೆ

ಊರ ಜನರ ಬಲವಂತಕೆ ಊರಿಗೆ ನಡೆದೆ

ಗುಡಿಯ ಮುಂದೆ ಗುಡಿಸಲಲ್ಲಿ ಯೋಗದಿ ಕುಳಿತೇ

ಶಿವಯೋಗಿ ಶರಣಯ್ಯ ಎರ್ರಿತಾತ ಬಾರಯ್ಯ

ಶಿವಯೋಗಿ ಶರಣಯ್ಯ ಎರ್ರಿತಾತ ಬಾರಯ್ಯ

ನಿನ್ನ ಬರುವ ಅರಿತವ ಬಳಗಾನೂರ ಯತಿಗಳು

ಆಟವಾಡುವಂತೆ ಬೊಂಬೆ ಗುಡಿಸಲನ್ನು ಕಟ್ಟಲು

ನಿನ್ನ ಬರುವ ಅರಿತುವಾ ಬಳಗಾನೂರ ಯತಿಗಳು
ಆಟವಾಡುವಂತೆ ಬೊಂಬೆ ಗುಡಿಸಲನ್ನು ಕಟ್ಟಲು
ಮರಿಸ್ವಾಮಿ ಸೂಚನೆಗೆ ಯೋಗಿಯಾಗಿ ಬಂದೇ ನೀ
ಚೇಳ್ಳಗುರ್ಕಿ ಕ್ಷೇತ್ರದಲ್ಲಿ ನೆಲೆಯಾಗಿ ನಿಂತೆ ನೀ
ಮರಿಸ್ವಾಮಿಯು ಸೂಚನೆಗೆ ಯೋಗಿಯಾಗಿ ನಿಂತೆ ನೀ
ಚೇಳಗುರ್ಕಿ ಕ್ಷೇತ್ರದಲ್ಲಿ ನೆಲೆಯಾಗಿ ನಿಂತೆ ನೀ
ಶಿವಯೋಗಿ ಶರಣಯ್ಯ ಎರ‍್ರಿತಾತ ಬಾರಯ್ಯ
ಶಿವಯೋಗಿ ಶರಣಯ್ಯ ಎರ‍್ರಿತಾತ ಬಾರಯ್ಯ
ಚೋರರೊಮ್ಮೆ ನಿನ್ನನ್ನು ಚೋರತನವ ಮಾಡಲು
ಅಭಯ ನೀಡೆ ಬೇಡಲು ಮೂಕನಂತೆ ಕುಳಿತೆ ನೀ
ಚೊರರೊಮ್ಮೆ ನಿನ್ನನ್ನು ಚೋರತನವ ಮಾಡಲು
ಅಭಯ ನೀಡೆ ಬೇಡಲು ಮೂಕನಂತೆ ಕುಳಿತೇ ನೀ
ಸಿಟ್ಟಾಗಿ ಆ ಕಳ್ಳರು ತೆಂಗ ತಲೆಗೆ ಬಡೆಯಲು
ಕಡು ಕಷ್ಟವ ನೀಡಿ ಅವರ ಗರ್ವ ನೀನು ಇಳಿಸಿದೆ
ಸಿಟ್ಟಾಗಿ ಆ ಕಳ್ಳರು ತೆಂಗ ತಲೆಗೆ ಬಡೆಯಲು
ಕಡು ಕಷ್ಟವ ನೀಡಿ ಅವರ ಗರ್ವ ನೀನು ಇಳಿಸಿದೆ
ಶಿವಯೋಗಿ ಶರಣಯ್ಯ ಎರ‍್ರಿತಾತ ಬಾರಯ್ಯ
ಶಿವಯೋಗಿ ಶರಣಯ್ಯ ಎರ‍್ರಿತಾತ ಬಾರಯ್ಯ
ಪವಾಡವ ತೋರುತಾ ಪಾಮರರ ಸಲುಹಿದೆ
ಸತಿ ಸುತರ ತೊರೆದು ತಾತ ವೈರಾಗ್ಯದ ಮೆರೆಸಿದೆ
ಪವಾಡವಾ ತೋರುತಾ ಪಾಮರರ ಸಲುಹಿದೆ
ಸತಿಸುತರ ತೊರೆದು ತಾತ ವೈರಾಗ್ಯವ ಮೆರೆಸಿದೆ
ಶಿಲೆಗೊಮ್ಮೆ ಪ್ರಾಣವಿತ್ತು ಬಸವಣ್ಣನ ನಡೆಸಿದೆ
ಭೂ ಲೋಕದಿ ನಿನ್ನ ಚರಿತೆ ಅಜರಾಮರಗೊಳಿಸಿದೆ
ಶಿಲೆಗೊಮ್ಮೆ ಪ್ರಾಣವಿತ್ತು ಬಸವಣ್ಣನ ನಡೆಸಿದೆ
ಭೂಲೋಕದಿ ನಿನ್ನ ಚರಿತೆ ಅಜರಾಮರಗೊಳಿಸಿದೆ

ಶಿವಯೋಗಿ ಶರಣಯ್ಯ ಎರ್ರಿತಾತ ಬಾರಯ್ಯ

ಶಿವಯೋಗಿ ಶರಣಯ್ಯ ಎರ್ರಿತಾತ ಬಾರಯ್ಯ ||ಪ||

**ಚೇಳಗುರಿಕೆ ತಾತ**

ಯೌಗಿಕ ಪುರುಷರ ಲಕ್ಷಣಗಳೇ ವಿಚಿತ್ರವಾದವುಗಳು. ಅವರ ಪ್ರತಿ ಹುಚ್ಚಿನ ವರ್ತನೆಯೇ ಒಂದೊಂದು ರೀತಿಯಾಗಿರುತ್ತವೆ. ಗುರು ಗರ್ನಾಯರ ಬಳಿಯಿಂದ ಅನುಭಾವದ ಸಾರ ಪಡೆದು ಅಲ್ಲಿಂದ ಮನಸ್ಸಿಚ್ಛೆಯೆಡೆಗೆ ಸಾಗಿದ ಒಟ್ಟು ಸನ್ನಿವೇಶವನ್ನು ಒಳಗೊಂಡಿದ್ದು, ತನ್ನ ಶಿಷ್ಯ ತಿಕ್ಕಯ್ಯನಿಗೆ ಒದಗಿದ ಆಪತ್ತನ್ನು ನಿವಾರಿಸಲು ಆತನನ್ನು ಹೋಗಯ್ಯ ಎಂದ ಒಟ್ಟು ಚಿತ್ರಣ ಇದು ಕಟ್ಟಿಕೊಡುತ್ತದೆ.

ಚೇಳಗುರ್ಕಿ ತಾತ ಜಗದಾದಿ ವಿನೂತ

ಈ ಮಾತು ಸುಳ್ಳೇನಲ್ಲ ಪರ ಹರ

ಅಂಧವರಿಗೆ ಕಣ್ಣ, ಹೆಳವರಿಗೆ ಕಾಲ ನೀಡಿದಾತ ಸಲುವುರಲ್ಲಾ ಶಿವಾ ಶಿವಾ

ತಾತನ ಹಿರಿಮೆ ಹಾಡಿರಿ, ಹಾಡುತಾ ಮೈ ಮರೆಯಿರಿ

ಹರಸುವ ಅವನ ಬೇಡಿರಿ, ಬಾಳಿನ ಬವಣೆ ದೂಡಿರಿ ||೨||

ಗಗನಾರ್ಯರಲ್ಲಿ ವಿದ್ಯೆಯ ಕಲಿತಾ

ಓಂಕಾರ ರೂಪಾನೀತಾ

ಗುರುಗಳ ನುಡಿಗೆ ಬೆತ್ತಲೆಯಾಗಿ ಊರನ್ನ ತಿರುಗಿದಾತ

ಬಂಜೆಯನ್ನು ಹರಸಿದಾತ ಈತ

ಪುತ್ರ ಭಾಗ್ಯ ನೀಡಿದಾತ ಈತ

ಬಂಜೆಯನ್ನು ಹರಸಿದಾತ ಈತ

ಪುತ್ರಭಾಗ್ಯ ನೀಡಿದಾತ ಈತ

ಚೆಳ್ಳಗುರ್ಕಿ ಶಿವನೀತಾ ಭವಬಂಧನ ಕಳೆವಾತ

ಎರ್ರಿಕುಲವಿನೂತಾ, ಭಕ್ತರ ಪ್ರೀಯುತ, ಎರ್ರಿತಾತ ||ಪ||

ತಿಕ್ಕಯ್ಯನೆಂಬ ಭಕ್ತನಿಗೆ ಒಲಿದ

ಆತನಿಂದ ಸೇವೆಯ ಪಡೆದ

ಸೇವೆಯ ಪಡೆದು ಸಂತೃಪ್ತನಾಗಿ

ಹೋಗಯ್ಯ ಭಕ್ತ ಎಂದಾ

ತಾತನಾಡಿದಂಥ ಮಾತು ವೇದ

ಶೃತಿ ಮಾಡಿದ ಸ್ವರವೀಣೆಯ ನಾದ

ತಾತನಾಡಿದಂಥ ಮಾತು ವೇದ

ಶಿವನಾಜ್ಞೆಗೆ ಬೆಲೆ ಇತ್ತ ತಿಕ್ಕಯ್ಯ ತಾ ಹೊರಟಾ,

ಭಕ್ತಿ ಭಾವದ ಶ್ರದ್ಧೆ ತೋರಿದ ಮುಕ್ತಿ ಹೊಂದಿದ ||ಪ||

**ಶುಭವರದಾತ**

ಮರಣದಲ್ಲಿಯೂ ಆತನ ದರ್ಶನ ಪಡೆದ ಪರಿಯನ್ನು ಇದು ಬಿಂಬಿಸುವಂಥ ಗೀತೆಯಾಗಿದೆ. ಪಾಪಪುಣ್ಯಗಳ ಗೋಜಿಗೆ ಒಳಗಾಗಿರುವ ನರನ ಭಕ್ತಿಯ ಸಾರತೆಯನ್ನು ಸಾರುತ್ತದೆ. ನಂತರ ಅವನ ಜಾತ್ರೆಯ ಉತ್ಸವದ ಮಹತ್ವವನ್ನು ಇದರಲ್ಲಿ ನಿರೂಪಿಸಲಾಗಿದೆ.

ಶುಭವರದಾತ ಜನಮನ ಪ್ರೀತಾ....

ಪಾಪವಿಭಂಗಾ....ಕರುಣಾಪಂಗಾ...

ಶೋಕವಿನಾಶಾ....ನರಜನಪೋಷಾ....ತಾತನೇ ಬಾರಯ್ಯ

ಲೋಕವಾ ಸಲುಹುಯ್ಯಾ....

ಜಯ ಜಯ ತಾತ ಲೋಕವಿಖ್ಯಾತ

ಆಗಣಿತ ಗುಣಸಾರಾ....

ಮಂಗಳ ರೂಪ ಮನುಕುಲ ದೀಪಾ

ನಿನ್ನಯ ನುಡಿ ಅಮರಾ

ಸುಗುಣರ ಗಣಿ ನೀನು, ಭಕ್ತಿಯ ಗಣಿ ನೀನು

ರತ್ನದ ಮಣಿ ನೀನು, ಯತಿಗಳ ದೊರೆ ನೀನು

ಜಯ ಜಯ ತಾತ ಲೋಕವಿಖ್ಯಾತ ಆಗಣಿತ ಗುಣಸಾರಾ...

ಮಂಗಳ ರೂಪ ಮನುಕಲ ದೀಪಾ ನಿನ್ನಯ ನುಡಿ ಅಮರಾ...

ನಿನ್ನಯ ಚರಣವತೊಳೆದ ಜಲದಲಿ ಮಿಂದರೆ ಕುಷ್ಠವು ಬಲುದೂರ

ನಿನ್ನಯ ಅಡಿಯದು ಸೋರೆದ ಮಣ್ಣಾದು ನಮ್ಮಯ

ಹಣೆಗೆ ಸಿಂಧೂರ

ನಿನ್ನ ನಂಬಿ ಬಂದೆ ನಾನು ನಮ್ಮ ಆತ್ಮ ಜ್ಯೋತಿ ನೀನು

ನಿನ್ನ ಕಂಡು ಧನ್ಯ ನಾನು, ಮಂಜಿನಂತೆ ಶುದ್ಧಾನೀನು

ಶ್ರೀಕರ ಶಂಕರ ಕರುಣಾಸಾಗರ ಎರ್ರಿ ತಾತಯ್ಯ ||ಜಯ||

ನಿನ್ನ ಉತ್ಸಾಹವಾ ನೋಡದ ನಮ್ಮ ಜನ್ಮ ವ್ಯರ್ಥವು ತಾತಯ್ಯ
ಭಕ್ತನ ಕರೆಗೆ ಸಮಾಧಿಯಿಂದ ಉತ್ತರ ನೀಡಿದ ನನ್ನಯ್ಯ
ಮಾರಿ ಬೇನೆ ಬರಲು ಅಂದು ಕೋಣವನ್ನು ಹಿಡಿದು ನೀನು
ಕಿವಿಯ ಹಿಂಡಿ ಮಾರಿಯನ್ನು ಅಟ್ಟಿದಂಥ ದೇವಾನೀನು
ಶ್ರೀಕರ ಶಂಕರ, ಕರುಣಾಸಾಗರ ಎರ್ರಿತಾತಯ್ಯ
ಶ್ರೀಕರ ಶಂಕರ ಕರುಣಾಸಾಗರ ಎರ್ರಿತಾತಯ್ಯ ||ಜಯ||

**ಮಂಗಳರೂಪ ಭಜಿಸೋಣ**

ಎರ್ರಿತಾತನ ಒಟ್ಟು ಪವಾಡಗಳ ನೆನೆದ ಭಕ್ತರ ಅತಿಶಯ ಹಾಗೂ ಗುಣಗಳನ್ನು ಹೊಗಳಿ ಕೊಂಡಾಡುವುದು ಮಂಗಳಗೀತೆಯ ರೂಪದಲ್ಲಿ ಬಂಧಿಸಲಾಗಿದ್ದು, ಪ್ರತಿ ಚರಣಗಳು ಆತನ ಲೀಲೆಗಳ ಮಹತ್ತನ್ನು ಕುರಿತು ತಿಳಿಸುತ್ತಾ, ವರ್ಣಿಸುತ್ತ ಸಾಗುತ್ತದೆ.

ಆ...ಆ....ಆ...ಮಂಗಳ ರೂಪನಾ ನಮಿಸೋಣ
ಮಂಗಳಾರತಿ ಬೆಳಗೋಣ
ಹರನ ತೇಜನಾ ನಮಿಸೋಣ, ಆತ್ಮಶುದ್ಧಿಯಗೊಳಿಸೋಣ ||ಪ||
ಎರ್ರಿತಾತನ ಬೇಡೋಣ, ಸಕಲ ದೋಷವ ಕಳೆಯೋಣ
ಶಿವರೂಪಿ ಜಗದೀಶ, ಎರ್ರಿತಾತ ಭಯಾನಾಶ
ಸುಗುಣರ ಸಂಗ ಜಗದೀಶ ಭವ ಭಯ ಭಂಗ ಯತಿವಧಿಶ

ತುಪ್ಪದ ಆರತಿ ಬೆಳಗೋಣ ಸುಗಣರ ಆತ್ಮಕೆ ನಮಿಸೋಣ
ಸ್ವಾಮಿಯ ತೊಟ್ಟಿಲ ತೂಗೋಣ, ತಪ್ಪದೆ ನಾಮವಾ ಸ್ಮರಿಸೋಣ
ನಲ್ಮೆಯ ಧಾನ್ಯವ ನೀಡೋಣ, ನಲ್ಮೆಯ ಬಾಳಾ ಪಡೆಯೋಣ ||ಪ||

ಶೀಲೆಯ ಬಸವನ ಕರೆದವನಾ, ಬಸವನಾ ನಡೆಸಿದ ಪರಶಿವನಾ
ಹದ್ದಿಗೆ ಪ್ರಾಣವನಿತ್ತವನಾ, ಕಲ್ಮಶ ಹರಿಸಿದ ಸುರಹರನಾ
ಪಾದಕೆ ಆರತಿ ಬೆಳಗೋಣ, ಪಾವನರಾಗಿ ಬೆಳಗೋಣ
ಶಿವನರೂಡಿ ಜಗದೀಶ, ಎರ್ರಿತಾತ ಭಯಾನಾಶ
ಸುಗುಣರ ಸಂಗ ಜಗದೀಶ ಭವಭವ ಭಂಗ ಯತಿವಧಿಶ.

ಫಲಪುಷ್ಪಗಳ ನೀಡೋಣ ಆತ್ಮದ ಜ್ಯೋತಿಯ ಹಚ್ಚೋಣ

ಬಂಜೆಯತನವ ಕಳೆಯೋಣ, ಅಮಿತಾನಂದನಾ ನುಡಿಸೋಣ
ಬದುಕಿನ ಬವಣೆ ನೀಗೋಣ, ಬಯಸಿದ ವರಗಳ ಪಡೆಯೋಣ ||ಪ||

ಮುನಿಕುಲ ವಿನೂತನ ಭಜಿಸೋಣ, ಮುಕ್ತಿಯ ಮಾರ್ಗವ ಕಾಣೋಣ
ಮನೆ ಸತಿಸುತರ ತೊರೆದವನಾ, ನಿರ್ಮಲಾಭಾವನಾ ಸ್ಮರಿಸೋಣ
ಪರಮ ಪುನೀತನ ಬೇಡೋಣ, ಡಾಂಭಿಕ ಬಾಳನೂ ದೂಡೋಣ
ಶಿವನರೂಡಿ ಜಗದೀಶ ಎರ್ರಿತಾತ ಭಯಾನಾಶ
ಸುಗುಣರ ಸಂಗ ಜಗದೀಶ ಭವಭವ ಭಂಗ ಯತಿವಧಿಶ

ಇಳೆಯ ಬೆಳಗಿದ ಪರಶಿವನಾ, ಪುಣ್ಯದ ಚರಿತೆಯ ಪಠಿಸೋಣ
ಪಾವನಾ ಮಾರ್ಗದಿ ನಡೆದವನಾ ಪದುಮಚರಣಕೆ ನಮಿಸೋಣ
ಕಾಮಿಕ ದಾಯಾನಾ ಸುಮವದನಾ ಕಣ್ಣಾಲೆಯ ದನಿಯೇ ನೋಡೋಣ ||ಪ||

ತಿಕ್ಕಯ್ಯನ ಒಲುವ ಪಡೆದವನಾ ಜಗದ ಜಂಜಾಟವಾ ಕಳೆದವನಾ
ಜಂಗಮ ಸಂಗದಿ ಮೆರೆದವನಾ ಭವಭವ ಬಂಧನ ಕಳೆದವನಾ
ದುಃಖ ನಿವಾರಕಾ ತಾತಯ್ಯನೇ ಅನುದಿನ ಭಜಿಸಿ ಬಾಳೋಣಾ
ಶಿವನರೂಡಿ ಜಗದೀಶ ಎರ್ರಿತಾತ ಭಯಾನಾಶ
ಸುಗುಣರ ಸಂಗ ಜಗದೀಶ ಭವಭಯ ಭಂಗ ಯತಿವಂಶ
ಪರಮ ಕೃಪಾಕರ ಯತಿಸುರನಾ ಗುಡಿಯಲಿ ದೀಪವಾ ಬೆಳಗೋಣ
ಪನ್ನೀರ್ ಪಾದಕೆ ನೀಡೋಣ ಆತ್ಮನೈವೇದ್ಯವಾ ಮಾಡೋಣ
ದೂಪದ ಆರತಿಯ ಬೆಳಗೋಣ ದುರ್ಗಣ ದೂಡಿ ಬಾಳೋಣ ||ಪ||

ಚಂದನ ಗಂಧವಾ ಹಚ್ಚೋಣ ಭಸ್ಮವಾ ಕಾಯಕೆ ಬಳೆಯೋಣ
ಸುರಗಿ ಸಂಪಿಗೆ ನೀಡೋಣ ಸುರುಗರು ಪಾದವ ನಂಭೋಣ
ದೀನರ ಪಾಲಿಸಿ ಪೊರೆದನಾ ಮಂಗಳ ಗೀತೆಯ ಪಾಡೋಣ ||ಪ||
ಮಂಗಳ ರೂಪನಾ ನಮಿಸೋಣ ಮಂಗಳಾರತಿ ಬೆಳಗೋಣ

**ಲೋಕನಾಥನ ಪ್ರತಿರೂಪ**

ಶಿವನ ಪ್ರತಿರೂಪವೆಂಬಂತೆ ಚೇಳಗುರಿಕೆ ಕ್ಷೇತ್ರಕ್ಕೆ ಬಂದು ನೆಲೆಸಿದ ಎಂಬುದನ್ನು ಈ ಗೀತೆಯಲ್ಲಿ ಅಳವಡಿಸಿಲಾಗಿದೆ. ನಂಬಿದ ಭಕ್ತರ ಪಾಪಗಳನ್ನು ನಿವಾರಿಸಿ ಅನ್ನದಾಸೋಹ, ಜ್ಞಾನ ದಾಸೋಹ, ಜ್ಯೋತಿ ದಾಸೋಹಗಳಿಂದ ಚೇಳಗುರಿಕೆ ಗ್ರಾಮವನ್ನು ಕೈಲಾಸವಾಗಿಸಿದ ಪರಿಯನ್ನು ಇದು ಚಿತ್ರಿಸಲಾಗುತ್ತದೆ.

ಅ....ಅ.....ಅ.....ಲೋಕನಾಥನಾ ಪ್ರತಿರೂಪ ಮಹಾತ್ಮ

ಉಮಾರಮಣ ಸಾತ್ವಿಕಾ ಆತ್ಮ, ಹುಚ್ಚನಾ ರೀತಿ ನಟಿಸಿದ

ಈಶ ಬಾಳಿನ ಭ್ರಮೆಯ ಅಳಿಸಿದಾ.. ಚೇಳ್ಳಗುರ್ಕಿಯ ಎರ್ರಿತಾತನೇಸ್ವಾಮಿ ||ಅ||

ನಂಬಿದ ಭಕ್ತರ ಪಾಪಭಾರ ನೀಗಿದ

ಧರೆಯಲಿ ಚೇಳಗುರ್ಕಿ ಮಂದಿರವಾ ಮಾಡಿದ ||ಅ||

ಅರಿತವರು ಯಾರಿಹರೋ ಎರ್ರಿಯ ಮಹಿಮೆಯಾ

ಅರಿತವ ತಿಕ್ಕಯ್ಯ ತಾತಯ್ಯನ ಹಿರಿಮೆಯ ||ಅ||

ಜಗದಲಿ ಚೇಳ್ಳಗುರ್ಕಿ ತಾತಯ್ಯನ ಆಲಯ ||ಪ||

ಚೇಳ್ಳಗುರ್ಕಿ ಕೈಲಾಸ ತಾತಯ್ಯನ ಧಾಮವು

ನಿತ್ಯ ಅನ್ನ ದಾಸೋಹ ನಡೆಯುತ್ತಿರುವ ಕ್ಷೇತ್ರವು ||ಅ||

ಜ್ಞಾನದ ಜ್ಯೋತಿಯಿರುವ ತಾತಯ್ಯನ ಮಂದಿರ

ಕಾಣುವ ಕಣ್ಣಿಗೆ ಎನಿತೊಂದು ಸುಂದರ ||ಅ||

ಎರ್ರಿಯ ತಾತನೇ ಭಕ್ತರ ಆತ್ಮ ಚಂದಿರ ||ಪ||

## ಚೇಳ್ಳಗುರಿಕೆ ಕ್ಷೇತ್ರ ಮಹಿಮೆ

ಚೇಳ್ಳಗುರಿಕೆ ಗ್ರಾಮದ ಮಠವನ್ನು ಅದರ ಮಹೋನ್ನತಿಯನ್ನು ಸಾರುವುದು ಈ ಗೀತೆಯಲ್ಲಿ ಕಂಡುಬರುತ್ತದೆ. ಭಕ್ತಜನರ ಪೂಜೆಯ ವಿಧಿ ವಿಧಾನಗಳು ಅವರಲ್ಲಿದ್ದ ಕಷ್ಟ ಕಾರ್ಪಣ್ಯಗಳನ್ನು ಬಗೆಹರಿಸಿ ನಲಿದು ಹಾಡಿ ಕೊಂಡಾಡುವ ಒಟ್ಟು ಪರಿಗ್ರಹಿಸುವಿಕೆಯು ಇಲ್ಲಿನ ಗೀತೆಯನ್ನು ಗಮನಿಸಿದಾಗ ತಿಳಿಯುತ್ತದೆ.

ಚೇಳ್ಳಗುರಿಕೆಯ ಕ್ಷೇತ್ರ ಮಹಿಮೆಯ ನೋಡಿನಲಿಯುವ

ನಾವ್ ಹಾಡಿ ಕುಣಿಯುವ

ಚೇಳ್ಳಗುರ್ಕಿಯ ಕ್ಷೇತ್ರಮಹಿಮೆಯ, ಚೇಳ್ಳಗುರ್ಕಿಯಾ ಕ್ಷೇತ್ರ ಮಹಿಮೆಯ

ನೋಡಿನಲಿಯುವ, ನಾವ್ ಹಾಡಿ ಕುಣಿಯುವ ||ಅ||

ಬನ್ನಿರಿ ತಾತನ ಪಾದ ಪೂಜೆ ಮಾಡೋಣ

ನಮ್ಮ ಬಾಳಾನು ಹೂವಮಾಡಿಕೊಳ್ಳೋಣ

ಚೇಳ್ಳಗುರ್ಕಿಯ ಕ್ಷೇತ್ರ ಮಹಿಮೆಯ

ನೋಡಿ ನಲಿಯುವ ನಾವ್ ಹಾಡಿ ಕುಣಿಯು ||ಅ||

ತಿಕ್ಕಯ್ಯ ಕಟ್ಟಿದ ಮಠವ ನೋಡುವಾ ||೨||

ಆತನ ಶ್ರದ್ಧೆ ಸ್ಮರಿಸುವಾ...ತಾತನ ಒಲುಮೆ ಬೇಡುವಾ..

ಅನ್ನದಾಸೋಹಕೆ ಧಾನ್ಯವ ನೀಡುವ ಶಿವನ ನಾಮ ಜಪಿಸುವ

ಗುರುವಿನ ಚರಣದಿ ದಾಸರಾಗುವ ||ಪ||

ಕಾಣಿಕೆ ನೀಡುವ ಸ್ವಾಮಿ ಒಲಿಸುವಾ ||೨||

ತಾತನ ಕರುಣೆ ಹೊಂದುವ, ದುರ್ಗುಣ ದೂರ ಮಾಡುವಾ

ಬೇಡಿದ ಭಾಗ್ಯವಾ ಕರುಣಿಸೋ ತಾತನ ಲೀಲೆಯ ನಿರತ ಸ್ಮರಿಸುವಾ

ಜಗದ ಜ್ಯೋತಿಗೆ ಶರಣರಾಗುವಾ ||ಪ||

ಇಳೆಕೊಳೆ ಸರಿಸುವ, ವರಸುಮಾ ಸುರಿಸುವ ||೨||

ತಾತನ ಮಹಿಮೆ ಪಾಡುವ ಕ್ಷೇತ್ರದ ಹಿರಿಮೆ ಸಾರುವ

ನಂಬಿದ ಭಕುತರ ಕಾಯುವ ಹರನಿಗೆ

ಹರಕೆ ನೀಡಿ ಒಲಿಸುವ ನಮ್ಮ ಬವಣೆಯ ನೀಗಿನಲಿಯುವ ||ಪ||

ಬನ್ನಿರಿ ತಾತನ ಪಾದ ಪೂಜೆ ಮಾಡೋಣ

ನಮ್ಮ ಬಾಳಾನು ಹೂವ ಮಾಡಿಕೊಳ್ಳೋಣ

ಚೇಳ್ಳಗುರ್ಕಿಯ ಕ್ಷೇತ್ರ ಮಹಿಮೆಯ

ನೋಡಿನಲಿಯುವ ನಾವ್ ಹಾಡಿ ಕುಣಿಯುವ ||೨|| ||ಪ||

ಕಬ್ಬಿನ ಜಿಲ್ಲೆಯನ್ನು ಎಲ್ಲಿ ಕಚ್ಚಿದರೂ ಅದು ಸಿಹಿಯಾಗಿರುತ್ತದೆ. ಹಾಗೆಯೇ ಯೌಗಿಕ ಪುರುಷರ ಎಲ್ಲಾ ಸಿದ್ಧಿಗಳು ಭಕ್ತ ಜನರ ಸಂಕಷ್ಟಗಳನ್ನು ಮೌನವಾಗಿಯೇ ಪರಿಹರಿಸಿದ ಸ್ಥಿತಿಯನ್ನು ಕಾಣುತ್ತೇವೆ. ಮನಸ್ಸು ಸ್ಥೂಲವಲ್ಲ ಅದು ಕೊಳೆಯಾಗುವ ಪ್ರಶ್ನೆಯೂ ಇಲ್ಲ. ಶುಚಿಯಾಗುವ ಪ್ರಶ್ನೆ ಮೊದಲೇ ಇಲ್ಲ. ಮನಸ್ಸು ಶುದ್ಧಿಯಾಗುವುದು ದಿವ್ಯವಾಗುವುದು ದೈವಿಕ ಚಿಂತನೆಗಳಿಂದ ಪಾರಮಾರ್ಥಿಕ ಸಾಧನೆಗಳಿಂದ ಎಂಬುದನ್ನು ಸಾಧಿಸಿ ತೋರಿಸಿದ ಪುಣ್ಯ ಪುರುಷನಾದ ಎರ್ರಿತಾತನ ಕುರಿತು ಉಲ್ಲೇಖಿತ ಕೃತಿಗಳು, ಪುರಾಣಗಳು, ಭಕ್ತಿಗೀತೆಗಳ ಮೂಲಕ ನೋಡಲಾಗಿದ್ದು ರಚನೆಗೊಂಡ ಪ್ರತಿ ಕೃತಿಗಳು ವೈಯಂ ಚಂದ್ರಯ್ಯನವರ ಕ್ಷೇತ್ರಕಾರ್ಯಾಧಾರಿತ ಮಾಹಿತಿಯಿಂದ ಎಂಬುದು ಸ್ಪಷ್ಟ.

**ಅಡಿಟಿಪ್ಪಣಿಗಳು**

೧. ಕರಿಯಪ್ಪ ಜೆ, ಬಳ್ಳಾರಿ ಜಿಲ್ಲೆಯ ಅವಧೂತರು, ಅಪ್ರಕಟಿತ ಮಹಾನಿಬಂಧ ಪು.೨೦೦.

೨. ವಿದ್ಯಾಶಂಕರ್ ಎಸ್, ವೀರಶೈವ ಪುರಾಣಗಳು, ಪು.೫.

೩. ಉರಿಲಿಂಗಪೆದ್ದಿ, ೨೭೬

೪. ಚನ್ನಬಸವೇಶ್ವರ ಸಿ.ವ, ಚೇಳಗುರಿಕೆ ಎರ್ರಿಸ್ವಾಮಿಗಳ ಲೀಲಾವಿಲಾಸ, ಪು.೨.

೫. ಅದೇ ಪು. ೩೬-೩೮ರಲ್ಲಿ

೬. ಅದೇ ಪು.೪೯

೭. ಬಸವರಾಜ್ ಬಿ.ಸಿ, ಚೇಳಗುರಿಕೆ ಎರ್ರಿಸ್ವಾಮಿಗಳವರು ಪು.೫೬.

೮. ಹಿರೇಮಠ ಆರ್.ಸಿ, (ಸಂ). ಗುಬ್ಬಿ ಮಲ್ಲಣಾರ್ಯ ವಿರಚಿತ ವೀರಶೈವಾಮೃತ ಪುರಾಣ, ಭಾಗ ೧, ಪು.೧೬.

೯. ಅದೇ ಪು.೧೪

೧೦. ತ.ಸು.ಶ್ಯಾಮರಾಯ, ಕನ್ನಡ ಸಾಹಿತ್ಯ ಚರಿತ್ರೆ, ಪು.೫೦

೧೧. ನಾಗೇಶಶಾಸ್ತ್ರಿಗಳು ವೈ, ಲೀಲಾಮೃತ ಪುರಾಣ, ಪು.೪.

೧೨. ಅದೇ ಸಂಧಿ, ೦೨, ಪು.೩೬.

೧೩. ಅದೇ ಸಂಧಿ, ೦೫, ಪು.೩೪.

೧೪. ಅದೇ ಸಂಧಿ ೦೫, ಪು.೫೭.

೧೫. ಅದೇ ಸಂಧಿ ೦೫, ಪು.೬೩.

೧೬. ಮಲ್ಲೇಪುರಂ ಜಿ.ವೆಂಕಟೇಶ, ಅರಿವಿನ ಕಥನ, ಪು.೦೪.

೧೭. ನಾಗೇಶಶಾಸ್ತ್ರಿ ವೈ, ಲೀಲಾಮೃತ ಪುರಾಣ ಸಂಧಿ, ೦೭, ಪು.೭೭

೧೮. ಅದೇ ಸಂಧಿ ೭, ಪು.೮೦.

೧೯. ಅದೇ ಸಂಧಿ ೧೨, ಪು.೧೩೮.

೨೦. ಅದೇ ಸಂಧಿ ೧೨, ಪು.೧೩೯.

೨೧. ದೊಡ್ಡನಗೌಡರು ಜೋಳದರಾಶಿ, ಜೋಳದರಾಶಿ ಕಾವ್ಯ, ಪು.೭೬

೨೨. ಹಾಡಿದವರು ಹನುಮಂತಪ್ಪ ಮಾದಾರ್, ವಯಸ್ಸು ೭೦, ಚೇಳಗುರಿಕೆ ಗ್ರಾಮ.

೨೩. ಹಾಡಿದವರು ಎರ್ರೆಪ್ಪ, ವಯಸ್ಸು ೬೦, ಚೇಳ್ಳಗುರಿಕೆ ಗ್ರಾಮ.

೨೪. ಜೋಳದರಾಶಿ ದೊಡ್ಡನಗೌಡರು, ಜೋಳದರಾಶಿ ಕಾವ್ಯ ಪು.೭೩

೨೫. ಚನ್ನಬಸವೇಶ್ವರ ಸಿ.ವ., ಶ್ರೀ ಎರ್ರಿಸ್ವಾಮಿಗಳ ಲೀಲಾವಿಲಾಸ, ಪು.೪೯-೫೦.

೨೬. ಅದೇ ಪು.೫೦.

೨೭. ದೊಡ್ಡನಗೌಡರು ಜೋಳದರಾಶಿ, ತಾತನ ಗೀತಾಂಜಲಿ ಪು.೭೦.

೨೮. ಅದೇ ಪುಟ.೭೯

೨೯. ಹಾಡಿದವರು, ಲಕ್ಷ್ಮಮ್ಮ ವಯಸ್ಸು ೬೦, ಚೇಳ್ಳಗುರಿಕೆ ಗ್ರಾಮ

೩೦. ಹಾಡಿದವರು ರಂಗಮ್ಮ, ವಯಸ್ಸು ೭೦, ಚೇಳ್ಳಗುರಿಕೆ ಗ್ರಾಮ

೩೧. ನಾಗೇಶಶಾಸ್ತ್ರಿಗಳು ವ್ಹೈ, ಲೀಲಾಮೃತ, ಸಂಧಿ ೧೬, ಪು.೧೮೭.

೩೨. ಜೋಳದರಾಶಿ ದೊಡ್ಡನಗೌಡರು (ಸಂ) ಭಕ್ತಿಗೀತೆಗಳು ಪು.೬೩.

೩೩. ಕರಿಯಪ್ಪ ಜೆ, ಬಳ್ಳಾರಿ ಜಿಲ್ಲೆಯ ಆವಧೂತರು, ಅಪ್ರಕಟಿತ ಮಹಾನಿಬಂಧ ಪು.೨೦೫.

೩೪. ಶಿವಯೋಗಿ ಈತ ಶ್ರೀ ಎರ್ರಿತಾತ, ವೀಡಿಯೋ ಚಿತ್ರಿತ ಗೀತೆಗಳು.

೩೫. ಶ್ರೀ ಎರ್ರಿತಾತ, ಭಕ್ತಿಗೀತೆಗಳು ಮತ್ತು ನಾಟಕ.

# ಅಧ್ಯಾಯ - ೫

## ಚೇಳಗುರಿಕೆ ಎರ್ರಿತಾತ: ಶಿಷ್ಯ ಪರಂಪರೆ

೫.೧. ಲೆಕ್ಕಯ್ಯಾವಧೂತರು

೫.೨. ಶಿವರಾಮಾವಧೂತರು

೫.೩. ಸಿದ್ಧಲಿಂಗಪ್ಪ

೫.೪. ನಿರಂಜನಸ್ವಾಮಿಗಳು

೫.೫. ಎ.ಜಿ. ಶ್ಯಾಮಣ್ಣ ಮತ್ತು ಜೋಳದರಾಶಿ ದೊಡ್ಡನಗೌಡರು

೫.೬. ಇತರ ಶಿಷ್ಯರು

## ಚೇಳಗುರಿಕೆ ಎರ್ರಿತಾತ: ಶಿಷ್ಯ ಪರಂಪರೆ

ಕೇವಲ ಲೋಕೋತ್ತರವಾದ ಭಿನ್ನಣ ಹಾಗೂ ಭೀಮತ್ಸರಗಳ ಸಂಕೀರ್ಣತೆಯನ್ನು ದೂರ ಸರಿಸುವುದರ ಜೊತೆಗೆ ಸಮಾಜದಲ್ಲಿ ಮಡುಗಟ್ಟನಿಂತಿದ್ದ ಶೋಷಣೆಯ ವಿರುದ್ಧ ಡಿಂಡಿಮವನ್ನು ಭಾರಿಸುವುದು ಯೌಗಿಕ ಪುರುಷರ ಒಂದು ಧ್ಯೇಯವೆಂಬಂತೆ ಕಂಡುಬರುತ್ತದೆ. ಕೆಲವರು ನೇರವಾಗಿ ಪ್ರತಿಭಟಿಸಿದರೆ, ಇನ್ನೂ ಕೆಲವರು ಮೌನದ ಮೂಲಕ ಸಮಾಜದ ಕಂದಾಚಾರಗಳನ್ನು ಪ್ರಶ್ನಿಸಿದರು. ಬಡಜನರ ದುಃಖ ದುಮ್ಮಾನಗಳಿಗೆ ಓಗೊಟ್ಟವರಂತೆ, ಹಲವಾರು ಪವಾಡ ಸಾದೃಶ್ಯಗಳ ಮೂಲಕ ಸ್ಪಂದಿಸುವ ಪ್ರಯತ್ನ ಮಾಡಿದರು. ತಿಳಿದೋ, ತಿಳಿಯದೆಯೋ ಭಕ್ತರ ನಿರೀಕ್ಷೆಗಳಿಗೆ ಹಸಿರ ಬಿಡಿಸಿದರು.

ಉದ್ದೇಶ ಪೂರ್ವವಲ್ಲದ ಕೆಲವೊಮ್ಮೆ ವಿವೇಚನಾರಹಿತರಾಗಿ ಗತಿಮತಿಗಳು ನಿರ್ಲಿಪ್ತ ಬದುಕಿನಲ್ಲಿದ್ದುಕೊಂಡೇ ಬರಗಾಲ, ಮಳೆ ಬೆಳೆಯ ಕುರಿತ ಮುನ್ಸೂಚನೆಗಳು, ಕಾಲರ, ಪ್ಲೇಗುಗಳಂಥ ಮಾರಕ ರೋಗಗಳ ನಿವಾರಣೆ, ಫಲವಂತಿಕೆಯನ್ನು ಅನುಗ್ರಹಿಸುವುದು ಮುಂತಾದ ಭಕ್ತರ ಬದುಕಿನ ಆಶಯಗಳನ್ನು ಈಡೇರಿಸುತ್ತಿದ್ದರು. ಅಂತಹ ಸಂದಿಗ್ಧ ಪರಿಸ್ಥಿತಿಯ ಜಾಡ್ಯದಿಂದ ಬಿಡಿಸಿಕೊಂಡವರು ಆರಾಧನಾ ಹಾಗೂ ಧಾರ್ಮಿಕ ಮಹಾಪುರುಷರನ್ನು ಕಾಣುತ್ತಿರುವುದು ಭಾರತೀಯ ಸಂಸ್ಕೃತಿಯಲ್ಲಿ ಹೊಸದೇನಲ್ಲ. ಪ್ರತಿಯೊಂದು ವಿಧಿವಿಧಾನಗಳು ಪೂಜನೀಯ ರೂಪಾಂತರ ಪಡೆದು ತದನಂತರವೇ ಸಾಮಾಜಿಕ ನೆಲೆಯೊಳಗೆ ಅಸ್ತಿತ್ವವನ್ನು ಭದ್ರಪಡಿಸಿಕೊಂಡಿರುವುದನ್ನು ಕಾಣುತ್ತೇವೆ. ಆರಾಧನಾ ಭಾವನೆ ಉಜ್ವಲವಾಗಿ ತಪಸ್ಯಾರೂಪಕ್ಕೆ ತಿರುಗಿದ ಉಪಾಸನೆಯಾಗುತ್ತದೆ. ಉಪಾಸನೆ ತುತ್ತತುದಿಗೆ ತಲ್ಲೀನತಾ ರೂಪದ ಸಾಕ್ಷಾತ್ಕಾರದಲ್ಲಿ ಪರ್ಯಾವಸಾನ ಹೊಂದುತ್ತದೆ. ಆಗ ಸಾಧಕನಿಗೆ ಸಿದ್ಧಿಯಾಯಿತೆಂದು ಹೇಳುತ್ತೇವೆ. ಪೂಜೆ ಆರಾಧನೆ ಮೊದಲಾದ ಪ್ರಕ್ರಿಯೆಗಳು ಲೌಕಿಕ ಅಲೌಕಿಕ ಸಿದ್ಧಿಗೆ ಅನಿವಾರ್ಯವೆಂಬುದು ಸಾಮಾನ್ಯ.

ಇಡೀ ವಿಶ್ವದ ಮಹಾಪುರುಷರೆಲ್ಲರೂ ಆಧ್ಯಾತ್ಮಿಕತೆಯ ತುತ್ತತುದಿಗೇರಿದ್ದೇ ಹೀಗೆ. ಪೂಜೆ ಪುನಸ್ಕಾರ, ವ್ರತಾರಾಧನೆಗಳು, ಉಪಾಸನೆ ಮತ್ತು ಸೇವೆ ಮೊದಲಾದ ಪ್ರಕ್ರಿಯೆಗಳ ಉದ್ದೇಶ, ಆರಾಧ್ಯ ಅಥವಾ ಸೇವ್ಯ ಶಕ್ತಿಯಂತಾಗುವುದು. ಅದು ಕಠಿಣವಾದ, ಕಂಟಕಮಯವಾದ ಜಟಿಲ ಕುಟಿಲ ಮಾರ್ಗ. ಆ ಮಾರ್ಗದ ಆರಂಭದಲ್ಲಿಯೇ ಸೋಲುವವರು ಹಲವರಾದರೆ, ಮತ್ತೆ ಕೆಲವರು ಮಧ್ಯಮ ಹಂತಗಳಲ್ಲಿಯೇ

ಜಾರಿಹೋಗುವುದುಂಟು. ಒಬ್ಬರೋ ಇಬ್ಬರೋ ಅಥವಾ ಕೆಲವು ಮಂದಿ ಮಾತ್ರವೇ ಈ ಎಲ್ಲ ವಿಘ್ನಗಳನ್ನು ದಾಟಿ ಹಲವು ಅಗ್ನಿಪರೀಕ್ಷೆಗಳಲ್ಲಿ ತೇರ್ಗಡೆಯಾಗಿ ಗುರಿಯನ್ನು ಮುಟ್ಟಬಲ್ಲರು. ಬುದ್ಧ, ಕ್ರಿಸ್ತ, ಪೈಗಂಬರ್, ಬಸವಣ್ಣ, ಅವರನ್ನು ಅವತಾರ ಪುರುಷ, ವಿಭೂತಿ ಪುರುಷರೆಂದು ಕರೆದರು. ಅವರು ಮರ್ತ್ಯದಲ್ಲಿಯೇ ಅಮರ್ತ್ಯವರ್ಗಕ್ಕೆ ಸೇರಿದವರು. ವಿಭೂತಿತ್ವ ಎಂದರೆ ವಿಶೇಷವಾದ ಭೂತಿ. ಯಾವುದೋ ಒಂದು ವರ್ಗಕ್ಕೆ ಸೀಮಿತವಾಗದೆ, ಬದುಕಿನ ಎಲ್ಲಾ ಪ್ರಕಾರಗಳಲ್ಲಿ ಅದರ ಪ್ರಕ್ರಿಯೆಯು ಆವರಿಸಿರುತ್ತದೆ.

ಸಂಸಾರ ನಿಸ್ಸಾರವೆಂದು ತ್ಯಜಿಸಿ, ಸನ್ಯಾಸಿಗಳಾಗಿ ಜ್ಞಾನ ಸಂಪಾದಿಸಿಕೊಂಡವರಿಂದಲೇ ಸಮಾಜ ದುರಾವಸ್ಥೆಯನ್ನು ಅನುಭವಿಸಬೇಕಾಗಿ ಬಂದಾಗ್ಯೂ, ಯಾರೂ ವಿರೋಧಿಸಲಿಲ್ಲ. ವಿರೋಧಿಸುವುದೇ ಅಧರ್ಮ ಎನ್ನುವಷ್ಟರ ಮಟ್ಟಿಗೆ ಅವರ ತಿಳುವಳಿಕೆ ಗಟ್ಟಿಗೊಂಡಿತ್ತು. ಆಗ ಅನಿವಾರ್ಯವೆಂಬಂತೆ ತಮ್ಮ ಸಮಾಜದ ಮೇಲು ಪ್ರಶ್ನಿಸಬೇಕಾಯಿತು. ಆ ಧರ್ಮಶಾಸ್ತ್ರ, ಶೃತಿ ಸ್ಮೃತಿ, ಆಗಮ, ಪುರಾಣಗಳ ತತ್ವ, ಸಿದ್ಧಾಂತ ಹೇಳಿಕೆಗಳೆಲ್ಲ ಕೇವಲ ಗ್ರಂಥಗಳಿಗೆ ಮಾತ್ರ ಸೀಮಿತವಾಗಿದ್ದವು. ಆದರೆ ಅವು ಆಚರಣೆಯಲ್ಲಿರಲಿಲ್ಲ. ಹೀಗೆ ಪಡೆದುಕೊಂಡ ಜ್ಞಾನ ಆಚರಣೆಗೆ ಬಾರದಿದ್ದರೇನು ಪ್ರಯೋಜನ? ಅದರಲ್ಲಿ ಕೆಲವು ಆಚರಣೆಗಳಾಗಿ ಜಾರಿಗೊಂಡಿದ್ದವು. ಸಮಾಜದ ಶೋಷಣೆಗೆ ಅಸಮಾನತೆಗೆ ತಾಣವಾಗಿರುವುದು ತಿಳಿದ ವಿಷಯ.

ಕೇವಲ ಒಂದೇ ಪಂಗಡ ಜನರ ಹಿತಕ್ಕಾಗಲಿ ಶ್ರಮಿಸದೇ ಇಡೀ ಮನುಕುಲದ ಒಳಿತಿಗಾಗಿ, ಛಿದ್ರಗೊಂಡ ಮನಸ್ಸುಗಳ ಒಗ್ಗೂಡಿಸುವಿಕೆಗಾಗಿ ಪ್ರಯತ್ನಿಸಿದ ಪ್ರಾಮಾಣಿಕತೆ ನಿಜಕ್ಕೂ ಒಪ್ಪಿತವಾದದ್ದು. ಅವರ ಕನಸು ಕನವರಿಕೆಗಳಾಗಲಿ, ಆಸೆ ಆಕಾಂಕ್ಷೆಗಳಾಗಲಿ, ನೆಪ ನೆನಪುಗಗಲಿ, ಭವಬಂಧನಗಳಾಗಲೀ ಅವರ ಆಧ್ಯಾತ್ಮಿಕ ಆಲೋಚನಗಳಿಗೆ ಅಡ್ಡಿಪಡಿಸಲಿಲ್ಲ. ದುಃಖ ದುಮ್ಮಾನಗಳ ಮೇಳೈಸಿಕೊಂಡು ಬಂದರೂ ಸಹ ಕುಗ್ಗಿ ಕುಬ್ಜರಾಗದಷ್ಟು ಪರಲೋಕದ ವ್ಯಾಮೋಹಕ್ಕೆ ಜಾರಿಬಿದ್ದರು. ಅಗೋಚರತೆಯೆಡೆಗೆ ಮನಸ್ಸು ಸದಾ ಸಮೀಪಿಸುತ್ತಿರುವುದು ಲೌಕಿಕತೆಯ ಲಕ್ಷಣವಾಗಿ ನೆಲೆಗೊಂಡಿತ್ತು.

ಪ್ರಸ್ತುತ ಅಧ್ಯಯನದ ಭಾಗದಲ್ಲಿ ಚೇಳಗುರಿಕೆ ಎರ್ರಿತಾತನ ಶಿಷ್ಯಸಂಕುಲವನ್ನು ಗಮನಿಸಿದಾಗ ನೇರವಾಗಿ ಶಿಷ್ಯತ್ವವನ್ನು ಅಂಗೀಕರಿಸದಿದ್ದರೂ, ಅವರ ಭಾವನಾತ್ಮಕ ವಿವಿಧ ಬಗೆಗಳಲ್ಲಿ ಗುರುತತ್ವವನ್ನು ಸ್ವೀಕರಿಸಿಕೊಂಡರು. ಕೆಲವು ಸಮಕಾಲೀನ ಪರಿಸರದ ಪರಿಧಿಯೊಳಗೆ ಬಂದ ಹಲವಾರು ಯೋಗಿಕ ಪುರುಷರನ್ನು ತೌಲನಿಕವಾಗಿ ನೋಡಿದಾಗ ಮರವೊಂದೇ ರೆಂಬೆ ಕೊಂಬೆಗಳು ಮಾತ್ರ ಬೇರೆಯಾಗಿದ್ದವು. ಅವರ ಆಧ್ಯಾತ್ಮಿಕತೆಯ ಸಾರದಲ್ಲಾಗಲೀ, ಅವರು ಸಂಚಾರಿಸಿದ ಪ್ರಯಾಣದಲ್ಲಾಗಲೀ, ಸಿದ್ಧಿಸಾಧನೆಗಳಲ್ಲಾಗಲೀ ಹೊರಗಡೆಗೆ ವಿಭಿನ್ನವೆಂಬಂತೆ ಕಂಡುಬಂದರೂ, ಅಂತರಂಗದ ನಿಲುವುಗಳಲ್ಲಿ ಸಾಮ್ಯವನ್ನು ಹೆಚ್ಚಾಗಿ ಕಾಣಬಹುದಾಗಿದೆ. ಅಂಥಹ ಶಿಷ್ಯರನ್ನು, ಸಮಕಾಲೀನ ಧಾರ್ಮಿಕ ಸಂತರನ್ನು ವರ್ತಮಾನದ ಪರಿಸ್ಥಿತಿಗೆ ವಿಲೀನಗೊಳಿಸಿ ನೋಡುವುದು ಮತ್ತು ಅವರವರ ಅಲೌಕಿಕ ಆಲೋಚನೆಗಳನ್ನು ಅವಲೋಕಿಸುವುದು ಸೂಕ್ತವೆಂದೆನಿಸುತ್ತದೆ.

**ಶಿಷ್ಯ ಸಂಕುಲ**

ಭಾರತೀಯ ಪುರಾಣ ಆಗಮಗಳು, ವೇದ ಉಪನಿಷತ್ತುಗಳು ಮುಂತಾದ ಧಾರ್ಮಿಕ ಸಾಹಿತ್ಯ

ಕೃತಿಗಳಲ್ಲಿ ಗುರು ಶಿಷ್ಯರ ಬಗೆಗಿನ ಹಲವಾರು ವಿರೋಧವಾದ ಎನ್ನುವುದಕ್ಕಿಂತಲೂ ಪರವಾದ ಚಿಂತನೆಗಳು ನಡೆದಿರುವುದೇ ಹೆಚ್ಚು. ಪುರಾತನ ಕಾಲದಿಂದಲೂ ಅದಕ್ಕೆ ವಿಶೇಷವಾದ ಮಹತ್ವ ಇದೆ. ಗುರು ಎಂದರೆ ಯಾರು? ಆತನ ವ್ಯಕ್ತಿತ್ವ ವಿಶಿಷ್ಟತೆಗಳೇನು? ಮುಂತಾದ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳುವ ಬದಲು ಗುರುಯೆಂಬುವವನು ಶಿಷ್ಯನ ಭವದ ಚಿಂತೆಗಳಿಂದ ವಿಮುಕ್ತಿಗೊಳಿಸಿ ಪರಮಾರ್ಥಿಕ ಆಲೋಚನೆಗೆ ಹೇಗೆ ಹುರಿದುಂಬಿಸಬಲ್ಲ, ಆ ಮೂಲಕ ಸಾಂಸಾರಿಕ ಬದುಕಿನಲ್ಲಿದ್ದುಕೊಂಡೇ ಸಮಾಜದ ಸ್ವಸ್ಥತೆಯನ್ನು ಹೇಗೆ ಕಾಪಾಡಬೇಕೆಂಬ ನಿಲುವುಗಳಿಗೆ ಪ್ರೇರಕನಾಗುತ್ತಾನೆ ಎಂಬುದು ಮುಖ್ಯವಾಗುತ್ತದೆ.

ಗುರುವಿನ ಸ್ಥಾನ ಪಲ್ಲಟವನ್ನು ಗಮನಿಸಲು ಸಹಕಾರಿಯಾದ ಅಲ್ಲಮಪ್ರಭುವಿನ ಒಂದು ವಚನ ಹೀಗಿದೆ. "ಕೃತಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದೊಡೆ ಆಗಲಿ ಮಹಾ ಪ್ರಸಾದವೆಂದನಯ್ಯಾ. ತ್ರೇತಾಯುಗದಲ್ಲಿ ಶ್ರೀಗುರು ಶಿಷ್ಯಂಗೆ ಬೈದು ಬುದ್ಧಿಯ ಕಲಿಸಿದೊಡೆ ಆಗಲಿ ಮಹಾ ಪ್ರಸಾದವೆಂದನಯ್ಯಾ. ದ್ವಾಪರ ಯುಗದಲ್ಲಿ ಶ್ರೀಗುರು ಶಿಷ್ಯಂಗೆ ಜಂಗಿಸಿ ಬುದ್ಧಿಯ ಕಲಿಸಿದೊಡೆ ಆಗಲಿ ಮಹಾ ಪ್ರಸಾದವೆಂದನಯ್ಯಾ. ಕಲಿಯುಗದಲ್ಲಿ ಶ್ರೀಗುರು ಶಿಷ್ಯನಿಗೆ ವಂದಿಸಿ ಬುದ್ಧಿಯ ಕಲಿಸಿದೊಡೆ ಆಗಲಿ ಮಹಾಪ್ರಸಾದವೆಂದನಯ್ಯಾ. ಗುಹೇಶ್ವರಾ ನಿಮ್ಮ ಕಾಲದ ಕಟ್ಟಳೆಯ ಕಲಿತನಕೆ ನಾನು ಬೆರಗಾದೆನು". ಕಾಲದಿಂದ ಕಾಲಕ್ಕೆ ಸಾಮಾಜಿಕ ಚಹರೆಗೆ ಅನುಗುಣವಾಗಿ ಅನಿವಾರ್ಯವೆಂಬಂತೆ ಬದಲಾಗುತ್ತಿರುವ ಗುರು ಶಿಷ್ಯರ ಸಂಬಂಧವನ್ನು ಕುರಿತು ಪ್ರಸ್ತಾಪಿಸಲಾಗಿದೆ. ಹನ್ನೆರಡನೆಯ ಶತಮಾನದಿಂದೀಚೆಗೆ "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣಾ ಮುಕುತಿ" ಎಂಬ ಧೋರಣೆಯು ಮಹತ್ವಪಡೆದರೆ, ಇಪ್ಪತ್ತನೆಯ ಶತಮಾನದ ಆಸುಪಾಸಿನಲ್ಲಿ "ಗುರುವಿನ ಸಮಾನನಾಗುವ ತನಕ ದೊರೆಯದಣ್ಣಾ ಮುಕುತಿ" ಎಂಬ ತಳಹದಿಗೆ ಬಂದು ನಿಂತಿತು. ವರ್ತಮಾನದ ಸ್ಥಿತಿಯಲ್ಲಿ ಅದು "ಗುರುವಿನ ಮೀರಿಸುವ ತನಕ ದೊರೆಯದಣ್ಣಾ ಮುಕುತಿ" ಎಂಬ ಸೈದ್ಧಾಂತಿಕ ಬಿಕ್ಕಟ್ಟು ತಲೆದೋರಿರುವುದು ಕಾಣತ್ತೇವೆ.

ಅರಿವೇ ಗುರು ನಿಜ ಆದರೆ ಅಂತರಂಗದ ಅರಿವಿಗೆ ವಿಷಯಗಳ ಮುಸುಕು ತೆರೆಯ ಸರಿಸಿ ಅರುವಿನ ಬಾಗಿಲ ತೆರೆಯಲು ಶ್ರೀಗುರುವಿನ ಉಪದೇಶ ಬೇಕೇ ಬೇಕು. ನಾಲ್ಕುವೇದ, ಆರುಶಾಸ್ತ್ರ, ಹದಿನೆಂಟು ಪುರಾಣ ಬೇಡವಯ್ಯ ಎನಗೆ ಭಗವಚ್ಚಿಂತನೆವೊಂದೆ ಸಾಕಯ್ಯಾ. ಪುಣ್ಯ ಕ್ಷೇತ್ರದಿ ಅಲೆಯುವುದು ಸಾಕಯ್ಯಾ, ಗಿರಿಹತ್ತಿ ಇಳಿಯುವುದು ಬೇಡವಯ್ಯಾ ನಿಮ್ಮ ಪಾದ ಸ್ಪರ್ಶವೊಂದೆ ಸಾಕಯ್ಯಾ ಎಂಬುದರಲ್ಲಿ ಗುರುವೇ ಅರಿವು ಎಂಬ ಹರವು ಶಿಷ್ಯರಲ್ಲಾಗಲಿ ಭಕ್ತರಲ್ಲಾಗಲಿ ಬೇರೂರಿರುವುದು, ಗುರುಸ್ಥಾನವನ್ನು ಇನ್ನಷ್ಟು ಭದ್ರಗೊಳಿಸಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

**೫.೧. ತಿಕ್ಕಯ್ಯಾವಧೂತರು**

ಅಲೌಕಿಕ ಪಂಥಗಳ ಮಹಾಪುರುಷರ ಬದುಕು ಅಷ್ಟೇ ಅಲ್ಲ, ಅವರನ್ನು ಜನರು ಗುರುತಿಸುತ್ತಿದುದು ಅವರ ಬಾಹ್ಯವರ್ತನೆಗಳಿಂದ. ಹೊರಗಣದ ಭೂಷಣಕ್ಕಿಂತ ಅಂತರಂಗದ ಸ್ವಚ್ಛತೆಗೆ ಅವರು ಹೆಚ್ಚು ಪರಿಶ್ರಮ ಪಡುತ್ತಿದ್ದರು. ಎರ್ರಿ, ತಿಕ್ಕ ಎಂಬ ಹೆಸರುಗಳ ಅವರ ಬದುಕನ್ನು ಸೂಚಿಸುವಂತಿದ್ದರಿಂದ

ಅವರನ್ನು ಆ ಹೆಸರುಗಳಿಂದಲೇ ಕರೆಯುತ್ತಿದ್ದರು. ಎಲ್ಲೋ ಹುಟ್ಟಿ, ಎಲ್ಲೋ ಬೆಳೆದು ತಮ್ಮ ಸಿದ್ಧಿ ಸಾಧನೆಗಳ ಪವಾಡಗಳ ಮೂಲಕ ಭಕ್ತರ ಬದುಕನ್ನು ಹಸನಾಗಿಸಿದರು. ಅಂಥವರಲ್ಲಿ ಚೇಳಗುರಿಕೆ ಎರ್ರಿತಾತನಿಗೆ ಅತ್ಯಂತ ನಿಷ್ಠೆಯಿಂದ ಸೇವೆಗೈದ ತಿಕ್ಕಯ್ಯಾವಧೂತರದು ವಿಶಿಷ್ಟ ವ್ಯಕ್ತಿತ್ವ. ವೈರಾಗ್ಯ ಶೀಲತ್ವ, ವಾಕ್ಚತುರತೆ, ನಿಷ್ಠುರತೆ, ಸತ್ಯಸಂಬಂಧ, ಅಚಲಭಕ್ತಿ, ಕಾಯಕ ನಿಷ್ಠೆ ತಿಕ್ಕಯ್ಯನವರಲ್ಲಿ ಮನೆಮಾಡಿಕೊಂಡಿದ್ದವು.

ಎರ್ರಿತಾತನ ದರ್ಶನಕ್ಕೆಂದು ಹಗಲೂ ಇರುಳೂ ಮೂಲೆ ಮೂಲೆಗಳಿಂದ ಭಕ್ತರು ಬರುತ್ತಿದ್ದರು. ದರ್ಶನಾರ್ಥಿಗಳ ಊಟ ವಸತಿಗಳ ಸೌಕರ್ಯಕ್ಕಾಗಿ ತಾತನಿಗೆ ಅಂತಸ್ತಿಗೆ ಅನುಗುಣವಾದ ಒಂದು ಮಠದ ಅವಶ್ಯಕತೆ ಹೆಚ್ಚಾಯಿತು. ವಿವಿಧ ಗ್ರಾಮ, ಜಿಲ್ಲೆ ಹಾಗೂ ರಾಜ್ಯಗಳಿಂದ ಬರುತ್ತಿದ್ದ ಭಕ್ತರ ಸಂಖ್ಯೆ ದಿನದಿಂದ ದಿನಕ್ಕೆ ಇಮ್ಮಡಿಗೊಳ್ಳುತ್ತಾ ಬಂತು. ತಾತನು ಇರುತ್ತಿದ್ದ ಗೃಹ ಚಿಕ್ಕದಾಗಿ ಸಾಮಾನ್ಯ ಗೃಹಸ್ಥನಂತೆ ಮನೆಯಲ್ಲಿರುವುದು ಸೂಕ್ತವಲ್ಲವೆಂದೆನಿಸಿತು. ಈ ಮಹಾಸ್ವಾಮಿಗೆ ಒಂದು ದೊಡ್ಡ ಮಠವನ್ನೆ ಕಟ್ಟೋಣ ಎಂದು ಭಕ್ತರು ನಿರ್ಧರಿಸಿದರು. ಮಠ ನಿರ್ಮಾಣ ಕಾರ್ಯದ ಭಾವ ಸ್ಫುರಿಸಿದ್ದು ಪ್ರಥಮತಃ ತಿಕ್ಕಯ್ಯನಿಗೆ ತನ್ನ ತಲೆಯಲ್ಲಿದ್ದ ತಿಕ್ಕನ್ನು ಮಂದಿಯ ತಲೆಗೂ ತಿಕ್ಕಿ ಮಠವನ್ನು ಕಟ್ಟಲು ಎಲ್ಲರನ್ನೂ ಪ್ರೇರೇಪಿಸಿ, ಪ್ರಚೋದಿಸಿ, ಹುರಿದುಂಬಿಸಿ ಸಾಧಿಸಿದ ಕೀರ್ತಿ ಮಹಾನುಭಾವಿಯಾದ ತಿಕ್ಕಯ್ಯನದು.

ಮಠದ ನಿರ್ಮಾಣ ಆಲೋಚನೆಯ ಜೊತೆಗೆ, ಎಲ್ಲಿ ಮಠವನ್ನು ಕಟ್ಟಿಸಬೇಕು? ಅದರ ಮೂರ್ತ ರೂಪಕ್ಕೆ ಇಂಬುಕೊಡುವುದು ಕಷ್ಟವೆನಿಸಿ ಹಿರಿಯರು ಬಂದು ಆಕಡೆ ಈಕಡೆ ಸುತ್ತಾಡಿ ಯಾವ ಆಲೋಚನೆಗಳು ಹೊಳೆಯದಿದ್ದರಿಂದ ತಾತನಲ್ಲಿ ಬಂದು ಕೇಳಿದಾಗ, ಊರ ಒಕ್ಕರಾಣಿ ಕಟ್ಟಿಸಲು ಕಲ್ಲುಗಳು ಹಾಕಿದ ಜಾಗಕ್ಕೆ ತಾತನು ಬಂದುನೋಡಿ ಅಲ್ಲಿಂದ ಮಠ ಕಟ್ಟುವ ಜಾಗಕ್ಕೆ ನಿಂತು ಮೂತ್ರ ವಿಸರ್ಜನೆ ಮಾಡಿದರು. ಒಂದು ಮಾತು ಆಡದೇ ಕೇವಲ ಮೌನವೇ ಮಾತಾಗಿ ತೋರಿತು. ಅಂದಿನ ಗ್ರಾಮದ ಮಠದಯ್ಯನವರಾದ ಗಂಗಾಧರಪ್ಪನವರು "ಇಲ್ಲಿಯೇ ಮಠಕಟ್ಟಿಸಲು ತಾತನಿಚ್ಛೆ" ಎಂದು ತಾತನ ಮೂತ್ರ ವಿಸರ್ಜನೆಯ ಸಂಕೇತವನ್ನು ವಿವರಿಸಿದರು. ತಿಕ್ಕಯ್ಯನವರು ಸಮ್ಮತಿಸಿದ್ದರಿಂದ ಗ್ರಾಮದ ಹಿರಿಯರು, ಅಕ್ಕಪಕ್ಕದ ಗ್ರಾಮದ ಹಲವಾರು ಭಕ್ತರ ಸಹಕಾರಗಳಿಂದ ತಿಕ್ಕಯ್ಯನವರು ನಾಡನ್ನೆಲ್ಲಾ ಸುತ್ತಾಡಿ, ಹೋದಲೆಲ್ಲಾ ಕಲ್ಲು ಕರುಗುವಂತೆ ಹಾಡಿ, ಮನಸೆಳೆಯುವಂತೆ ಮಾತಾಡಿ, ಗುರುಕಾರ್ಯಕ್ಕಾಗಿ ಹರಕಾರ್ಯಕ್ಕಾಗಿ ದೇಹಿ ಎಂದು ಬೇಡಿ ತಿಕ್ಕಯ್ಯ ತಾತನ ಮಠವನ್ನು ಕಟ್ಟಲು ಕಂಕಣಬದ್ಧರಾದರು. ಗ್ರಾಮದ ಜನ ತಮ್ಮ ಶಕ್ತ್ಯಾನುಸಾರವಾಗಿ ಸಹಾಯಹಸ್ತ ನೀಡಿದರು. ಶ್ರೀಬಳಗಾನೂರು ಮರಿಸ್ವಾಮಿಗಳು ಕುಳಿತು ಕಲ್ಲಾಟವಾಡಿ ಕಲ್ಲಿನ ಮೇಲೆ ಕಲ್ಲಿಟ್ಟು ಇಲ್ಲೊಂದು ದೊಡ್ಡ ಮಠವಾಗುತ್ತದೆಂಬ ಭವಿಷ್ಯವಾಣಿಯ ಸಾರ್ಥಕಗೊಂಡಂತೆ ಅದೇ ಸ್ಥಳದಲ್ಲಿ ಮಠದ ನಿರ್ಮಾಣ ಕಾರ್ಯ ಪ್ರಾರಂಭವಾಯಿತು.

ಮಠವನ್ನು ಕಟ್ಟುವುದು ಅಷ್ಟು ಸುಲಭದ ಮಾತಲ್ಲ. ದಿನದ ಊಟಕ್ಕೂ ಪರದಾಡಬಹುದಾದ ಗಂಭೀರ ಬರಗಾಲವನ್ನು ಗ್ರಾಮದ ಜನತೆಯಷ್ಟೇ ಅಲ್ಲ, ಸುತ್ತ ಮುತ್ತಲಿನ ಅನೇಕ ಪ್ರದೇಶಗಳಿಗೂ

ಅದರ ಛಾಪು ವಿಸ್ತರಿಸಿಕೊಂಡ ಕಾಲವದು. ಅಂಥಹ ಸಂಧಿಗ್ಧ ಪರಿಸ್ಥಿತಿಯಲ್ಲಿ ತಿಕ್ಕಯ್ಯನು ಮೂಲತಃ ಆಶುಕವಿಯಾಗಿದ್ದು ಎರ್ರಿತಾತನ ಸಿದ್ಧಿಸಾಧನೆಗಳನ್ನು ಕುರಿತು ಹಾಡಿನ ರೂಪದಲ್ಲಿ ಭಕ್ತ ಜನಕ್ಕೆ ತಿಳಿಸುತ್ತಾ ದವಸ ಧಾನ್ಯಗಳನ್ನು ಹಣವನ್ನು ಕೂಡಿಸುತ್ತಾ ಮಠದ ಕಾರ್ಯಕ್ಕೆ ಕೈಂಕರ್ಯ ತೊಟ್ಟನು.

ಭಕ್ತಿಯ ತಿಕ್ಕಿನೊಳಗೆ ತನ್ನನ್ನು ತಾನು ವಿಲೀನಗೊಳಿಸಿ ಅನೇಕರನ್ನು ಅದರ ತೆಕ್ಕೆಯೊಳಗೆ ಸೇರಿಸಿದನು. ಈ ಕಾರ್ಯದಲ್ಲಿ ಹೆಚ್ಚಾಗಿ ಸಹಾಯ ಹಸ್ತ ನೀಡಿದವರಲ್ಲಿ "ಕೊಕ್ಕರಚೇಡು ಗ್ರಾಮದ ಸಾಗರದ ಈಶ್ವರಪ್ಪನೆಂಬಾತನು ಮೂರು ಸಾವಿರ ರೂಪಾಯಿ, ನಾಲ್ಕುನೂರು ರೂಪಾಯಿ ಬೆಲೆ ಬಾಳುವ ಎತ್ತುಗಳು, ನೂರಾರು ರೂಪಾಯಿ ಬೆಲೆಬಾಳುವ ಬಂಡಿಕೊಟ್ಟು ಮಠದ ಕಾರ್ಯದಲ್ಲಿ ತುಂಬಾ ನೆರವಾದ. ಭಾವಣಿ ಫಕೀರಪ್ಪನೆಂಬ ಶ್ರೀಮಂತ ವೈಶ್ಯ ಮೂರುಸಾವಿರ ರೂಪಾಯಿಕೊಟ್ಟು, ತ್ಯಾಗ ಬುದ್ಧಿಯಿಂದ ತನ್ನ ಶ್ರೀಮಂತಿಕೆಯನ್ನು ಸಾರ್ಥಕಪಡಿಸಿಕೊಂಡ (ಚನ್ನಬಸವೇಶ್ವರ ಸಿ.ವ. ಚೇಳಗುರಿಕೆ ಎರ್ರಿಸ್ವಾಮಿಗಳ ಲೀಲಾವಿಲಾಸ ಪು. ೩೮). ಆಗಲೇ ಸುಮಾರು ಒಂದು, ಒಂದೂವರೆ ಎಕರೆಯಷ್ಟು ಭೂಮಿಯನ್ನು ಆಕ್ರಮಿಸಿಕೊಂಡು ಆ ಮಠವನ್ನು ಕಟ್ಟಿಸಿ, ಅರವತ್ತಡಿ ಉದ್ದ, ನಾಲ್ವತ್ತಡಿ ಅಗಲ, ಹದಿನಾರಡಿ ಎತ್ತರದ ಒಂದು ಭವ್ಯವಾದ ಶಿಲಾಮಠವನ್ನು ಕಟ್ಟಿಸಿದ ತಿಕ್ಕಯ್ಯ, ಇಂದು ಬೆಳೆಯುತ್ತಿರುವ ವಿಶಾಲವಾದ ಮಠದ ಮೂಲ ಸ್ಫೂರ್ತಿಯಾದವರು.

ಮಠವನ್ನು ಕಟ್ಟುವಾಗ ಅನುಭವಿಸಿದ ಕಷ್ಟಕ್ಕಿಂತ ಎರ್ರಿತಾತನನ್ನು ಹೊಸಮಠಕ್ಕೆ ಕರೆತರುವಲ್ಲಿ ಪಟ್ಟ ಫಜೀತಿ ಅಷ್ಟಿಷ್ಟಲ್ಲ. ಅದಕ್ಕೆ ಒಂದು ರಾದ್ಧಾಂತವೆ ನಡೆದು ಹೋಯಿತು. ಊರಲ್ಲಿ ಎರಡು ಪಂಗಡಗಳಾದವು. ಜಾಯನೂರು ಹನುಮಂತಪ್ಪ, ಮೋಕ ಕರಿಬಸಪ್ಪ, ಯಾಳ್ಪಿ ಭೀಮನಗೌಡನ ಪಂಗಡದ ಜನ ತಾಪಾತನನ್ನು ಮಠಕ್ಕೆ ಕರೆದು ತರಬೇಕೆಂದೂ, ಊರ ಹೊರಗಿನ ಮಠಕ್ಕೆ ತಾತನು ಹೋದರೆ ಆತನಿಗೆ ಊಟೋಪಚಾರಗಳನ್ನು ಮಾಡಿಸುವವರ್ಯಾರು? ಮಕ್ಕಳಿಗೂ, ಹೆಣ್ಣುಮಕ್ಕಳಿಗೂ, ಮುದುಕರಿಗೂ ಹೋಗಿ ನಮಸ್ಕಾರ ಮಾಡಲೂ ಎಡೆ ತೆಗೆದುಕೊಂಡು ಹೋಗಲು ಮಠ ದೂರವಾದ್ದರಿಂದ ತಾತನನ್ನು ಪಾರ್ಟಿಯ ಜನ ಅಡ್ಡಿಪಡಿಸಿದರು. ಮಠಗಳಲ್ಲಿನ ಭಿನ್ನತೆ ಇತ್ತೀಚಿನದಲ್ಲ ಅದರ ಕರಿಛಾಯೆ ಬಹುಕಾಲಗಳಷ್ಟು ಹಳೆಯದು. ಅದು ಬಳ್ಳಾರಿ ಪೋಲೀಸ್ ಠಾಣೆಗೂ, ಮ್ಯಾಜಿಸ್ಟ್ರೇಟ್ ಕಛೇರಿಗೂ ವರದಿ ಮಾಡಿದರಂತೆ ತಾತನನ್ನು ಊರು ಬಿಡಿಸಬಾರದು' ಬಿಡಿಸಿದರೆ ಊರಲ್ಲಿ ಭಿನ್ನಮತೀಯ ಪಂಗಡಗಳಾಗುವುದರಿಂದ ಬಡಿದಾಟ ನಡೆಯುವ ಪರಿಸ್ಥಿತಿ ಆಗ ನಿರ್ಮಾಣವಾಗಿತ್ತು.

ಅಷ್ಟೆಲ್ಲಾ ಕಷ್ಟಪಟ್ಟು ಕಟ್ಟಿದ ಮಠದಲ್ಲಿ ಆತನಿಲ್ಲದೆ ಖಾಲಿಯಿದ್ದರೆ ಪ್ರಯೋಜನವೇನು? ಅಯ್ಯನಗೌಡ, ಸಿದ್ಧಲಿಂಗನಗೌಡರ ವಾದದಲ್ಲಿಯಾಗಲೀ ಅವರ ಪಂಗಡದವರ ಆಮೋದಿಸಿಯಲ್ಲಾಗಲಿ ಅರ್ಥವಿಲ್ಲ ಎಂಬ ತಿಕ್ಕಯ್ಯನವರ ಪಾರ್ಟಿಯವರು ಆತನ ಬಳಿಗೆ ಹೋಗಿ "ಇದೇನಪ್ಪಾ ಹೀಗಾಯಿತು"? ಎಂದು ಕೇಳಲು ತಾತನು ರಿಜರ್ವ್‌ಬರಲೇಳಯ್ಯ!" ಎಂದರಂತೆ. (ಅದೇ ಪುಟ ೩೯) ಕೆಲವೇ ದಿನಗಳಲ್ಲಿ ಎರಡು ಪಾರ್ಟಿಗಳ ಜನಕ್ಕೆ ಮ್ಯಾಜಿಸ್ಟ್ರೇಟನಿಂದ ಸಮನ್ಸ್ ಬಂದು ಹಾಜರಾಗಲು, ಮಠದ ಪಾರ್ಟಿಯವರು

ನಾವು ತಾತನನ್ನು ಒತ್ತಾಯ ಮಾಡುವುದಿಲ್ಲ. ಆತನೇ ಬಂದರೆ ಕರೆದೊಯ್ಯುತ್ತೇವೆ ಎಂದು ಹೇಳಿದಾಗ ಅದಕ್ಕೆ ಮ್ಯಾಜಿಸ್ಟ್ರೇಟರು ಎರಡು ಪಾರ್ಟಿಯರನ್ನು ದೂರನಿಲ್ಲಿಸಿ ತಾತನನ್ನು ಏನು ಸ್ವಾಮಿ ಇಲ್ಲೇ ಇರುವಿರಾ? ಮಠಕ್ಕೆ ಬರುವಿರಾ? ಎಂದು ಭಕ್ತಿಯಿಂದ ಕೇಳಲಾಗಿ "ಹೋಗೋಣ ನಡಿಯಯ್ಯಾ" ಎಂದು ತಾನೇ ಎದ್ದು ನಡೆದರು. ಆಗ ಮಠದ ಪಾರ್ಟಿಯವರು ವಾದ್ಯಗಳಿಂದ ವೈಭವದೊಡನೆ ಸರ್ಕಲ್ ಸಿಬ್ಬಂದಿಯೊಡನೆ ತಾತನವರನ್ನು ತಿಕ್ಕಯ್ಯನ ನೇತೃತ್ವದಲ್ಲಿ ಮಠಕ್ಕೆ ಕರೆತಂದರು. ಆಗ ತಿಕ್ಕಯ್ಯನಿಗಾದ ಸಂತೋಷವನ್ನು ಈ ಹಾಡಿನಲ್ಲಿ ವ್ಯಕ್ತಪಡಿಸಿದ್ದು ಹೀಗೆ.

ಗುರು ಬಂದ ಗುರು ಬಂದ ಗುರು ಬಂದ ಮನೆಗೆ
ಗುರು ಎರ್ರಿತಾತನು ತಾ ಬಂದ ಮನೆಗೆ

ಎಂದು ಬಾರದ ಗುರುವು ಇಂದಿಗೆ ಬಂದ
ಆನಂದ ಪದವಿಯು ನಿಮಗಾಗಲೆಂದ

ಕುರುಡರಿಗೆ ಕುಂಟರಿಗೆ ಕಣ್ಣು ಕಾಲ್ಗಳ ತಂದ
ಬರಡು ಗೋವಿನಹಾಲು ಕರೆಯುತ್ತ ಬಂದ

ರನ್ನದ ಹಾವುಗೆ ಚಿನ್ನದ ಜೋಳಿಗೆ
ಪನ್ನಂಗಧದ ಶಿವನು ತಾ ಬಂದ ಮನೆಗೆ

ಗುರುವು ಸಾಕ್ಷಾತ್ತಾಗಿ ತಾನೆ ಭಿಕ್ಷಕೆ ಬಂದ
ಮೋಕ್ಷವನು ಕೊಡುವಂಥ ತಾತ ತಾ ಬಂದ

ನಿರ್ವಾಣ ನಿಜಯೋಗಿ ಸರ್ವಸ್ವತ್ಯಾಗಿ
ಕೈಲಾಸದಿಂದಿಳಿದ ಪರಮಶಿವಯೋಗಿ

ಬಂದಾನೆ ಗುರುತಾತ ನಮ್ಮನೆಗೆ
ಎಂದಿನ ಸುಕೃತವೊ ಇಂದಿಗೆ ಒದಗಿತು

ಬಂದನೆ ಅಮೃತವ ತಂದನೆ ಸೇವಿಸು
ಎಂದನೆ ಪರಮಾನದಿಂದ "ಭವಹರ"
ಅಂದರೆ ಅನಲಿ ನಿಂದೆಯು ಬರಲಿ
ಚಂದಾಗಿ ಗುರುಪದ ಹೊಂದಿದೆ ಮನದೊಳು

ತಂದೆ ತಾಯಿ ಗುರು ಬಂಧು ಬಳಗ ಗುರು
ಬಂದ ಸಂಕಟ ಸಂದೇಹ ಬಿಡಿಸುವ

ಮಂದ ಮತಿಗಳಿಗೆಂದಿಗೆ ದೊರೆಯನು

ಇಂದುಧರ ಕೃಪಾಸಿಂಧುವೆ ಪುರಹರ

ಸುಂದರ ಚೇಳ್ಗುರ್ಕಿ ಮಂದಿರ ಮಾಡಿದ

ನಂಬಿದ ಭಕ್ತರ ಹೊಂದಿದ ಎರ್ರಿತಾತ

(ಜೋಳದರಾಶಿ ದೊಡ್ಡನಗೌಡರು ಎರ್ರಿಸ್ವಾಮಿಗಳ ಶಿವಮಯ ಜೀವನ ಚರಿತ್ರೆ ಭಕ್ತಿಗೀತೆಯ ಭಾಗದಿಂದ ಆರಿಸಲಾಗಿದೆ.)

ಅತ್ಯಂತ ಕಷ್ಟನಿಷ್ಟುರಗಳನ್ನು ಸಹಿಸಿಕೊಂಡು, ಜಗ್ಗಾಟ ಹಿಗ್ಗಾಟಗಳಿಗೆ ಜಗ್ಗದೆ ಎಲ್ಲಾ ಭಕ್ತರಲ್ಲಿ ಭಕ್ತಿಯ ವಿಕಾಸಕ್ಕೊಂದು ಮಾರ್ಗವನ್ನು ನಿರ್ಮಿಸಿದನು. ಎರ್ರಿತಾತನಿಗೆ ವ್ಯವಸ್ಥಿತವಾದ ಮಠವನ್ನು ಕಟ್ಟಿಸಿ, ಎಲ್ಲರ ಅನುಗ್ರಹಕ್ಕೆ ತಾತನವರನ್ನು ಮಠದಲ್ಲಿ ತಂದಿರಿಸಿದ ತಿಕ್ಕಯ್ಯನವರು ಇಲ್ಲಿ ಬಹುದಿನವಿದ್ದು ಸೇವಿಸುವ ಭಾಗ್ಯ ಅವರಿಗಿರಲಿಲ್ಲ. ತಿಕ್ಕಯ್ಯನ ಕೆಲಸವನ್ನು, ಕೀರ್ತಿಯನ್ನು ಕಂಡು ಕರುಬುವ ಜನ ಹೆಚ್ಚಾಯಿತು. ಅಂಥವರದೇ ಒಂದು ತಂಡವಾಯಿತು. ಅವರೆಲ್ಲರೂ ಸೇರಿ ತಿಕ್ಕಯ್ಯನ ಧವಳ ಕೀರ್ತಿಗೆ, ಅವರ ಸೌಜನ್ಯತೆಗೆ ಭಂಗತರುವಂತಹ ಸುದ್ದಿಗಳನ್ನು ಸೃಷ್ಟಿಸಿ ಅವುಗಳ ಪ್ರಚಾರವನ್ನೂ, ಪ್ರಸಾರವನ್ನೂ ಮಾಡತೊಡಗಿದರು. ಮೇಲೆ ಏಳುವವರನ್ನು ಕಾಲಿಡಿದು ಜಗ್ಗುವುದು ಸಮಾಜದಲ್ಲಿ ಕುಹಕಿಗಳ ನಿಯಾಮ. ಅಂಥಹ ದುರಾಲೋಪ ತಾತನ ಕಿವಿವರೆಗೂ ಮುಟ್ಟಿತು. ತಿಕ್ಕಯ್ಯನವರನ್ನು ಕೊಲೆಗೈಯುವ ಕುಹಕ ಯತ್ನಗಳನ್ನು ಮಾಡಲಾಯಿತು. ಇದಾವುದಕ್ಕೆ ಹೆದರದೆ ತಿಕ್ಕಯ್ಯ ಸಮಾಧಾನಿಯಾಗಿದ್ದನು.

ತಿಕ್ಕಯ್ಯನ ಪ್ರಾಣಾಪಾಯ ಸ್ಥಿತಿಯನ್ನು ಅರಿತೇ ತಾತ "ನೀನು ಹೊರಟು ಹೋಗಯ್ಯಾ!" ಎಂದು ಅಪ್ಪಣೆ ಮಾಡಿದರಂತೆ. ತಿಕ್ಕಯ್ಯನು ಮರುಮಾತಾಡದೆ ಹೊರಟು ಹೋದ. ತಾತನನ್ನು ಏನು? ಏಕೆ? ಎಂದು ಪ್ರಶ್ನಿಸಲಿಲ್ಲ. ತನ್ನ ಶೀಲದ ಬಗ್ಗೆ ತಾನೇ ವಕಾಲತ್ ವಹಿಸಿ ವಾದಿಸಲಿಲ್ಲ. ತನ್ನನ್ನು ಏನೊಂದು ವಿಚಾರಿಸದೆ ಕುಹಕಿಗಳ ಮಾತಿಗೆ ಕಿವಿಗೊಟ್ಟನಲ್ಲ ತಾತ! ಎಂದು ಆಶ್ಚರ್ಯವೂ ಇಲ್ಲ; ಆ ವೇದನೆಯೂ ಇಲ್ಲ. ಆತನ ಮಾತನ್ನು ಅನುಮೋದಿಸುವುದೊಂದೇ ತನ್ನ ವಿಧಿ, ಉಳಿದದ್ದೆಲ್ಲ ನಿಷೇಧವೆಂದೂ ನಂಬಿದ್ದ ಶಿಷ್ಯ ಶಿಖಾಮಣಿ ತಿಕ್ಕಯ್ಯ.

ಎಲ್ಲಿಗೆ ಹೋಗಬೇಕು? ಏನು ಮಾಡಬೇಕು? ಎಂಬ ಆಲೋಚನೆಯೇ ಆತನಲ್ಲಿ ಹುಟ್ಟಿರಲಿಲ್ಲ. ಎಲ್ಲೆಲ್ಲಿಯೂ ತಾತನಿದ್ದಾನೆಂದು ನಂಬಿದ ಭಕ್ತನಿಗೆ ಅಲ್ಲೇನು ಇಲ್ಲೇನು? ಎಲ್ಲಿದ್ದರೂ ಒಂದೇ. ಎಲ್ಲಿದ್ದರೂ ಆತನ ಸೇವೆಯನ್ನು ನಡೆದುಕೊಳ್ಳುವುದೇ ಮಹೋತ್ತಮವಾದ ಕಾರ್ಯ ಎಂದು ನಂಬಿದ್ದ ತಿಕ್ಕಯ್ಯ. ಎಲ್ಲವನ್ನು ತ್ಯಾಗ ಮಾಡಬಹುದು, ತ್ಯಾಗವನ್ನೇ ತ್ಯಾಗಮಾಡಿದವನೇ ತಿಕ್ಕಯ್ಯನಂಥ ಮಹಾತ್ಯಾಗಿ. ಬಿಡುವುದು ಅಭ್ಯಾಸವಿದ್ದ ತಿಕ್ಕಯ್ಯನಿಗೆ ಮಠಬಿಡುವುದು ಕಷ್ಟವಾಗಲಿಲ್ಲ. ಬಿಡುವಾಗ ಕಾರ್ಪಣ್ಯವನ್ನು ತೋರಲಿಲ್ಲ. ತಾತ ಬಾ ಎಂದಾಗ ಬಂದು ಮಾಡೆಂದದ್ದನ್ನು ಮಾಡಿದ. ಹೋಗೆಂದಾಗ ಹೊರಟು ಹೋದ. ತಾತನು ಕರೆದದ್ದು ಯಾರಿಗೂ ಕೇಳಿಸಿಲ್ಲ. ಹೋಗೆಂದು ಕಳಿಸಿದ್ದು ಮಾತ್ರ ಎಲ್ಲರಿಗೂ ಕೇಳಿಸಿತು. ಶಿಷ್ಯನ ಶ್ರದ್ಧೆ

ಹೆಚ್ಚಿದಂತೆಲ್ಲ ಹಾತೊರೆತ ತೀವ್ರವಾದದಂತೆಲ್ಲ ಅವನ ಅವಿದ್ಯೆ ಕ್ಷೀಣವಾಗುತ್ತಾ, ಕೊನೆಗೆ ಇಬ್ಬರೂ, ಒಂದೆ ವಿದ್ಯಾಶಕ್ತಿಯ ಎರಡು ತುದಿಗೆಣಾಗುತ್ತಾರೆ. ಸಮರ್ಪಣ ಮತ್ತು ಪರಸ್ಪರ ಐಕ್ಯದ ಮೂಲಕ ಇಬ್ಬರೂ ಒಂದೇ ಯಾಗುತ್ತಾರೆ. ಗುರುವಿನ ಕೃಪೆ ಶಿಷ್ಯನ ಕಡಗೆ ಹರಿದು, ಶಿಷ್ಯನ ಭಕ್ತಿ ಅದರೊಳಗೆ ಐಕ್ಯವಾದಾಗ, ಅವರಿಬ್ಬರ ನಡುವೆ ಅದ್ವೈತ ಸಮನಿಸುತ್ತದೆ. ಗುರುವೆಂಬ ಜ್ಯೋತಿ ಶಿಷ್ಯನೆಂಬ ಹಣತೆಯನ್ನು ಮುಟ್ಟಿದಾಗ, ಆವೆರಡೂ ಅಭಿನ್ನಗಳಾಗುತ್ತವಷ್ಟೇ. ಆದರೆ ಇಲ್ಲಿ ಪ್ರಸ್ತುತದ ಸ್ಥಿತಿ ಹಾಗಿರಲಿಲ್ಲ. ಒಂದರೊಳಗೊಂದು ಬೆರೆಯುವ ಸಮಯದಲ್ಲಿ ಸಾಮರ್ಸ್ಯದ ಬಿಂದಿಗೆ ಹೊಡೆದು ಹೋಯಿತು. ಸಮುಖ್ಯವಾಗಲಿ, ಭ್ರಾತೃತ್ವವಾಗಲಿ ಇನ್ನೆಲ್ಲಿಯದು. ಕೆಲವೊಮ್ಮೆ ಅಂತರಂಗದಲ್ಲಿ ಅವರಿಬ್ಬರ ನಡುವೆ ಅದ್ವಿತೀಯತೆಯ ತುಮಲ ಅಧಿಕವಾಗಬಹುದು.

ಆದಿಯನ್ನರಿಯದೆ ಅಂತ್ಯವನ್ನು ಮಾತ್ರ ಅರಿತವನು ಅಂತ್ಯಜ ಅಂಥಹ ಆದ್ಯಂತ್ಯಗಳ ತಾತ್ತ್ವಿಕ ದೃಷ್ಟಿಯುಳ್ಳವನು ಎಲ್ಲವನ್ನು ತೊರೆಯುವುದು ಸುಲಭ. ಆದರೆ, ಮರೆಯುವುದು ತುಂಬ ಕಷ್ಟ. ಮಠವನ್ನು ತೊರೆಯುವುದು ತಿಕ್ಕಯ್ಯನಿಗೆ ಸುಲಭವಾಯಿತು, ಯಾರಿಗಾಗಿ ಮಠ ಕಟ್ಟಿದನೋ ಆ ಗುರುವನ್ನು ಮರೆಯುವುದು ಆತನಿಗೆ ಕಷ್ಟವಾಗಿ ಕಂಡಿತು. ಅಂಥಹ ಹೃದಯ ಸಂವೇದನೆಯನ್ನು ಪ್ರಬುದ್ಧವಾದ ಹಾಡಿನಲ್ಲಿ ಈ ರೀತಿಯಾಗಿ ತೋಡಿಕೊಂಡಿದ್ದಾನೆ.

ಹೇಗೆ ಮರೆಯಲೋ ತಾತನ
ಹೇಗೆ ಮರೆಯಲೋ ಸದ್ಗುರುವಿನ
ಭೋಗ ವಿಷಯಗಳನು ಈಜಿಸಿ
ತ್ಯಾಗವರುಹಿದ ಶ್ರೀಗುರುವೇ ನಿಮ್ಮ
ಜ್ಞಾನವೆಂಬೋ ಪರಮಾಮೃತದ
ಪಾನವನ್ನು ಕುಡಿಸಿ ಶರೀರದ
ಮಾನ ಅಭಿಮಾನವನು ಬಿಡಿಸಿ
ಆನಂದದ ಮೈಮರೆಸಿದ ತಾತನ
ರಾಗದ್ವೇಷಾದಿ ಗುಣಗಳನೆಲ್ಲ
ನೀಗಿ ನಿರ್ಬೈಲಾದ ಶಿವನು
ಯೋಗವನ್ನು ತಿಳುಹಿ ಭವ
ರೋಗವನು ಕಳೆದ ಸದ್ಗುರುವಿನ
ಮಾರು ತಾಮಸ ಮಾತುಗಳನು
ಮೀರಿದಂಥ ಪರಮಾತ್ಮನೊಳು
ಸೇರಿ ಮತ್ತೆ ನರಜನ್ಮಕ್ಕೆ
ಬಾರದಂತೆ ಮಾಡಿದ ತಾತನ

ದಾಂತಿಯನು ಹಿಡಿಸಿ ಮಾಯಾ
ಭ್ರಾಂತಿಯನು ಸುಡಿಸಿ ಮುಕ್ತಿ
ಕಾಂತೆಯನಗೆ ಮದುವೆಯ ಮಾಡಿ
ಶಾಂತಿ ಸುಖದೊಳಿರಿಸಿದ ತಾತನ
ಧಾರಣಿಯೊಳ್ ಚೇಳ್ಳಗುರಿಕೆ
ಉದ್ಧಾರ ಮಾಡಿದ ಶ್ರೀಎರ್ರಿತಾತ
ಕೋರಿದವರಿಗೆ ಕೊರತೆಯಿಲ್ಲ
ಧೀರ ತಿಕ್ಕಯ್ಯ ಮಗನೇ ಬಲ್ಲ

(ಜೋಳದರಾಶಿ ದೊಡ್ಡನಗೌಡರು ಎರ್ರಿಸ್ವಾಮಿಗಳ ಶಿವಮಯ ಜೀವನ ಚರಿತ್ರೆ ಭಕ್ತಿಗೀತೆಯ ಭಾಗದಿಂದ ಆರಿಸಲಾಗಿದೆ.)

ಎಂದು ಹಾಡುತ್ತಾ ದಿಕ್ಕು ದೆಸೆಗಳಿಲ್ಲದ ಕಡೆಗೆ ಚಿಂತಾಕ್ರಾಂತನಾಗಿ ತಾತನಿಗೆ ನಮಸ್ಕರಿಸಿ ಹೊರಟು ಹೋದ ತಿಕ್ಕಯ್ಯ. ಹೋಗೆಂದ ಕೂಡಲೇ ತಿಕ್ಕಯ್ಯನು ಹೊರಟು ಚೇಳಗುರಿಕೆ ಸಮೀಪ ಗ್ರಾಮವಾದ ಜೋಳದ ರಾಶಿಗೆ ಬಂದು ಕೋಮಟ ಜೂಟೂರು ಭೀಮಯ್ಯನ ಅಂಗಡಿಯ ಮನೆಯ ಒಳಗೆ ಕೂತಿದ್ದನೆಂದು, ಕೊಕ್ಕರ ಚೇಡವರು ಬಂದರು ಎಂದು ಯಾರೋ ಹುಡುಗಾಟಕ್ಕೆ ಬೆದರಿಸಲು, ಕಾರ ಕುಟ್ಟುವ ಗಡಾರಿಯನ್ನು ಎತ್ತಿ ಭೀಮಯ್ಯನು ಹೊಡೆದು ಹೊರಟುಹೋದನೆಂದು ಜೋಳದ ರಾಶಿಯ ಹಿರಿಯರು ಈಗಲೂ ಹೇಳುತ್ತಾರೆ. (ದೊಡ್ಡವರಾದರು ಜೋಳದರಾಶಿ ಶ್ರೀ ಎರ್ರಿಸ್ವಾಮಿಗಳ ಶಿವಮಯ ಜೀವನ ಚರಿತ್ರೆ ಪು. ೧೩) ಕೊಕ್ಕರಚೇಡಿನ ಕಥೆಯೇನೋ? ಆ ಮಾತು ಕೇಳಿ ತಿಕ್ಕಯ್ಯನು ಗಾಬರಿಯಾಗುವ ಕಾರಣವೇನೋ? ಎಂಬುದು ಅಸ್ಪಷ್ಟವಾದರೂ ಕೆಲವರು ಈ ರೀತಿ ಪರಿಭಾವಿಸಿರುವುದು ಕ್ಷೇತ್ರಕಾರ್ಯಕ್ಕೆ ಹೋದಾಗ ತಿಳಿದು ಬಂದಿದೆ. ಕೊಕ್ಕರಚೇಡಿನ ಈಶ್ವರಪ್ಪನು ಎರ್ರಿತಾತನ ಭಕ್ತನಾಗಿದ್ದ. ಆತನಿಗೆ ಸಂತಾನವಿಲ್ಲದ್ದರಿಂದ ಆಸ್ತಿಯು ತಾತನ ಮಠಕ್ಕೇನೆ ಸಲ್ಲಿಸುವನೆಂಬ ಅನುಮಾನಗೊಂಡ, ಅವರ ದಾಯಾದಿಗಳಲೊಬ್ಬರು ತಾತನ ಮೆಚ್ಚಿನ ಶಿಷ್ಯನಾದ ತಿಕ್ಕಯ್ಯನೇ ಅದಕ್ಕೆಲ್ಲ ಕಾರಣನೆಂದು ಆತನನ್ನು ಕೊಲ್ಲಿಸುವ ಯತ್ನದಲ್ಲಿ ವಿಫಲರಾಗಿ, ದುಷ್ಟ ಸಂಗಡಿಗರೊಡನೆ ಒಂದು ರಾತ್ರಿ ತಾತನ ಮಠಕ್ಕೆ ಬಂದು ಗದ್ದಲವೆಬ್ಬಿಸಿದ ಈತನೆಯೇ ತಾತನು ತಿಕ್ಕಯ್ಯನನ್ನು ಹೋಗೆಂದು ಹೇಳಲು ಕಾರಣವೆಂಬುದಾಗಿ ತಿಳಿದು ಬಂದಿದೆ. ತಾತನ ವಿಷಯ ಎಷ್ಟು ಅವಿಧಿತವೊ, ಅನಿರ್ದಿಷ್ಟವೋ ಅಷ್ಟು ಅವಿಧಿತ, ಅನಿರ್ದಿಷ್ಟ ತಿಕ್ಕಯ್ಯನ ವಿಷಯ. ಇಬ್ಬರದೂ ಅಷ್ಟು ಪೂಜನೀಯ ಭಾವ ಭಕ್ತರಲ್ಲಿ ಬೇರೂರಿತ್ತು.

ತಿಕ್ಕಯ್ಯನಿಗಿದ್ದ ಅಚಲ ಭಕ್ತಿ, ಶ್ರದ್ಧೆ ಹಾಗೂ ಕಾಯಕ ನಿಷ್ಠೆಗಳು ಆತನಿಗೆ ಎರ್ರಿತಾತನಿಗೂ ನಿಕಟತ್ವ ಪಡೆಯುವ ಸಹಕಾರಿಯಾದವು. ಕಷ್ಟ, ಕಾರ್ಪಣ್ಯಗಳು ತಲೆದೋರಿದಾಗ ಮಾತ್ರ ಮನುಷ್ಯ, ದೈವವನ್ನು ನೆನೆಯುವುದು ಸಾಮಾನ್ಯ. ಆದರೆ ತಿಕ್ಕಯ್ಯನ ವ್ಯಕ್ತಿತ್ವವೇ ಬೇರೆ ತನ್ನನ್ನು ದೂರ ಕಳುಹಿಸಿದನೆಂದು ತಾತನ

ಕುರಿತ ಅಪಪ್ರಚಾರವಾಗಲಿ, ಅವಹೇಳನಕಾರಿಯಾದ ಸಂಗತಿಗಳಾಗಲಿ ಸಾರದೇ ನನ್ನಲ್ಲಿರುವ ಭೇದಗಳನ್ನು ತೆಗದು ಕಾಪಾಡಯ್ಯ ಎಂದು 'ನೀನೇ ಕಾಪಾಡು' ಎನ್ನುವ ಗೀತೆಯಲ್ಲಿ ಆಧ್ಯಾತ್ಮಿಕ ನೆಲೆಯ ಭಾವನೆಗಳನ್ನು ಬಿತ್ತರಿಸಿದ್ದಾರೆ.

ನೀನೇ ಕಾಪಾಡೋ ಗುರುರಾಯ ನಿಮ್ಮ
ಧ್ಯಾನವು ಮರೆಸುವುದು ಅಜ್ಞಾನದ ಪ್ರಾಯ

ನೀನು ಕೂಡಿರುವಂಥ ಕಾಯ ಇದ
ನೀನಾಡಿಸಿದಂತೆ ನಾನಾಡುವುದು ನ್ಯಾಯ
ಭಾನುಶತಕೋಟಿ ಸಚ್ಛಾಯ ಬ್ರಹ್ಮ
ಸ್ಥಾನವು ಹೊಂದದು ಮಾನಸಮಾಯ

ನಾನಾ ಯೋನಿಗಳಲ್ಲಿ ಬಂದೆ ಮಡಿ
ಹೀನನಾಗಿ ನಾ ಬಹಳ ನೊಂದೆ

ಜ್ಞಾನವು ತಿಳಿಯದು ಮುಂದೆ ಎನ್ನ
ಮಾನಾಭಿತನವು ನಿನ್ನದು ತಂದೆ
ಊರಿಗೆ ಹೋಗುತಲಿದ್ದೆ ಅಲ್ಲಿ
ದಾರಿಯ ತಪ್ಪಿ ಘೋರಾರಣ್ಯದಿ ಬಿದ್ದೆ

ಯಾರು ದಿಕ್ಕಿಲ್ಲವೆಂದಿದ್ದೆ ಬಂದು
ದಾರಿಯ ತೋರಿದೆ ಕಾರುಣ್ಯ ನಿಧಿಯೇ

ವಾದ ಭೇದಗಳನು ಮರೆಸೋ ಭವ
ಬಾಧೆಗಳನು ಪರಿಹರಿಸೊ
ಸಾಧು ಸಂಗದೊಳೆನ್ನನಿರಿಸೋ ಶಿವ
ಪಾದ ಕಮಲದೊಳನ್ನ ಬೆರಸೋ

ಧಾತ್ರಿಯೊಳಗೆ ಚೇಳ್ಳಗುರಿಕಿ ಪುಣ್ಯ
ಕ್ಷೇತ್ರವು ಗಳಿಸಿದೆ ಎರ್ರಿತಾತನ ಹುಡಕಿ
ಸ್ತೋತ್ರ ಮಾಡುವುದೆಲ್ಲ ಹರಕೆ ಈ
ಗಾತ್ರವಿರುತನಕ ತೀರದೀ ಬಯಕೆ

(ಅದೇ ಮೇಲಿನ ಭಾಗದಿಂದ ಪಡೆಯಲಾಗಿದೆ.)

ಮೂಲತಃ ಆಶುಕವಿಯಾದ ತಿಕ್ಕಯ್ಯನು ಭಕ್ತಿಯ ಹಾಡುಗಳನ್ನು ಕಟ್ಟುತ್ತಾ ಹೋಗುತ್ತಾನೆ. ತನ್ನ ಅರಿವಿಲ್ಲದ ಜನ್ಮದೊಳಗೆ ನೀನಿದ್ದರೆ ಮಾತ್ರ ಅದಕ್ಕೆ ಹೊಳಪು ಬರುತ್ತದೆ ನೀನಿಲ್ಲದಿದ್ದರೆ ಅದು ಬರಡಾಗುತ್ತದೆ ಎಂದು ಹಲುಬುತ್ತಾನೆ. ಲೋಕ ಪರ್ಯಟನೆಯಲ್ಲಿ ಹಲವಾರು ಸಾಧು ಸಂತರನ್ನು, ವಿರಹಿಗಳನ್ನು, ಅಲೌಕಿಕ ವಾದಿಗಳನ್ನು ಕಂಡೆ ಆದರೆ, ಅವರಲ್ಲಿ ಲೌಕಿಕ ಕರಿಛಾಯೆ ಆವರಿಸಿರುವುದು ಕಂಡೆನಯ್ಯಾ. ನಿನ್ನಲ್ಲಿ ಮಮತೆ ಮಮಕಾರ ದೀನತೆಯೇ ಮೇಳೈಸಿರುವುದು ಎಂದು 'ಗುರುರಾಯ' ಎಂಬ ಗೀತೆಯಲ್ಲಿ ಮನೋಜ್ಞನಾಗಿ ತಿಳಿಸಿದ್ದಾನೆ.

ಗುರುರಾಯ ಸದ್ಗುರುರಾಯ ನಿಮ್ಮ
ಚರಣವ ನಂಬಿದೆ ಚಿರಕಾಯ

ಅರಿಯದೆ ಬಂದೆನು ಜನ್ಮಕ್ಕೆ-ನಾ
ಗುರಿಯಾದೆನು ಈ ಕರ್ಮಕ್ಕೆ
ಕರುಣಿಸದಿರುವೆ ವಿತರ್ಕೆ-ನಾ
ಶರಣೆಂದು ನಿಮ್ಮ ಮೊರಹೊಕ್ಕೆ

ಗುಂಭದ ಮೋಸಗಾರರನು-ಆ
ಡಂಭಕ ವೇಷದ ಚೋರರನು

ನಂಬದೆ ಬಂದಿಹೆ ನಿನ್ನೆಡೆಗೆ-ನಿನ್ನ
ಹಂಬಲಹಿಡಿಸಿ ಪೊರೆಯನ್ನ
ಎಲ್ಲ ಸಾಧುರೊಳಗಾಡಿದೆನು-ಆವ
ದೆಲ್ಲದ ಚರ್ಯಯ ನೋಡಿದೆನು

ಸಲ್ಲದವರ ಬಿಡನಾಡಿದೆನು ನಿಜ
ಬಲ್ಲಂಥ ಗುರುವಿನ ಕೂಡಿದೆನು

ಕಡೆ-ಗಾಲಕ್ಕೆ ನೀ ದೊರೆತೆ-ಎನ್ನ
ಕಡೆಹಾಯಿಸು ಕರುಣಾಶರಥಿ
ಹಿಡಿದೆನು ನಿಮ್ಮನು ದೃಢತರದಿ-ನಾ
ನುಡಿದೆನು ಗುರುನೀ ನಡಿಸಿದ ತೆರದಿ

ಕ್ಷಿತಿಯಾಳು ಚೇಳ್ಗುರ್ಕಿ ಪುರವಾಸ-ನಿಜ
ಯತಿಗಳು ಕೂಡುವ ಕೈಲಾಸ
ಪ್ರತಿ ಎರ್ರಿತಾತನ ಕೊಡುಲೇಸ-ನಿಜ

ಮತಿಯೊಳು ಮರೆಯದೆ ನಿಮ್ಮ ಧ್ಯಾನ

(ಹನುಮಪ್ಪನೆಂಬ ವಕ್ಕವು ಕ್ಷೇತ್ರಕಾರ್ಯದಲ್ಲಿ ಹಾಡಿದ ಹಾಡು)

ಇಹಲೋಕದ ಹುಚ್ಚ ಜನರ ಹೊಗಳಿಕೆ ತೆಗಳಿಕೆಗಳಿಗೆ ಮನನೊಂದುಕೋ ಬೇಡ ನೀ ಎಂದು ತನ್ನ ಗುರುವಿಗೆ ವಿಲಾಪಮಾಡಿಕೊಳ್ಳುತ್ತಾನೆ. ಯಾರೇನಂದರು ನಿನ್ನ ಜಾರನಂದರೋ, ಚೋರನೆಂದರೋ, ಪಾರಮಾರ್ಥಿದ ಸಾರ ತಿಳಿದಿಲ್ಲದವನೆಂದರೋ ಹೇಳು ಎಂದು ಕೇಳುತ್ತಾನೆ. ಮೌನವಾಗಿರಲು ಕಾರಣವೇನು ಎರ್ರಿತಾತ ಎಂದು ವಿವಿಧ ಪರಿಯಲ್ಲಿ ಬೇಡಿಕೊಂಡ ಸನ್ನಿವೇಶವನ್ನು 'ಯಾರೇನೆಂದರು' ಎಂಬ ಗೀತೆಯಲ್ಲಿ ಈ ರೀತಿ ಕಾಣಬಹುದು.

ಯಾರೇನಂದರು ನಿಮಗೆ ಸದ್ಗುರುನಾಥ
ಯಾರೇನೆಂದರು ನಿಮಗೆ ಬಾರದಿರಲೀ ಮನೆಗೆ
ಸಾರಿಸಾರಿಗೆ ನಿಮ್ಮ ದಾರಿ ನೋಡುತಲಿರುವೆ
ಜಾರನೆಂಬುವರೇನೋ ಚೋರನೆಂಬುವರೇನೋಟ
ಪಾರಮಾರ್ಥದ ಸುವಿಚಾರನೆಂಬುವರೇನೋ
ಆಡಿ ಆಡದಲಿರುವೆ ಮಾಡಿ ಮಾಡದಲಿರುವೆ
ಕೂಡಿ ಕೂಡದಲಿರುವೆ ನೋಡಿ ನೋಡದಲಿರುವೆ
ಬಾಲನಾಗುತೆ ಶ್ರೀಲೋಲನಾಗುತೆ ಗುಣ
ಶೀಲನಾಗುತೆ ಮುಕ್ತಿ ಕೀಲು ತೋರಿದ ಗುರುವೆ
ವಸುಧೆಯೋಳ್ಬೆಳ್ಗುರೆ ಪಸರಿಸಿ ಬೆಳಗಿದ
ಶಶಿಧರ ಎರ್ರಿತಾತ ಶಿಶುವಾನು ಕರುಣಿಸು

ಗುರುವೆಂದರೆ ಸಕಲ ಭೋಗ ವಿಷಯಗಳನ್ನು ಒತ್ತಾಯ ಪೂರ್ವಕವಾಗಿ ಅಲ್ಲದಿದ್ದರೂ ವಿನಮ್ರವಾಗಿ ಬೇರ್ಪಡಿಸುವ ಪ್ರಯತ್ನಮಾಡುವುದು ಸಹಜ. ಅದು ಮಾತೃತ್ವ, ಪಿತೃತ್ವಗಳ ಸ್ಥಾನವನ್ನು ಗುರು ಆವರಿಸಿಬಿಡುತ್ತಾನೆ. ಹಾಗೆಂದು ಎಲ್ಲ ಗುರುವರ್ಯರೆ ಶಿಷ್ಯನೆಂದು ಹೇಳವುದು ಸಮಂಜಸವಲ್ಲ. ಏಕೆಂದರೆ ಯಾವುದೇ ಬಿಲ್ವಿದ್ಯೆಯನ್ನು ಕಲಿಸದೆ ಕೇವಲ ತನ್ನ ಮೂರ್ತಿಯಿಟ್ಟು ಅಭ್ಯಾಸಿಸಿದ ಏಕಲವ್ಯನ ಹೆಬ್ಬೆರಳನ್ನಲ್ಲ, ಜೀವವನ್ನು ತೆಗೆದ ಪ್ರಸಂಗ ಮಹಾಭಾರತದಲ್ಲಿ ಕಾಣುತ್ತೇವೆ. ಗುರು ದಕ್ಷಿಣೆಯ ನೆಪ ಬದುಕನ್ನೆ ತಿಂದು ಬಿಡುವ ರೀತಿಯು ಆಗಿರುತ್ತದೆ. ಇಲ್ಲಿ ಎರ್ರಿತಾತ ಮತ್ತು ತಿಕ್ಕಯ್ಯನವರೆಂದು ವಿಭಿನ್ನ ರೀತಿಯ ಸಂಬಂಧವೆಂದು "ಬಂದನೆ ಗುರುತಾತ" ಎನ್ನುವ ಗೀತೆಯಲ್ಲಿ ಹಿಡಿದಿಡಲಾಗಿದೆ.

ಬಂದನೆ ಗುರುತಾತ ನಮ್ಮನೆಗೆ
ಎಂದಿನ ಸುಕೃತವೂ ಇಂದಿಗೆ ಒದಗಿತು

ಬಂದನೆ ಅಮೃತವ ತಂದನೆ ಸೇವಿಸು
ಎಂದನೆ ಪರಮಾನಂದದಿ ಭವಹದ

ಅಂದರೆ ಅನಲಿ ನಿಂದೆಯು ಬರಲಿ
ಚಂದಾಗಿ ಗುರುಪಾದ ಹೊಂದಿದೆ ಮನದೊಳು

ತಂದೆ ತಾಯಿ ಗುರು ಬಂಧುಬಳಗ ಗುರು
ಬಂದ ಸಂಕಟ ಸಂದೇಹ ಬಿಡಿಸುವ

ಮಂದಮತಿಗಳಿಗೆಂದಿಗೆ ದೊರೆಯನು
ಇಂಧುದರ ಕೃಪಾಸಿಂಧುವೆ ಪುರಹರ

ಸುಂದರ ಚೇಳ್ಗುರ್ಕಿ ಮಂದಿರ ಮಾಡಿದ
ನಂಬಿದ ಭಕ್ತರ ಹೊಂದಿದ ಎರ್ರಿತಾತ.

ಸಕಲವನ್ನು ಸಂಗ್ರಹಿಸಿ ತಿಳಿದಿರುವವನು ದೇವರು ಎಂದು ಹೇಳುವುದುಂಟು. ಆತನನ್ನು ಸರ್ವವ್ಯಾಪಿ, ಸರ್ವಾಂತರ್ಯಾಮಿ, ಸರ್ವೇಶ, ಸಕಲ ಸೃಷ್ಟಿಕರ್ತ ಎಂದೆಲ್ಲ ಹೆಸರಿನಿಂದ ಕರೆಯುವುದುಂಟು. ಆತನನ್ನು ಪರಿಚಯಿಸಿದ ಗುರುವು ಸಹ ಅದೇ ಸ್ಥಾನದಲ್ಲಿ ನಿಲ್ಲುತ್ತಾನೆ. ತಿಕ್ಕಯ್ಯನು ಎರ್ರಿತಾತನ ಮಠವನ್ನು ಮಾತ್ರ ಬಿಟ್ಟು ಹೋಗಿದ್ದೇನೆ ಆದರೆ ಗುರುವನ್ನಲ್ಲ ಎಂಬ ಭಾವನೆಯಿಂದ ಆತನನ್ನು ಸರ್ವಸ್ಥಳಗಳಲ್ಲಿ ಕಾಣುವ ಪ್ರಯತ್ನವನ್ನು 'ಸರ್ವಾಂತರ್ಯಾಮಿ' ಎನ್ನುವ ಗೀತೆಯ ಮೂಲಕ ತಿಕ್ಕಯ್ಯನು ಕಟ್ಟಿಕೊಟ್ಟಿದ್ದಾನೆ.

ಎಲ್ಲರೊಳಗಿರ್ದಿಲ್ಲದೇ ಜಗ
ವೆಲ್ಲ ಶೋಧಿಸಿ ಕಾಣ್ಬನೆ

ಎಲ್ಲಿ ನೋಡಲು ಅಲ್ಲಿ ಚಿಕ್ಕಳೆ
ಯಲ್ಲಿ ತಾ ಮುಳುಗಾಡ್ವನ
ಕಲ್ಲುಮುಳ್ಳೊಳು ಕಾಡುಗ ಕಾಷ್ಠ
ಳೆಲ್ಲ ಬೆಳಕನೆ ಮಾಡ್ವನೆ!

ಅಲ್ಲ ಆಹುದದು ಇಲ್ಲ ಉಂಟದು
ಒಲ್ಲೆ ಬೇಕೆಂದು ಕಾಡ್ವನೆ?
ಬಲ್ಲ ಜ್ಞಾನಿಯ ಸೊಲ್ಲು ಬೇರಿದೆ
ಖುಲ್ಲ ಜನರಂತೆ ಕಾಣ್ಬನೆ?

ಮಾರುಪಾ ಮನ ಮಾತುಗಳನು
ಮೀರಿದಾ ಘನಧೀರನೆ

ಮೇರು ಶಿಖರವನೇರಿ ಉನ್ಮನಿ
ಸೇರಿದಾ ಸುಖಸಾರನೆ

ಸೂರ್ಯನಂತ ಸರ್ವಸಾಕ್ಷಿಲಿ
ಕಾರ್ಯನಂತ ಭೂತನೆ
ವೀರ್ಯ ಜೀತಂಗೆ ತೂರ್ಯ ತೋರಿದ
ಆರ್ಯಗುರು ಎರ್ರಿತಾತನೆ

ದೇಶಕಧಿಕ ಚೇಳ್ಳಗುರಿಕೆ
ವಾಸ ಮಾಡಿದ ಈಶನ
ದಾಸ ತಿಕ್ಕಯ್ಯ ಕೂಸಿನೊಳ ನಿಧಿ
ಧ್ಯಾಸ ಸುಪ್ರಕಾಶನೆ

ಅಲೌಕಿಕತೆ ಆಧ್ಯಾತ್ಮಿಕತೆಯ ತೀವ್ರ ತೊಳಲಾಟ ಮತ್ತು ತಾಕಲಾಟಗಳನ್ನು ಅಂತರಂಗದ ನಿಲುವುಗಳಿಗೆ ಚಿಂತಿಸುವ ಕ್ರಮ ವಿಭಿನ್ನವಾಗಿದೆ. ಒಟ್ಟು ಮೂರ್ತತ್ವದಿಂದ ಅಮೂರ್ತತ್ವಯೆಡೆಗೆ ಸಾಗಿದ ವಿಧಾನವನ್ನು ಗುರುತಿಸಲಾಗಿದೆ. ಪ್ರತಿ ಭಾವನೆಯ ತುಮುಲಗಳು ಬೆಂಬಿಡದ ಮನಸ್ಸಿನ ಆವೇದನೆಗಳಾಗಿ ಹೊರಹೊಮ್ಮುವ ತಿಕ್ಕಯ್ಯನವರ 'ನಾವು ನರರಲ್ಲ' ಎಂಬ ಗೀತೆಯಲ್ಲಿ ಈ ರೀತಿಯಾಗಿ ಅವಲೋಕಿಸಲಾಗಿದೆ.

ನರನಲ್ಲೋ ನಾವು ನರರಲ್ಲ-ಶಿವ
ಶರಣರೆಲ್ಲರು ನೀವು ಕರುಣಿಸಿ ಕೇಳಿರಿ

ಅರಿವಿಗೆ ಅರಿವಾಗಿ ಮರವೆಗೆ ದೂರಾಗಿ
ಅರಿವು ಮರವೆಗೆ ಪರವಸ್ತು ತಾನಾಗಿ

ಅಂಗದಲಿ ಲಿಂಗಾಗಿ ಲಿಂಗದಲಿ ಅಂಗಾಗಿ
ಅಂಗಲಿಂಗ ಸಂಗಸಮರಸದೊಳು ನಿಂದ

ಬಯಲಿಗೆ ಬಯಲಾಗಿ ಬಯಲು ಪ್ರಹ್ಮನತೋರಿ
ಕೈಲಾಸ ವೈಕುಂಠ ಪರಸ್ಥಲ ಮಾಡಿದ

ಕಣ್ಣಿದ್ದು ಕುರುಡರು ಕಿವಿಯಿದ್ದು ಕಿವುಡರು
ಕಾಲಿದ್ದು ಕುಂಟರು ಕಾಲಸಂಹರರು

ಧರೆಯೊಳು ಚೇಳ್ಗುರ್ಕಿ ಗುರು ಎರ್ರಿತಾತನ
ಚರಣವ ನಂಬಿದ ಶರಣನಂತೆತಿಗಳು

ತಿಕ್ಕಯ್ಯನವರು ಗುರುವನ್ನು ಕಂಡ ಬಗೆಯನ್ನು ಗಮನಿಸಿದರೆ ವಚನಗಾರ್ತಿ ಅಕ್ಕಮಹಾದೇವಿಯು ಪರಮಾತ್ಮನನ್ನು ತನ್ನ ಪತಿಯಾಗಿ ಹರಸಿದ ಹಲವು ಮಜಲುಗಳ ಸಾಮ್ಯತೆಯನ್ನು ಹೊಂದಿರುವುದು ತಿಳಿಯಬಹುದು. ಇಲ್ಲಿ ಗುರು ಮತ್ತು ಶಿಷ್ಯರ ಸಂಬಂಧವನ್ನು ಆಳಿನಷ್ಟು ತಗ್ಗಿಸಿಕೊಂಡ ವಿಧೇಯತೆಯ ಸೂಚಕವಾಗಿದೆ. ಮಾನ ಅಭಿಮಾನಗಳ ವಿಕೇಂದ್ರಿಕಣತ್ವ ಪ್ರಾಮುಖ್ಯತೆ ಪಡೆದು ನಂತರ ತನ್ನ ಕಾಯಕವನ್ನು ಕಾಣಿಸುವಿಕೆಯ ಪ್ರತೀಕವಾಗಿ 'ಏನಾಕಿ ಮಾದಯ್ಯ' ಎಂಬುದಲ್ಲಿ ಮನೋಜ್ಞವಾಗಿ ಬೆರಿಸಿದ್ದಾರೆ.

ಏನಾರ ಮಾದಯ್ಯ ನೀನು-ಮಹಾ
ದಾನಿ ಶ್ರೀ ಎರ್ರಿಸ್ವಾಮಿ ನಿನ್ನಾಳು ನಾನು
ಆಳಿನ ಅಭಿಮಾನ ಅರಸನಿಗೆ-ಭಿಕ್ಷದ
ಜೋಳಿಗೆ ಅಭಿಮಾನ ಕೊಟ್ಟ ಗುರುವಿಗೆ
ವೀಳ್ಯಾದ ಅಭಿಮಾನ ಎತ್ತಿದವಂಗೆ ಬಿರುದು ನಾ
ಎನ್ನಷ್ಟು ಹೇಳಲಿ ಅಭಿಮಾನ ತೊರೆದು
ಎನ್ನಗೆ ನೀಕೊಟ್ಟ ವರವಿಹುದು-ನೀ
ಬೆನ್ನತ್ತಿ ಇರುದಿದೆ ನಾ ಭನ್ನನಹುದು

(ಮೇಲಿನ ಭಕ್ತಿಗೀತೆಗಳು ತಿಕ್ಕಯ್ಯನಿಂದ ರಚಿತವಾಗಿವೆ. ಅವುಗಳನ್ನು ದೊಡ್ಡನಗೌಡರ ಎರ್ರಿತಾತನ ಶಿವಮಯ ಜೀವನ ಚರಿತ್ರೆ ಎಂಬ ಕೃತಿಯಿಂದ ಪಡೆಯಲಾಗಿದೆ.)

ತಿಕ್ಕಿಯ್ಯನಿಗೆ ತಾತನ ಕುರಿತು ಇದ್ದ ಭಯ, ಭಕ್ತಿ, ಗೌರವ, ದೀನತೆಯ ಭಾವಗಳೆಲ್ಲ ಭಕ್ತಿಯ ಗೀತೆಗಳಾಗಿವೆ. ಹೊರಹೊಮ್ಮುವ, ಯಾವುದೋ ಕಾರಣದಿಂದ ಮಠಬಿಟ್ಟು ಹೋಗಯ್ಯಾ ಎಂದು ಮಾತು ತಡೆಯಲಾರದಷ್ಟು ಆವೇದನೆಯ ಕೋಪ ತಾಳಿದ್ದರೂ ಭಕ್ತಿಯತೆಯ ಅಂತಕರಣವು ಹೆಚ್ಚಿದಂತೆಲ್ಲ ಅನೇಕ ಶಿಷ್ಯ ಸಂಕುಲವನ್ನು ಬೆಳೆಸುತ್ತಾ ಭಾವುಕರಾಗಿ ಮಠವನ್ನು ಬಿಟ್ಟರೆ ವಿನಹ, ತಾತನ, ಕುರಿತ ನೆನಪುಗಳು ಮಾತ್ರ ಚಡಪಡಿಸುವಂತೆ ಮಾಡಿರುವುದು ಆತನ ಭಕ್ತಿಯಗೀತೆಗಳ ಮೂಲಕ ಅರಿಯಬಹುದು.

೫.೨. ಶಿವರಾಮಾವಧೂತರು

ಭಾರತದಲ್ಲಿ ಪುರಾತನ ಕಾಲದಿಂದಲೂ ಶಿಷ್ಯ ಪರಂಪರೆಗೆ ಎಲ್ಲಿಲ್ಲದ ಮಹತ್ವವಿದೆ. ಗುರುವಿಗೆ ಆಸರೆಯಾಗಿ ಅವರ ಸಿದ್ಧಿಗೆ ಸದಾ ಬೆನ್ನೆಲುಬಾಗಿ ನಿಂತಿದ್ದಿವರು ಶಿಷ್ಯರು. ಆರೂಢರಾಗಲೀ, ಸಾಧು ಸಂತರಾಗಲೀ, ನಾಥಸೂಫಿಗಳಾಲೀ. ಅವಧೂತರಂತಹ ಯೌಗಿಕ ಪುರುಷರಾಗಲೀ ಶಿಷ್ಯತ್ವಕ್ಕೆ ಇಂಬುಕೊಟ್ಟವರು. ಕೆಲವರು ಶಿಸುಮಕ್ಕಳನ್ನು ತಾವಾಗಿಯೇ ಮಾಡಿಕೊಂಡಿರುವುದು ಕಂಡುಬರುತ್ತದೆ. ಇನ್ನು ಕೆಲವರ ವರ್ತನೆ ಯೋಗ ಸಾಧನೆಗಳನ್ನು ಕಂಡು ಶಿಷ್ಯರಾಗಿರುವುದು ನಮ್ಮ ಪರಂಪರೆಯನ್ನು ಅವಲೋಕಿಸಿದಾಗ ತಿಳಿದುಬರುತ್ತದೆ. ಅಂಥವವರ ಸಾಲಿನಲ್ಲಿ ಚೇಳಗುರಿಕೆ ಎರ್ರಿತಾತನು ನಿಲ್ಲುತ್ತಾನೆ. ಆತನು ಶಿಷ್ಯರನ್ನು ಬೇಕಂತಲೇ ಮಾಡಿಕೊಳ್ಳುತ್ತಿಲ್ಲ. ಆತನ ವಿಚಿತ್ರ ಅಲೌಕಿಕ ಭಾವವನ್ನು ಕಂಡ ಜನರು

ತಾವಾಗಿಯೇ ಬಂದು ಶರಣಾಗುತ್ತಿದ್ದರು. ಸದಾ ಮೌನವೇ ಆಭರಣವೆಂಬಂದಿರುತ್ತಿದ್ದ ಎರ್ರಿತಾತನಿಗೆ ಮಾತಾಡಿ ಶಿಷ್ಯ ಬಳಗಕ್ಕೆ ಉಪದೇಶಿಸುವುದು ಹೇಗೆ ಸಾಧ್ಯವಾದೀತು? ಕೆಲವೊಮ್ಮೆ ಅರಿವಿಲ್ಲದಂತೆ ಮಾತಾಡುತ್ತಿದ್ದ ಮಾತುಗಳಿಗೆ ತುಂಬಾ ಅಗೋಚರ ಶಕ್ತಿ ಆವರಿಸಿ ಬಿಡುತ್ತಿತ್ತು ಎಂದು ಅವರ ಪವಾಡ ಸಾದೃಶ್ಯಗಳನ್ನು ಗಮನಿಸಿದಾಗ ಅರಿವಾಗುತ್ತದೆ.

ತಿಕ್ಕಯ್ಯನ ನಂತರ ಎರ್ರಿತಾತನ ಒಡ್ಡೋಲಗದಲ್ಲಿ ವಿಲಕ್ಷಣ ಮರಿಯಾಗಿ ಆತನ ಸೇವೆಯಗೈದ ಶಿಷ್ಯ ಸಂಕುಲದಲ್ಲಿ ಅದ್ವಿತೀಯರು ಹಾಗೂ ಅತ್ಯಂತ ನಿಷ್ಠೆಯುಳ್ಳವರಲ್ಲಿ ಶಿವರಾಮಾವಧೂತರು ಮೊದಲಿಗರಾಗುತ್ತಾರೆ. ಏಕೆಂದರೆ ಗುರುವಿನ ಆಜ್ಞೆಯಂತೆ "ತುಮಕೂರಿಗೆ ಹೋಗಿ ಚಕ್ಕಲಿ ತಾರಯ್ಯಾ" ಎನ್ನುವ ಮಾತೇ ಆತನ ಕಿವಿಯೊಳಗೆ, ಮನಸ್ಸಿನೊಳಗೆ ಸಂಚರಿಸಿತು. ಅದರ ದೂರವಾಗಲೀ ಅಷ್ಟು ದೂರ ಪ್ರಯಾಣಿಸುವುದೆಂತು? ಎನ್ನುವ ಆಕಾರ ವಿಕಾರವಾದ ಪ್ರಶ್ನೆಗಳ ಗೋಜಿಗೆ ಹೋಗದೆ 'ನಡೆದುದ್ದೇ ಹಾದಿ' ಎನ್ನುವ ಮಂತ್ರ ಜಪಿಸುತ್ತಾ ಕಾಲ್ನಡಿಗೆಯಲ್ಲಿ ನಡೆದರು. ಆ ಕಾಲದಲ್ಲಿ ವಾಹನ ಸಂಚಾರದ ವ್ಯವಸ್ಥೆಯೂ ಅಷ್ಟಕಷ್ಟೆ.

ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲೂಕಿನ ಕುರುಪತಿ ಮೈಲಾರ ಗ್ರಾಮದಲ್ಲಿ ನಿತ್ಯ ಪೂಜಾ ಸಂಪ್ರದಾಯ ಹಾಗೂ ದೈವಭಕ್ತಿಯ ಕುಟುಂಬದ 'ಮಾಳೆವ್ವ' ಎಂಬ ಶಿವಭಕ್ತಳಿಗೆ ಸುಮಾರು ನೂರೈವತ್ತು ವರುಷಗಳ ಹಿಂದೆ ಶಿವರಾಮಾವಧೂತರು ಜನಿಸಿದರು. ಮೈಲಾರ ನೆಂಬುದು ಅವನ ಮೊದಲ ಹೆಸರು. ವಾಲ್ಮೀಕಿ ಸಮುದಾಯದ ಕೃಷಿಕ ಕುಟುಂಬದಲ್ಲಿ ಅವತರಿಸಿದ ಇವರು, ಮನೆ, ಸಾಂಸಾರಿಕ ಬದುಕಿನಿಂದ ಬಹುಬೇಗನೆ ಜಡತ್ವ ತಾಳಿದರು. ಅವರ ಬಾಲ್ಯ, ಸಂಸಾರ ಮುಂತಾದವುಗಳ ಕುರಿತು ಪ್ರಸ್ತುತ ಅಧ್ಯಯನದ ಉದ್ದೇಶವಲ್ಲದಿದ್ದರೂ, ಅವರು ಮೈಲಾರನೆಂಬ ಬಾಹ್ಯ ಜೀವನದಿಂದ 'ಶಿವರಾಮವಧೂತ' ಎಂಬ ಅಲೌಕಿಕತೆಯ ಸಾರತೆಯೆಡೆಗೆ ನಡೆದು ಚೇಳಗುರಿಕ ಎರ್ರಿತಾತನ ಶಿಷ್ಯ ವೃಂದದೊಳಗೆ ಅದ್ವಿತೀಯರಾದ ಬಗೆಯನ್ನು ಚರ್ಚಿಸುವುದೇ ಹೆಚ್ಚು ಸೂಕ್ತವೆನಿಸುತ್ತದೆ. ಯೋಗವೆಂದರೆ| ಮಿಲನ ಎಂದರ್ಥ. ಗುರು ಪಂಥಗಳಲ್ಲಿ ಗುರು ಶಿಷ್ಯರ ಮಿಲನವಾಗುವಾಗ ಜಾತಿಕಟ್ಟು ಸಾಮಾನ್ಯವಾಗಿ ಇರುವುದಿಲ್ಲ. ಚಂದಿಮರಸ ಎಂಬ ವಚನಕಾರ ಗುರುವನ್ನು ಕನ್ನಡಿ ರೂಪಕದಲ್ಲಿ ವಿವರಿಸುತ್ತಾನೆ. ಕನ್ನಡಿ ತನ್ನದಾದರೇನು ಅನ್ಯರದಾದರೇನು? ತನ್ನನ್ನು ಅದು ಅರುಹಿದರೆ ಸಾಕು ಎಂಬ ವಿವರಣೆ ಪರೋಕ್ಷವಾಗಿ ಗುರುವಿನ ಸ್ವರೂಪವನ್ನೇ ಹೇಳುತ್ತಿದೆ. ಅದರ ಅರ್ಥ ಎರ್ರಿತಾತನನ್ನು ಲಿಂಗವಂತನೆಂದು ಹಲವು ಕೃತಿಗಳು ಬಿಂಬಿಸಿವೆ. ಮೈಲಾರನು ಮೂಲತಃ ಕೆಳಸಮುದಾಯದ ವಾಲ್ಮೀಕಿ ಸಮುದಾಯಕ್ಕೆ ಸೇರಿದವನಾದರೂ ಅವರ ಗುರು ಶಿಷ್ಯತ್ವಗಳು ದ್ರೋಣ-ಏಕಲವ್ಯರ ಸಂಬಂಧವನ್ನು ಮೀರಿ ಬೆಳೆದಿದೆ. ಅಲ್ಲಿ ಶೂದ್ರಕುಲ ಮತ್ತು ಮೇಲಜಾತಿಯ ಒಣ ಭ್ರಮೆಯೇ ಹೆಚ್ಚಾಗಿ ಮೈತಳೆದು ಅರ್ಥಅನರ್ಥಗಳ ವ್ಯಾಪಾರೀಕರಣಗೊಂಡವು. ಉದ್ದೇಶ ಪೂರ್ವಕವೆಂಬಂತೆ ವ್ಯಾಪಾರೀಕರಣ ಎಂಬ ಶಬ್ದವನ್ನು ಬಳಸಿದ್ದು ಮೇಲ್ನೋಟಕ್ಕೆ ಕಂಡುಬಂದರೂ, ಗುರುದಕ್ಷಿಣೆ ಎಂಬುದು ಅದರ ವಿಸ್ತರಣೆಯ ಗೋಜಿಗೆ ಹೋದರೆ ಪ್ರಸ್ತುತ ಅಧ್ಯಯನದ ಸ್ವರೂಪನೇ ಭಿನ್ನವಾಗುವ ಸಂಭವವೇ ಹೆಚ್ಚಾಗಿ ಕಂಡುಬರುತ್ತದೆ. ಅದು ಸಹ ಪ್ರಸ್ತುತ ಅಧ್ಯಯನದ ವ್ಯಾಪ್ತಿಯೊಳಗೆ

ಚರ್ಚಿಸುವ ಪ್ರಯತ್ನದಷ್ಟೇ ಮುಖ್ಯವೆನಿಸುತ್ತದೆ. ಶಿವರಾಮಾವಧೂತನ ಸೇವಾ ನಿರತೆಯಾಗಲೀ, ತುಮಕೂರಿಗೆ ಹೋಗಿ ಚಕ್ಕುಲಿ ತರಲು ಪಟ್ಟ ಪ್ರಯಾಸವಾಗಲೀ ತೀರಾ ಭಕ್ತಿಯ ಪ್ರಣತಿಗೆ ದೀನತೆಯ ಭಾವವನ್ನು ಪಸರಿಸುವಂತೆ ಮಾಡುತ್ತದೆ.

"ಗುರು ಪಂಥಗಳಲ್ಲಿ ಶಿಷ್ಯನನ್ನು ಹುಡುಕುವುದು, ದೀಕ್ಷೆಕೊಟ್ಟು ಹೊಸ ನಾಮಕರಣ ಮಾಡುವುದು, ಪರೀಕ್ಷೆಗೆ ಒಡ್ಡುವುದು ಮತ್ತು ಸಾಧನೆ ಮಾಡಿಸುವುದು ಸಾಮಾನ್ಯ. ಹೆತ್ತವರು ಗುರುವಿಗೆ ಮಗನನ್ನು ಒಪ್ಪಿಸುವಾಗ 'ಇಂದಿನಿಂದ ನೀನು ನನ್ನ ಮಗನಲ್ಲ' ಎಂದು ಸಾಂಕೇತಿಕವಾಗಿ ಸಂಬಂಧ ಕಡಿದುಕೊಳ್ಳುತ್ತಾರೆ. ದೀಕ್ಷೆ ಕೊಡುವ ಗುರು ಇವತ್ತಿನಿಂದ ನೀನು ನನ್ನ 'ಶಿಸುಮಗ' ಎಂದು ಹೊಸ ಪಿತೃತ್ವದ ಸಂಬಂಧ ಸ್ಥಾಪಿಸುತ್ತಾನೆ". (ರಹಮತ್ ತರೀಕೆರೆ ಕರ್ನಾಟಕದ ನಾಥಪಂಥ ಪು. ೫) ಗುರು ಶಿಷ್ಯರ ಸಂಬಂಧ ಪಿತೃಸಮಾನ ಯಾವುದೇ ಭಿನ್ನ ಮತ್ಸರ ಮುಂತಾದ ದೋಷಗಳಿಂದ ಬಹುದೂರ ನಿಲ್ಲಿಸಿಬಿಡುವಂಥದ್ದು. ಹಾಗಾಗಿಯೇ ಮಂಟೇಸ್ವಾಮಿ ಕಾವ್ಯದಲ್ಲಿ ಗುರುವಿಗೆ ಶಿಷ್ಯರು 'ಅಪ್ಪಾಜಿ' ಎಂದೇ ಕರೆಯಲಾಗಿದೆ.

ವಿರಾಗಿಮೂರ್ತಿಯಾದ ಮೈಲಾರನು ಭವದ ಬಂಧನಗಳಿಂದ ಜಿಗುಪ್ಸೆಗೊಂಡು ಅಲ್ಲಲ್ಲಿ ತೀರ್ಥಯಾತ್ರೆಗಳನ್ನು ಸಂದರ್ಶಿಸಿ ಭಕ್ತಿಯಿಂದ ಶಿವನನ್ನು ಭಜಿಸುತ್ತಾ ಬರೀ ಮೈಯಿಂದ ಬಂದವನೂ? ಮೈಲಾರನನ್ನು ಸಮೀಪಕ್ಕೆ ಪರಮ ವಿರಕ್ತನೂ ಬರೀ ಮೈಯಿಂದ ಬಂದವನೂ ಆದ ಮೈಲಾರನನ್ನು ಸಮೀಪಕ್ಕೆ ಕರೆದು ಅಯ್ಯಾ, ಮಹಾತ್ಮಾ ನಿನ್ನ ಗುರು ನಿನ್ನ ಆಗಮನವನ್ನೇ ನಿರೀಕ್ಷಿಸುತ್ತಿರುವನು ಆ ದಕ್ಷಿಣಾಮೂರ್ತಿ ನೀನು ಆ ಮಹಾತ್ಮರ ಸನ್ನಿಧಿಗೆ ತೆರಳು. ಅವರ ಅನುಗ್ರಹಕ್ಕೆ ಪಾತ್ರನಾಗು ಆ ಮಹಾಮಹಿಮ ಗುರುವಿನ ಗುರುಬೋಧೆಯಿಂದ ನಿನ್ನ ಜನ್ಮ ಸಾರ್ಥಕವಾಗುವುದು ಎಂದು ಹೇಳಿ ಸಿದ್ಧಾರೂಢರು ಮೈಲಾರನನ್ನು ಆಶೀರ್ವದಿಸಿ ಕಳುಹಿಸಿಕೊಟ್ಟರು. ಸಿದ್ಧಾರೂಢರ ಅಣತಿಯಂತೆ ಮೈಲಾರನು ಹುಬ್ಬಳಿಯಿಂದ ಹೊರಟು ಸಂಚಾರ ಮಾಡುತ್ತಾ ಸಿದ್ಧಪರ್ವತಕ್ಕೆ ಬಂದನು. ಅಲ್ಲಿ ಮತ್ತೊಂದು ತರಹದ ದೈವವಾಣಿಯು ಕೇಳಿಸಿತು. ದೇವಿ ಬಗಳಾಂಬಿಕೆಯು ತನ್ನ ದಿವ್ಯ ಸ್ವರೂಪವನ್ನೇ ತೋರುತ್ತಾ ದರ್ಶನ ನೀಡಿದಳು. ಮಗು ನೀನು ಈಗಾಗಲೇ ಒಬ್ಬ ಮಹಾಪುರುಷನ ದರ್ಶನ ಪಡೆದು, ಅವನ ಆಜ್ಞೆಯಂತೆ ಗುರುವನ್ನು ಹುಡುಕುತ್ತಾ ಹೊರಟಿರುವೆ. ನಿನಗೆ ಸುಜ್ಞಾನದ ಜ್ಞಾನನೀಡಿ ಗುರು ಕರುಣೆಯ ವರ ಪ್ರಸಾದ ನೀಡಿ ಉದ್ಧಾರ ಮಾಡಬಲ್ಲ ಮಹಾಚೇತನ ಚೇಳಗುರಿಕೆಯಲ್ಲಿರುವನು ಎಂಬ ದಿವ್ಯವಾಣಿಯಯನ್ನು ಪರಿಗ್ರಹಿಸಿ ನಡೆದನು.

ದೂಷಣ ಭೂಷಣಗಳಿಗೆ ತಗ್ಗದೆ ಹಿಗ್ಗದೆ ವೈರಾಗ್ಯಶೀಲನಾದ ಶ್ರೀಶಿವರಾಮಾವಧೂತನು ಅವರಿವರೆನ್ನದೆ ತನ್ನ ಸಮೀಪದವರಿಗೆ ಭಕ್ತಿ ಜ್ಞಾನ ವೈರಾಗ್ಯಗಳನ್ನು ಬೋಧಿಸುತ್ತ ಚೇಳಗುರಿಕೆ ಗ್ರಾಮದ ಮಠದೊಳಗೆ ಬಂದು ಸೇರಿದನು.

ಆದಿಯಿಂದ ನಿಮ್ಮಿಂದಲಾದೆನಯ್ಯಾ
ಅನಾದಿಯಲ್ಲಿ ನಿಮ್ಮಲ್ಲಿ ತದುಗತನಾಗಿದ್ದೆನಯ್ಯಾ
ನಿಮ್ಮ ಹಸ್ತ ಮುಟ್ಟಿದಲ್ಲಿ, ನಿಮ್ಮನೆನ್ನ ಮನದೊಳಗಿಟ್ಟುಕೊಂಡೆನಯ್ಯಾ

ಕಾಯವೆಂಬ ಕಪಟವನೊಡ್ಡಿ ನಿನ್ನ ಮರೆವೆಸಿಕೊಂಡಿದ್ದರೆ

ನಿನ್ನ ಬೆಂಬಳಿಯ ಸಂದು ನಿಮ್ಮ ಕಂಡೆನಯ್ಯಾ

ಕಪಿಲ ಸಿದ್ಧಮಲ್ಲಿನಾಥಯ್ಯಾ,

ಎನ್ನ ಅಂತರಂಗವ ಶುದ್ಧವಮಾಡಿ ತಿಳುಹಾ ನಿಮ್ಮ ಧರ್ಮ

(ಸಂ. ಶಿ. ಭೂಸನೂರಮಠ, ಶೂನ್ಯ ಸಂಪಾದನೆ ಪು. ೫೮ವಚನ ೩೫೮ರಲ್ಲಿ) ಮೇಲಿನ ವಚನ ಆದಿಯ ಸೋಂಕು ಸಂಬಂಧವಿಲ್ಲದೆ, ಭೂತವರ್ತಮಾನ ಭವಿಷ್ಯವನ್ನು ಮೀರಿ ಕಾಲಕಾಲವಾಗಿ 'ಕಾಲಹರ' ಮುಗಿಸುವ ಅನಾದಿಯಲ್ಲಿ ನಿಮ್ಮೊಳಗೆ ನಾನು 'ತದುಗತ'ವಾಗಿ ಇದ್ದೆ. ನಿಮ್ಮಳಗಿದ್ದ ನಾನು ಕಾಲದ ಆದಿಯಿಂದ ನಿಮ್ಮಿಂದ ನಾನಾದೆ. ಸಂತ ಪರಂಪರೆಯಲ್ಲಿ ಗುರುವನ್ನೇ ದೈವತ್ವದ ಪರಿಧಿಯೊಳಗೆ ಕಂಡ ಬಗೆಯನ್ನು ಈ ರೀತಿಯಾಗಿ ಕಾಣುತ್ತೇವೆ.

ಮಠದೊಳಗಿನ ಹಿರಿಯರು ಶಿವರಾಮಾವಧೂತನ ವಿಚಿತ್ರ ವರ್ತನೆಗಳನ್ನು ಕಂಡು ಯಾರೋ ಹುಚ್ಚನಿರಬೇಕೆಂದು ಆತನನ್ನೂ ಒಳಗಡೆ ಸೇರಗೊಡದೆ, ಹೊರಕ್ಕೆ ತಳ್ಳಿದರು. ಆದರೆ, ಅವರಾಡುವ ದೂಷಣೆಯ ಮಾತುಗಳಿಗೆ ಕುಂದದವನಾಗಿ ರಾತ್ರಿಯಾದ ಕೂಡಲೇ ಯಾರು ಇಲ್ಲದ ಸಂಧಿಯನ್ನು ಗಮನಿಸಿ ತನ್ನ ಅಂತರಂಗದ ಗುರು ಎರ್ರಿತಾತನಿಗೆ ಪಾದಸೇವೆಯನ್ನು ಇರುಳೆಲ್ಲ ಆತನ ಮನಸ್ಸು ಒಪ್ಪುವಂತೆ ಮಾಡಿ ಬೆಳಗಾಗುವುದರೊಳಗಾಗಿ ಮಠದ ಒಳಭಾಗದ ಕಸವನ್ನು ಬಳಿದು, ಶುದ್ಧಿಮಾಡಿ ಮೊದಲಿನಂತೆ ಮಠದ ಹೊರಗಡೆಯೇ ಮಲಗುತ್ತಿದ್ದನು. ಅಲ್ಲಿಂದ ಮಠದವರು ಮಠದ ಒಳಭಾಗದ ಶುದ್ಧಿಯನ್ನು ಯಾರು ಮಾಡಿದರೆಂದು ತಮ್ಮ ತಮ್ಮೊಳಗೆ ಮಾತನಾಡಿ ಯಾರೆಂಬುದನ್ನು ತಿಳಿಯದೆ ಸುಮ್ಮನಾಗುತ್ತಿದ್ದರು. ಒಂದು ದಿನ ಶಿವರಾಮಾವಧೂತರು ತನ್ನಲ್ಲಿ ಭಕ್ತಿಯು ಪರಾಕಾಷ್ಠತೆಯೆಡೆಗೆ ವಿಸ್ತರಿಸಿಕೊಂಡಂತೆಲ್ಲ ರಾತ್ರಿ ಆತನು ಕುಣಿದಾಡುತ್ತಾ, ಕೇಕೆ ಮುಂತಾದ ಆನಂದ ಲಹರಿಯ ಶಬ್ದಗಳಿಂದ ತನ್ನ ಗುರುವಿನ ಸೇವೆಯನ್ನು ಮಾಡುತ್ತಿದ್ದನು. ಅದನ್ನು ಗಮನಿಸಿದ ಕೆಲವು ಜನರು ನೋಡಿ ಓಹೋ ಈತನನ್ನು ಹುಚ್ಚನೆಂದು ಬಗೆದಿದ್ದೇವು, ಆದರೆ ಈತನು ಎರ್ರಿತಾತನ ಪರಮ ಭಕ್ತನೆಂದು ತಿಳಿದರು. ಯಾವುದೇ ಹಮ್ಮು ಬಿಮ್ಮುಗಳಿಲ್ಲದ ಉತ್ಕಟ ಸೇವೆ ಆತನದು. ಸೇವೆಯಿಂದೊದಗುವ ಈ ಪರಮಾನಂದವು ಬಹು ದಿವಸಗಳಿಂದ ಇಲ್ಲಿಯೇ ವಾಸವಾಗಿರುವ ನಮ್ಮಗಳಿಗೇಕೆ ದೊರೆಯದೇ ಹೋಯಿತು. ಧೇನುವಿನ ಕೆಚ್ಚಲಲ್ಲಿಯೇ ವಾಸಮಾಡಿದ್ದ ಉಣ್ಣೆಯು ಎಂದೂ ಹಾಲು ಸವಿಯಲಿಲ್ಲ. ದೂರದಲ್ಲಿ ಕಟ್ಟಿಹಾಕಿದ್ದ ಕರುವಿಗೆ ಗೋ ಕೆಚ್ಚಲೊಳಗಿನ ಹಾಲು ಪಾನೀಯವಾದಂತೆ ಬಹುದಿವಸದಿಂದ ಈ ಮಹನೀಯನಲ್ಲಿ ವಾಸವಾಗಿದ್ದ ನಮ್ಮಗಳಿಗೆ ಈ ಭಕ್ತಿಯು ಬರಲಿಲ್ಲವೆಂದು ತಮ್ಮ ತಮ್ಮೊಳಗೆ ತಮ್ಮ ಮೌಢ್ಯತನವನ್ನು ದೂಷಿಸಿಕೊಳ್ಳುತ್ತಾ ಶಿವರಾಮನ ಭಕ್ತಿ ಭಾವಕ್ಕೆ ಮೆಚ್ಚಿ ಆತನ ಯಾವುದೇ ಪೂರ್ವಾಚರ ಸಂಗತಿಗಳನ್ನು ಪ್ರಶ್ನಿಸದೆ 'ತಾವುಗಳು ಮಠವನ್ನು ಬಿಟ್ಟು ಹೋಗಬೇಡಿರಿ' ಇಲ್ಲಿಯೇ ವಾಸಮಾಡಿರೆಂದು ಮಠದ ಒಳಭಾಗದಲ್ಲಿ ಒಂದು ಸಣ್ಣ ಗುಡಿಸಲನ್ನು ಹಾಕಿ ಕೊಟ್ಟರು.

ಭಕ್ತಿಯೆಂಬುದು ಅಂತರಾಳದ ಮನಸ್ಸಿನ ಸ್ಥಿತಪ್ರಜ್ಞೆ, ಅದನ್ನು ಒತ್ತಡದಿಂದಲೋ ಒತ್ತಾಯದಿಂದಲೋ ಹೇರುವುದಾಗಲಿ, ಹೋರುವಂತೆ ತಿಳಿಸುವುದಾಗಲೀ ಕೇವಲ ಬಾಹ್ಯತೆಗೆ ಸೀಮಿತ. ತಾನಾಗಿಯೇ ಕೆಲವೊಮ್ಮೆ ಗುರುವಿನ ಉಪದೇಶದಿಂದ ಅನುಗ್ರಹಿಸಿಬಿಡುತ್ತದೆ. ಆದರೆ ಬಹುತೇಕವಾಗಿ ಭಕ್ತನ ಏಕಾಂತತೆ, ಆತನ ಶ್ರದ್ಧೆ ನಿಷ್ಠತೆಗಳೇ ಅದಕ್ಕೆ ಜೀವಾಳ. ಅಷ್ಟು ಮಾತ್ರವಲ್ಲ ಗುರುಗಳು, ಮುನಿಗಳು ಸಾಧು ಸಂತರು ತಮ್ಮ ಒಡನಾಡಿಗಳನ್ನು ತೀಡುವರು. ಪರಮಾತ್ಮನಿಗೆ ಚಿನ್ನದ ಆಭರಣಗಳಾಗಿ ಸಲ್ಲಲಿ ಎಂದು ತನ್ನನು ಆಶ್ರಯಿಸಿದ, ಒಡನಾಡುವ ಸಾಧಕ ಶಿಷ್ಯ ಜೀವಿಗಳ ಲೋಪದೋಷಗಳನ್ನು ಸರಿಪಡಿಸಿ ಪರಿಪೂರ್ಣಗೊಳಿಸುವುದು ಗುರುಗಳಿಂದಲೇ ಸಾಧ್ಯವಾಗುತ್ತದೆ. ಯಾವೊಬ್ಬ ವ್ಯಕ್ತಿಯನ್ನು ದ್ವೇಷಿಸಿದಂತೆ ವ್ಯಕ್ತಿಯೊಳಗಣ ಲೋಪವನ್ನು ಮಚ್ಚರಿಸಿ ತಿದ್ದಿತೀಡಿ ದೇವನಿಗೆ ಸಲ್ಲುವ ಚೆಲ್ವ ಆಭರಣವಾಗಿ ಮಾಡುವುದು ಗುರುವಿನ ಕೈಯಲ್ಲಿ ಇರುತ್ತದೆ. ಅದಕ್ಕೆ ಅಲ್ಲಮ ಪ್ರಭುವಿನ ವಚನ ಪೂರಕವೆಂಬಂತೆ ಕಂಡುಬರುತ್ತದೆ. "ಪ್ರಣತಿಯೂ ಇದೆ, ಬತ್ತಿಯೂ ಇದೆ, ಜ್ಯೋತಿ ಬೆಳಗುವಡೆ ತೈಲವಿಲ್ಲದೆ ಎಂತಯ್ಯಾ? ಗುರುವೂ ಆಯಿದಾನೆ ಶಿಷ್ಯನೂ ಆಯಿದಾನೆ ಶಿಷ್ಯರಿಗೆ ಜ್ಞಾನೋದಯವಾಗದನ್ನಕ್ಕರ ಭಕ್ತಿ ಎಂತಳವಡುವುದಯ್ಯಾ?" (ಭೂಸನೂರಮಠ ಸಂ.ಶಿ, ಶೂನ್ಯ ಸಂಪಾದನೆಗಳು, ಪು.೫೪) ಎನ್ನುವಲ್ಲಿ ಒಂದು ಪ್ರಣತಿ ಇದೆ. ಅದರಲ್ಲಿ ಬತ್ತಿಯೂ ಇದೆ. ಜ್ಯೋತಿ ಬೆಳಗಬೇಕಾದರೆ ತೈಲವು ಅಲ್ಲಿ ಬೇಕೆಬೇಕು. ಇಲ್ಲವಾದರೆ ಹಚ್ಚಿಟ್ಟು ಜ್ಯೋತಿಯು ಬರಬರನೆ ಉರಿದು ಹೋಗುವುದೇ ವಿನಾ ಶಾಂತವಾಗಿ ಉರಿಯದು. ಬತ್ತಿಯು ಚೆನ್ನಾಗಿ ತೊಯ್ದಿದ್ದರೆ ಶಾಂತವಾಗಿ ಉರಿಯುವುದು. ಹಾಗೆಯೇ ಗುರುಕರುಣೆ ಜ್ಯೋತಿಕರಣ, ಶಿಷ್ಯನ ಜೀವನವೇ ಭಕ್ತಿ ಆದರೆ ಶಿಷ್ಯನಲ್ಲಿ ಭಕ್ತಿಯ ತೈಲಮ್ಮದಿದ್ದಾರೆ, ಸಾಧನೆ ನಿರಂತರವಾಗಿಲ್ಲದಿದ್ದರೆ ಎಲ್ಲ ಜ್ಞಾನವು ದಗದಗನೆ ಉರಿದು ಅಲ್ಲಿ ಯಾವ ಪರಿಣಾಮವೂ ನಿಲ್ಲದು. ಗುರುವು ಎಷ್ಟು ಸಮರ್ಥ ಜ್ಞಾನಿಯಿದ್ದರೂ ಅವನ ಜ್ಞಾನ, ಅನುಗ್ರಹ, ತಪಸ್ಸುಗಳನ್ನೇ ಸ್ವೀಕರಿಸುವ ಸಾಮರ್ಥ್ಯ ಶಿಷ್ಯನಲ್ಲಿ ಇಲ್ಲದಿದ್ದರೆ ಸಂಕಲ್ಪ ತಪಸ್ಸು ಸಿದ್ಧಿಸದು.

ಸೇವೆಯೆಂಬುದು ಫಲಾಪೇಕ್ಷೆಗಳ ದೂರ ನಿಲ್ಲುಸುವುದು ಅದರ ಮುಖ್ಯಧ್ಯೇಯ. ಆದರೆ ಇಂದು ಅದರ ಉದ್ದೇಶಗಳೇ ಸಂಪೂರ್ಣ ಬದಲಾಗಿರುವುದು ಕಂಡುಬರುತ್ತದೆ. ಶಿವರಾಮನು ಹಗಲು ಮಾತ್ರ ಗುಡಿಸಲಲ್ಲಿ ರಾತ್ರಿಯಾದ ಕೂಡಲೇ ಎರ್ರಿತಾತನ ಸೇವಾವೃತ್ತಿಯಲ್ಲಿ ಕಾಲ ಕಳೆಯುತ್ತಾ ಅಲ್ಲಿನ ಪಾಮರ ವಿಷಯಾದಿಗಳಿಗೆ ಈ ರೀತಿ ಸಹಿಸಬೇಕೆಂದು ಕೇವಲ ಬೋಧಿಸಿದರೆ ಅರ್ಥವಾಗದೆಂದು ಅರಿತು ತುಸು ದಂಡನೆ ತಾವಾಗಿಯೇ ಮಾಡಿ ತೋರಿಸಿ ಅಲ್ಲಿನ ಸಾರ್ವಜನರಿಗೆ ವಿಶದಪಡಿಸಿದನು. ನರರೂಪದ ಸ್ವೀಕರಿಸಿದ ಮೇಲೆ ಶಿಷ್ಯನು ಸದಾ ಅವನನ್ನು ಶ್ರದ್ಧಾಭಕ್ತಿಗಳಿಂದ ಪೂಜಿಸಬೇಕು. ಅವನಲ್ಲಿ ಜಗದ್ಗುರುವನ್ನು ಕಾಣಬೇಕು ಎಂಬ ನಿಯಮವನ್ನು ಸಾರಿದವನಂತೆ ತನು ಮನವನ್ನೆಲ್ಲ ಎರ್ರಿತಾತನಿಗೆ ಅರ್ಪಿಸಿ ಸೇವೆಗೆ ನಿರತನಾದನು.

ಗುರು ಶಿಷ್ಯರ ಸಂಬಂಧ ಹಲವು ಪರೀಕ್ಷೆಗಳ ನಂತರವೇ ಅದು ಗಟ್ಟಿಕೊಳ್ಳುತ್ತದೆ. ಅದಕ್ಕಾಗಿಯೇ ಎಂಬಂತೆ ಒಂದು ದಿನ ಶಿವರಾಮಾವಧೂತನಿಗೆ 'ತುಮಕೂರಿಗೆ ಹೋಗಿ ಚಕ್ಕಲಿ ತಾರಯ್ಯ' ಎಂದರಂತೆ. ತಕ್ಷಣವೇ ಯಾವುದೇ ರೀತಿಯ ಆಲೋಚನೆಯನ್ನು ಮಾಡದೇ ಕಾಲ್ನಡಿಯಲ್ಲಿಯೇ ಹಲವು ತೊಂದರೆಗಳಿಗೆ

ಗುರಿಯಾದರೂ ಗುರು ಬಯಕೆಯನ್ನು ತೀರಿಸುವ ಒಂದೇ ಗುರಿಯನ್ನೇ ಇಟ್ಟುಕೊಂಡಿದ್ದನು. ತನ್ನ ಭವದ ಸಂಪೂರ್ಣ ಕತ್ತಲನ್ನು ನಿವಾರಿಸುವ ಶಕ್ತಿ ಗುರುವಿಗೆ ಮಾತ್ರ ಎಂದು ಅರಿತವನಾಗಿದ್ದನು. ತನ್ನ ತನದ ಎಲ್ಲಾ ದೊಡ್ಡಸ್ತಿಕೆಯ ಭಾವಗಳನ್ನು ದೂರ ಸರಿಸಿದರು. ಕುವೆಂಪು ಅವರ ಕೃತಿಯಲ್ಲಿ ಗುರುವನ್ನು ಹಂಬಲಿಸಿದ ಬಗೆ ಹೀಗಿದೆ. "ಬಾ ಗುರುವೆ ಕತ್ತರಿಸು ನನ್ನದೆಯ ಕೀಳ್ತನವ, ಭಕ್ತಿಯಿಂದ ಬೇಡುವೆನು ಬೆಂದು ನೊಂದು ಹಾರಲೇಳಸುವೆನು ಪುದಿಯಲ್ಲಿ ಬರಿದೆ ಬಳಲಿ, ಕೆಚ್ಚಳಿವ ಮುನ್ನ ಬಾ, ನೆಚ್ಚಳಿವ ಮುನ್ನ ಬಾ, ಕೊಚ್ಚಿ ಹೋಗುವ ಮುನ್ನ ಬಾ ಗುರುವೆ ಬಾರೈ. ಶಕ್ತಿ ಸಾಗರ ನೀನು, ಮುಕ್ತಿಗಾಗರ ನೀನು. ನಿನಗೆ ಶರಣಾದರೆ ನಿನ್ನ ಆಜ್ಞೆ ಪಾಲಿಸಿದರೆ ಪಾವನನಾಗುವೆ (ಅದೇ ಪು.೫೭) ಎಂಬಂತಹ ಧೋರಣೆಯನ್ನು ಅನುಸರಿಸುವವನಂತೆ ತುಮಕೂರಿಗೆ ನಡೆದನು.

ಮಾರ್ಗ ಮಧ್ಯದಲ್ಲಿ ಎದುರಾದ ಅನೇಕ ಜನರ ಕಾಟಗಳಿಗೆ "ನಾನು ಪರದೇಶಿ" ಎಂಬುದೊಂದೇ ಉತ್ತರವಲ್ಲದೆ ಹೆಚ್ಚೇನೂ ಸಂಭಾಷಣೆಗಳಿಲ್ಲದೆ ಬಟ್ಟೆಬರಗಳ ತಂಟೆಗೆ ಹೆಚ್ಚು ಗಮನ ನೀಡದೆ, ಅನ್ನೋದಕಗಳಿಲ್ಲದೆ ಸುಮಾರು ಹದಿನೈದು ದಿನಕ್ಕೆ ತುಮಕೂರಿಗೆ ಮುಟ್ಟಿದರು. ಇಲ್ಲಿ ಶಿಷ್ಯನ ಶ್ರದ್ಧೆ ಹೆಚ್ಚಿದಂತೆಲ್ಲ. ಹಾತೊರೆತ ತೀವ್ರವಾದೆಂತೆಲ್ಲ ಅವನ ಅವಿಧ್ಯೆ ಕ್ಷೀಣವಾಗುತ್ತಾ ಕೊನೆಗೆ ಇಬ್ಬರೂ ಒಂದೇ ಶಕ್ತಿಯ ಎರಡು ತುದಿಗಳಾಗುತ್ತಾರೆ. ಸಮರ್ಪಣ ಮತ್ತು ಪರಸ್ಪರ ಐಕ್ಯದ ಮೂಲಕ ಇಬ್ಬರೂ ಒಂದೇ ಯಾಗುತ್ತಾರೆ. ಗುರುವಿನ ಕೃಪೆ ಶಿಷ್ಯನ ಕಡೆಗೆ ಹರಿದು, ಶಿಷ್ಯನ ಭಕ್ತಿ ಅದರೊಳಗೆ ಐಕ್ಯವಾದಾಗ, ಅವರಿಬ್ಬರ ನಡುವ ಅದ್ವೈತ ಸಮಾನಿಸುತ್ತದೆ. ಗುರುವೆಂಬ ಜ್ಯೋತಿ ಶಿಷ್ಯಾನೆಂಬ ಹಣತೆಯನ್ನು ಮುಟ್ಟಿದಾಗ, ಅವೆರಡೂ ಅಭಿನ್ನಗಳಾಗುತ್ತವಷ್ಟೆ. ತುಮಕೂರು ಸುಮಾರು ಎರಡು ಮೈಲು ದೂರದಲ್ಲಿದ್ದಾಗ ಒಬ್ಬ ಬ್ರಾಹ್ಮಣನು ಒಂದು ಮೆಣಸಿನಕಾಯಿ ಅಂದಿಗೆಯನ್ನು ಹೊತ್ತುಕೊಂಡು ಹೋಗುತ್ತಿದ್ದಾಗ ಹುಚ್ಚನಂತಿದ್ದ ಶಿವರಾಮಾವಧೂತನನ್ನು ಕಂಡು ಎಲೋ ನಮ್ಮ ಗ್ರಾಮವು ಇಲ್ಲಿಗೆ ಸಮೀಪವಿದೆ. ಅಲ್ಲಿಗೆ ಈ ಮೆಣಸಿನ ಕಾಯಿ ಅಂದಿಗೆಯನ್ನೇ ಹೊತ್ತುಕೊಂಡು ಬರುವೆಯಾ ನಿನಗೆ ಕೂಲಿಯನ್ನೂ ಕೊಡುತ್ತೇನೆಂದು ಹೇಳಲು ಗುರು ಬಯಕೆಯನ್ನು ತೀರಿಸಲು ಧನ, ಚಿಂತೆಯಲ್ಲಿದ್ದ. ಆತನು ಕೂಲಿ ಕೊಡುತ್ತೇನೆಂದು ಹೇಳಿದ ಕೂಡಲೇ ಮೂರು ದಿವಸಗಳಿಂದ ಅನ್ನವಿಲ್ಲದಿದ್ದರೂ ಗುರುಕಾರ್ಯ ನೆರವೇರಿತೆಂಬ ಸಂತೋಷದಿಂದ ತಾನೇ ಅಂದಿಗೆಯನ್ನು ಹೊತ್ತುಕೊಂಡು ಹೋದನು. ಆಗ ಬ್ರಾಹ್ಮಣನು ಈ ಹುಚ್ಚನ ಸಾಹಸವು ದೊಡ್ಡದು ಎಂದು ತಿಳಿದು ನಾಲ್ಕಾಣೆ ಕೊಡಲು ನಿರ್ಧರಿಸಿದಾಗ ಆತನ ಬಳಿ ಚಿಲ್ಲರೆಯಿಲ್ಲದಾಗ ಒಂಬತ್ತು ಕಾಸುಗಳೇ ಇದ್ದವು. ತನ್ನ ಗುರುವಿಗೆ ಚಕ್ಕಲಿ ಕೊಂಡುಕೊಳ್ಳಲು ಇವೇ ಸಾಕಾಗುತ್ತವೆ ಎಂದು ತಿಳಿದು ಅಷ್ಟನ್ನೆ ತೆಗದುಕೊಂಡು ಚಕ್ಕಲಿ ತರಲು ಹೋದನು.

ತನ್ನಲ್ಲಿದ್ದ ಜೋಳಿಗೆಯಿಂದ ಸಿದ್ಧನಾದ ಶಿವರಾಮಾವಧೂತನು ತನ್ನಲ್ಲಿದ್ದ ಒಂಭತ್ತು ಕಾಸುಗಳು ತೆಗೆದುಕೊಂಡು ಒಂದೇ ಅಂಗಡಿಯಲ್ಲಿ ಅಪ್ಪನ ಬಯಕೆಯ ವಸ್ತುಗಳು ತೆಗೆದುಕೊಂಡರೆ ರುಚಿಯಾಗಿರುವವೋ ಅಥವಾ ಅರುಚಿಯಾಗಿರುವೋ ತೆಗೆದುಕೊಂಡು ಹೋದ ಮೇಲೆ ರುಚಿಯಾಗಿರದಿದ್ದರೆ

ನನ್ನ ಶ್ರಮವು ಸಾರ್ಥಕವಾಗುವುದಿಲ್ಲವೆಂದರಿತು ಮೂರು ಬೇರೆ ಬೇರೆ ಅಂಗಡಿಯಲ್ಲಿ ಚಕ್ಕಲಿಯನ್ನು ತೆಗೆದುಕೊಂಡನು. ರಾಮಾಯಣದ ಶಬರಿ ತನ್ನ ಗುರುದೈವನಾದ ರಾಮನು ಪೂಜೆಗೆಂದು ಹಲವು ಹಣ್ಣುಗಳನ್ನು ತೆಗೆದು ಎದುರು ನೋಡುತ್ತಿದ್ದಳು. ಅಂಥಹ ಹಣ್ಣುಗಳು ಕಹಿಯಾಗಿದ್ದರೆ ತನ್ನ ಗುರುದೈವಕ್ಕೆ ಅಪಚಾರವೆಸಗಿದಂತೆ ಎಂಬ ಮನೋಭಾವದಿಂದ ಆ ಹಣ್ಣುಗಳನ್ನು ಸ್ವಲ್ಪ ಸ್ವಲ್ಪ ತಿಂದು ರುಚಿನೋಡಿ ತನ್ನ ಗುರುವಿನ ಪೂಜೆಗೆ ಮೀಸಲಿಟ್ಟಳು. ಇಲ್ಲಿ ಶಬರಿಯ ಎಂಜಲು ಆಗುತ್ತದೆ ಎನ್ನುವ ಮನಸ್ಥಿತಿಯಿಂದ ಸಂಪೂರ್ಣ ದೂರವಾಗಿದ್ದಳು ಎಂಬುದು ತಿಳಿಯುತ್ತದೆ. ಇಲ್ಲಿ ಅದರ ಪ್ರಕ್ರಿಯೆಗೆ ವಿರುದ್ಧವೆಂಬಂತೆ ರುಚಿಯನ್ನು ಸಹ ನೋಡದ ತನ್ನ ಗುರುವಿಗೆ ನೈವೇದ್ಯಗಳನ್ನು ಅರ್ಪಿಸುವುದೇ ಶಿವರಾಮವಧೂತನ ಗುರಿಯಾಗಿತ್ತೆಂದು ಗಮನಿಸಬಹುದು.

ಚಕ್ಕಲಿಯನ್ನು ಭದ್ರವಾಗಿ ಜೋಳಿಗೆಯಲ್ಲಿ ಕಟ್ಟಿಕೊಂಡು ಅಲ್ಲಿ ಕ್ಷಣವಾದರು ನಿಲ್ಲದೆ ಬಹಳ ಹಸಿವಿನಿಂದ ಬಳುವಿದವನಾದಾಗ್ಯೂ ಅಲ್ಲಿ ಯಾರನ್ನೂ ಅನ್ನೋದಕಗಳಿಗೆ ಪೀಡಿಸದೆ ಮಾರ್ಗಸ್ಥನಾಗಿ ಹೊರಟನು. ತುಮಕೂರಿನಿಂದ ಬರುವ ಮಾರ್ಗದಲ್ಲಿ ತುಮಕೂರಿಗೆ ಸಮೀಪವಿರುವ ಭೀಮ ಸಮುದ್ರ ಎಂಬುವ ಗ್ರಾಮಕ್ಕೆ ಬರುವುದರೊಳಗಾಗಿ ಮೂರು ದಿನಗಳಿಂದ ಅನ್ನವಿಲ್ಲದೆ ಬಹಳ ಬಳಲಿದವನಾಗಿದ್ದರು ಗುರುಕಾರ್ಯವೇ ಆತನ ಮುಂದೆ ಏಕೀಕೃತಗೊಂಡು ಪ್ರಯಾಣ ಬೆಳೆಸಿದನು. ತೀವ್ರತರವಾದ ಬಳಲಿಕೆಯಿಂದ ನಿವಾರಣೆ ಮಾಡಿಕೊಂಡು ಮುಂದಕ್ಕೆ ಹೋಗೋಣವೆಂದಾಲೋಚಿಸಿ ಊರೊಳಗೆ ಭೀಕ್ಷೆ ಬೇಡುತ್ತಾ ಹೋಗಲು ಯಾರು ತುತ್ತನ್ನವನ್ನು ನೀಡದೆ ಹಿಂದಕ್ಕೆ ತಳ್ಳುವುದನ್ನು ಸಹಿಸಿಕೊಂಡ. ಒಂದು ದೊಡ್ಡ ಮನೆಯ ಮುಂದೆ ನಿಂತು ಭಿಕ್ಷಾಂದೇಹಿ ಎಂದನಂತೆ ಅದು ಊರಿನ ಶಾನುಭೋಗರ ಮನೆಯಾಗಿತ್ತು. ಮನೆಯ ಕಾವಲುಗಾರರು ಯಾರೋ ಕಳ್ಳನಿರಬೇಕೆಂದು ಹಿಡಿದು ಕಂಬಕ್ಕೆ ಕಟ್ಟಿ ಊರಿನವರೆಲ್ಲರನ್ನು ಸೇರಿಸಿ ಬಡಿಯ ತೊಡಗಿದರು. ಅರಚಲು ಕಿರಚಲು ಶಕ್ತಿಯಿಲ್ಲವಷ್ಟು ನಿತ್ರಾಣಸ್ಥಿತಿಯಲ್ಲಿದ್ದನು. ಹೀಗೆ ನಾಲ್ಕೈದು ದಿನಗಳಾದರೂ ಆತನನ್ನು ಬಿಡದೆ ಕಳ್ಳನೆಂದು ಕಾಯುತ್ತಿದ್ದರು. ಅಯ್ಯಾ ನೀವುಗಳು ವೃಥಾ ನಿದ್ರೆಯಿಲ್ಲದೆ ಕಾಯುತ್ತಿರುವುದೇಕೆ ನಾನು ಕಳ್ಳನಲ್ಲ. ಮತ್ತೆಲ್ಲಿಯೂ ಹೋಗುವುದಿಲ್ಲ. ನಾಲ್ಕು ದಿನಗಳಿಂದ ಅನ್ನವಿಲ್ಲದೆ ಬಳಲಿಕೆಯಾಗಿದೆ. ನಿಮ್ಮಲ್ಲಿ ಯಾರಾದರೂ ಸ್ವಲ್ಪ ಅನ್ನವನ್ನು ಕೊಟ್ಟು ನನ್ನ ಬಳಲಿಕೆಯನ್ನು ನಿವಾರಣೆ ಮಾಡಿ ನಂತರ ನಿಮ್ಮ ಮನಸ್ಸಿಗೆ ಬಂದಂತೆ ಹೊಡೆದರೂ ಕಟ್ಟಿಹಾಕಿದರೂ ಮತ್ತೇನು ಮಾಡಿದರೂ ಏನನ್ನುವುದಿಲ್ಲವೆಂದು ನಿಷ್ಕಪಟತೆಯಿಂದ ನುಡಿದನು.

ಆತನ ಮುಗ್ಧತೆ ಮತ್ತು ದೀನತೆಯನ್ನು ಕಂಡು ಕಾವಲುಗಾರರು ಒಂದು ಮುದ್ದೆಯನ್ನು ಸೊಪ್ಪಿನ ಸಾರನ್ನು ತಂದುಕೊಡಲು ಊಟಮಾಡಿ ರಾತ್ರಿಯಲ್ಲಿ ಶಿವನಾಮ ಸ್ಮರಣೆಯ ಜೊತೆಗೆ ತನ್ನ ಗುರುಸ್ಮರಣೆ ಮಾಡುತ್ತಾ ಭಕ್ತಿಯ ಭಾವದೊಳಗೆ ತೇಲಾಡುವುದನ್ನು ಕಾವಲುಗಾರರು ಕಂಡು ಆಶ್ಚರ್ಯರಾದರು. ತಕ್ಷಣ ಶಾನುಭೋಗರನ್ನು ಕರೆಯಿಸಿ ನಡೆದದ್ದೆಲ್ಲವನ್ನು ತಿಳಿಸಲು ಊರಿನ ಎಲ್ಲ ಜನ ಬಂದು ವಿಚಾರಿಸಿದಾಗ ನನ್ನ ಗುರುವಿಗೆ ಚಕ್ಕಲಿ ತರಲು ಬಂದಿರುವುದಾಗಿ ಆತನ ಬಯಕೆಯನ್ನು ತೀರಿಸಬೇಕೆಂದು ತಿಳಿಸಿದನು.

ಆಗ ಊರಿನ ಹಿರಿಯರು ಆತನಿಗೆ ಎತ್ತಿನ ಬಂಡಿಯನ್ನು ಕಟ್ಟಿಸಿ ಮುಂದಿನ ಗ್ರಾಮಕ್ಕೆ ಬಿಡಲು ಅಲ್ಲಿಂದ ಕಾಲ್ನಡಿಗೆಯಲ್ಲಿ ಅನೇಕ ಕಷ್ಟನಿಷ್ಠೂರಗಳನ್ನು ಎದುರಿಸುತ್ತಾ ಚೇಳಗುರಿಕೆ ಗ್ರಾಮಕ್ಕೆ ಬಂದು ಸೇರಿದನು.

ಮೇಲಿನ ಆತನ ಕಷ್ಟರ್ಜಿತ ಸೇವೆಯನ್ನು ಅರಿತಾಗಲೇ ಗುರುವು ಎಷ್ಟು ಮಹತ್ವ ಪಡೆಯುತ್ತಾನೆ ಎಂಬುದು ಸ್ಪಷ್ಟವಾಗುತ್ತದೆ "ಗುರು ಸಂಬಂಧ ಒಂದು ಜನ್ಮದ್ದಲ್ಲ ಮಣ್ಣಾಗಿ, ಮರವಾಗಿ, ಮಿಗವಾಗಿ, ಖಗವಾಗಿ ನಾನಾ ರೂಪಗಳಲ್ಲಿ ಅನಾದಿಕಾಲದಿಂದ ಒಟ್ಟಾಗಿ ಜನ್ಮವೆತ್ತಿರಬಹುದು. ಒಬ್ಬೊಬ್ಬರೂ ಮತ್ತೊಬ್ಬರಿಗಾಗಿ ಕಾಯುತ್ತಿರಬಹುದು, ಕಾತರಿಸುತ್ತಿರಬಹುದು, ಹುಡುಕುತ್ತಿರಬಹುದು, ತಪಗೈಯುತ್ತಿರ ಬಹುದು. ಅನಂತ ವರ್ಷಗಳ ತಪಸ್ಸಿನ ನಂತರ ಶಿವನ ಕೃಪೆಯಿಂದ ನರರೂಪದಲಿ ಮೈದೋರಿ, ಸಾಧನೆಯಿಂದ, ಪ್ರಾರ್ಥನೆಯಿಂದ ಅದ್ವೈತದಲ್ಲಿ ಮುಳುಗುವ ಪುಣ್ಯಕ್ಕೆ ಭಾಗಿಯಾಗಬಹುದು. ಗುರವೇ ಶಿಷ್ಯನನ್ನು ಚರಣದ ಕಡೆ ಹೊಯ್ಯಬಹುದು". (ದೇ.ಜ.ಗೌ. ಕುವೆಂಪು ಮತ್ತು ವಿಭೂತಿ ಪುರುಷರು ಪು. ೮೩) ಎನ್ನುವಂಥಹದ್ದು ಶಿಷ್ಯವಾಗಲೀ ಪರಿಶಿಷ್ಟ ನೆಲೆಯಲ್ಲಾಗಲಿ ಗುರುವಿಗೆ ಮೊದಲು ಆದ್ಯತೆ. ಶಿಷ್ಯನ ಆತುರ ಕಾತುರಗಳು ಗುರುವನ್ನು, ಆತನ ಕರುಣೆಯ ನೆರಳನ್ನು ಬಹು ಬೇಗನೆ ಸೆಳೆಯಲು ಸಹಾಯಕವಾಗುತ್ತವೆ.

ಅರಣ್ಯಮಾರ್ಗವಾಗಿ ತಾತನ ಕ್ಷೇತ್ರಕ್ಕೆ ಬಂದು ಆತನಿಗೆ ಸಾಷ್ಟಾಂಗ ನಮಸ್ಕರಿಸಿ ಅಪ್ಪಾ ತುಮಕೂರು ಚಕ್ಕಲಿ ತಂದಿರುವೆ. ಭಕ್ಷಿಸಬೇಕೆಂದು ಮುಂದಿಡಲು ಎರ್ರಿತಾತನು 'ಕಾಶಿಗಂಗೆಯು ಬರುತ್ತಾಳೆ ತಡೆಯಯ್ಯಾ' ತಿನ್ನುವೆನೆಂದನು. ಆಗ ಶಿವರಾಮಾವಧೂತನು ಶಿವಾ ಶಿವಾ ಇಲ್ಲಿಗೆ ಕಾಶಿ ಗಂಗೆ ಬರುವುದೆಂತು. ಅನೇಕ ಕಷ್ಟಗಳನ್ನನುಭವಿಸಿ ತಂದ ಈ ಚಕ್ಕಲಿಗಳನ್ನು ಸ್ವಾಮಿಯು ಸೇವಿಸುವುದೆಂತು, ನನ್ನ ಶ್ರಮವು ನಿರರ್ಥಕವಾಯಿತಲ್ಲ ಎಂದು ಚಿಂತಿಸುತ್ತ ನಿರಂತರ ಉದಯ ಸಾಯಂಕಾಲಗಳಲ್ಲಿ ತಾತನನ್ನು ಚಕ್ಕಲಿ ತಿನ್ನುವುದೆಂದು ಪೀಡಿಸಿದನಂತೆ. ನಿಲ್ಲಯ್ಯ ಕಾಶಿಗಂಗೆ ಬರುವಳೆಂದು ಹೇಳಿ ಹದಿನೈದು ದಿನಗಳಾದವು ನಂತರ ಯಾವುದೇ ಒಬ್ಬ ಭಕ್ತನು ಕಾಶಿಗೆ ಹೋಗಿ ಗಂಗಾಸ್ನಾನವನ್ನು ಮಾಡಿ ರಜತ ಪಾತ್ರೆಯಲ್ಲಿ ಗಂಗಾ ಜಲವನ್ನು ತುಂಬಿಕೊಂಡು ಎರ್ರಿತಾತನ ದರ್ಶನಾರ್ಥಿಯಾಗಿ ಉದಯ ಕಾಲದಲ್ಲಿ ಮಠಕ್ಕೆ ಬಂದನು. ಎಲ್ಲವನ್ನೂ ಅರಿತವನಂತಿದ್ದ ತಾತನು ಏನಯ್ಯಾ ಕಾಶಿಗಂಗೆಯನ್ನು ಇತ್ತ ತೆಗೆದುಕೊಂಡು ಬಾ ಎನ್ನಲು ಶಿವರಾಮಾವಧೂತರಿಗೆ ಸಂತೊಷವಾಯಿತಂತೆ. ಅಂತಹ ನಿರ್ಮಲವಾದ ಸೇವೆ ಗೈದ ಆತನಿಗೆ ಎರ್ರಿತಾತನು ಮಸ್ತಕದ ಮೇಲೆ ಕೈಯಿಟ್ಟು 'ನೀನು ಶಿವರಾಮನಯ್ಯ ಸಾಧುಗಿರಿಗೆ ಹೋಗಯ್ಯ ನೀನಲ್ಲಿಯೇ ವಾಸಿಸಯ್ಯಾ, ನಾನಲ್ಲಿಗೆ ಬರುವೆನಯ್ಯ ಮುದ್ದೆ ಸೊಪ್ಪು ಊಟಮಾಡಿಸಯ್ಯಾ' ಎಂದು ಹೇಳಿದನಂತೆ ಅಂದಿನಿಂದಲೇ 'ಶಿವರಾಮಯ್ಯ' ನೆಂಬ ಹೆಸರು ಬಂದಿದ್ದು ಎಂದು ತಿಳಿಯುತ್ತದೆ.

### ೫.೩. ಸಿದ್ಧಲಿಂಗಪ್ಪ

ಎರ್ರಿತಾತನ ಸೇವೆಗೈದ ಶಿಷ್ಯ ಸಮೂಹದಲ್ಲಿ ಸಿದ್ಧಲಿಂಗಪ್ಪನು ಒಬ್ಬ ನಿಷ್ಠಾವಂತನಾಗಿದ್ದನು. ತಿಕ್ಕಯ್ಯನ ನಂತರ ಮಠದ ಪಾರುಪತ್ಯಗಾರನಾಗಿ ತಾತನ ಸೇವೆನ್ನೆಲ್ಲಾ ದಕ್ಷತೆಯಿಂದ ನೆರವೇರಿಸಿಕೊಂಡು ಹೋಗುವ ಜವಾಬ್ದಾರಿ ಸಿದ್ಧಲಿಂಗಪ್ಪನಿಗೆ ಬಂದಿತು. ಪ್ರಾರಂಭದಲ್ಲಿ ಗುರುವನ್ನು ಭಕ್ತಿಯ ಹಂದರದೊಳಗೆ ತೇಲಿಸಿದ.

ಅನಂತರದ ದಿನಗಳಲ್ಲಿ ಸಲಿಗೆಯಂತೆ ಇರುತ್ತಿದ್ದ ಎರ್ರಿತಾತನಿಗೆ ಹಲವು ತಮಾಷೆ ಹಾಗೂ ಕುಚೇಷ್ಟೆಗಳಿಂದ ಆತನಿಗೆ ಅವಿನಯತೆಯನ್ನು ತೋರಿಸುತ್ತಿದ್ದನು. ಮೊದ ಮೊದಲಿಗಿದ್ದ ಗೌರವ ಪೂಜಾಭಾವನೆಗಳು ಮಾಯವಾಗಿ ಅಹಂಕಾರವನ್ನು ಮೈಯೆಲ್ಲಾ ಎರಚಿಕೊಂಡವನಂತೆ ವಿಚಿತ್ರವರ್ತನೆಗಳನ್ನು ಗೈಯುತ್ತಿದ್ದನು.

ಸಿದ್ಧಲಿಂಗಪ್ಪನ ಕುರಿತ ಒಂದು ಪ್ರಸಂಗವನ್ನು ತಿಳಿದಾಗ ಅದು ಸ್ಪಷ್ಟವಾಗುತ್ತದೆ. ಸಾಮಾನ್ಯವಾಗಿ ಮಠಕ್ಕೆ ಬಂದವರೆಲ್ಲ ತಾತನಿಗೆ ನಮಸ್ಕಾರ ಮಾಡಿದಂತೆ, ತಾತನ ಸೇವೆಯಲ್ಲಿದ್ದ ಸಿದ್ಧಲಿಂಗಪ್ಪನಿಗೂ ನಮಸ್ಕಾರ ಮಾಡುತ್ತಿದ್ದರಂತೆ ಜಾತಿಯಿಂದ ಜಂಗಮನಲ್ಲದ, ಯೋಗ್ಯತೆಯಿಂದ ಯೋಗಿಯಲ್ಲದ ಈ ಸಿದ್ಧಲಿಂಗಪ್ಪನು ಮಠದಯ್ಯನಂತೆ, ಮಹಾ ಮಹೇಶ್ವರಾಚಾರ್ಯರಂತೆ ಕಾಲಿಗೆ ನಮಸ್ಕಾರ ಮಾಡಿಸಿಕೊಳ್ಳುತ್ತಿದ್ದನು. ಮೇಲಿನ ಜಾತಿಯವರೆ ನಮಸ್ಕಾರಕ್ಕಾಗಲೀ, ಪೂಜೆಗಾಗಲೀ ಅರ್ಹನೆಂಬುವುದು ಪ್ರಸ್ತುತ ಅಧ್ಯಯನದ ವಾದವಲ್ಲ. ಆ ಕಾಲದ ವಸ್ತುಸ್ಥಿತಿಗಳು ವಿಲ ವಿಲನೆ ಒದ್ದಾಡುತ್ತಿದ್ದ ಕಗ್ಗತ್ತಲೆಯ ಕಾಲ ಅದು. ಈ ನೆಲದಲ್ಲಿ ಅದರ ಕ್ರೌರ್ಯ ಇನ್ನಷ್ಟು ಭೀಕರ ಸ್ವರೂಪ ಪಡೆದಿತ್ತೆಂದು ಹೇಳಬಹುದು. ಇಂದಿನ ದಿನಗಳಲ್ಲಿ ಸಂಪೂರ್ಣ ಬದಲಾವಣೆ ಅಲ್ಲದಿದ್ದರೂ, ಅದರ ತೀವ್ರತೆ ಸ್ವಲ್ಪ ಕಡಿಮೆ ಎನ್ನಬಹುದು.

ಅಂತಹ ಸಂಕೀರ್ಣ ಮತ್ತು ಸಂದಿಗ್ಧ ಪರಿಸ್ಥಿಯಲ್ಲಿ ಸಿದ್ಧಲಿಂಗಪ್ಪನು ಮೂಲತಃ ಯಾವ ಸಮುದಾಯಕ್ಕೆ ಸೇರಿದವನು ಎಂಬುದು ಯಾವ ಆಧಾರಗಳಲ್ಲಿಯೂ ದಾಖಲಾಗಿಲ್ಲ. ಆತನ ವಿಚಿತ್ರ ರೀತಿಯ ಅಹಂಭಾವದ ಮನಸ್ಥಿತಿಯನ್ನು ಅರಿತ ಎರ್ರಿತಾತನು "ಕಾಲು ಹೋಗ್ತಾವೆ ಕಾಲುಹೋಗ್ತಾವೆ" ಎಂದರಂತೆ ಒಂದೆರೆಡು ಸಲ (ಚನ್ನಬಸವೇಶ್ವರ ಬ.ವ. ಶ್ರೀ ಎರ್ರಿಸ್ವಾಮಿಗಳ ಲೀಲಾವಿಲಾಸ ಪು. ೪೯) ಅಹಂವೆಂಬುದು ಕೆಲವು ಸಲ ವಿನಾಶವನ್ನು ತಂದೊಡ್ಡುತ್ತದೆ. ಎಂಬುದನ್ನೆ ಅಷ್ಟಾಗಿ ಪರಿಗಣಿಸದ ಆತನು ಅರಿತೋ ಅರಿಯದೆಯೋ ಕಾಲಗೆರಗುತ್ತಿದ್ದ ಭಕ್ತರಿಗೆ ಕಾಲು ಜೋಡಿಸುತ್ತಿದ್ದನು. ಗುರುವಾಜ್ಞೆ ಮೀರಿದವರಿಗೆ ಆಗುವ ಅನಾಹುತಗಳು ಆತನಿಗೆ ಅಷ್ಟಾಗಿ ಮನವರಿಕೆಯಾಗಿಲ್ಲ. ಮನಸ್ಸಿಚ್ಛೆಯನ್ನು ಪೂರೈಸುವುದು ಇಹದ ಲೌಕಿಕಾನುಭವಗಳು ಸುತ್ತುವರೆದು ತರಣಿಯ ಹುಳು ತನ್ನ ಸ್ನೇಹದಿಂದ ಮನೆಯ ಮಾಡಿ ತನ್ನ ನೂಲು ಸುತ್ತಿ ಸುತ್ತಿಸಾವ ತೆರವಂತೆ ಎನ್ನುವ ಸಾರವತ್ತಾದ ವಚನದಂತೆ ಕೊನೆಗೆ ಒಂದು ದಿನ ಎರ್ರಿತಾತನು ಸಿದ್ಧಲಿಂಗಪ್ಪನಿಗೆ ಶಾಪವಿತ್ತನು.

ಅದೊಂದು ಸಿದ್ಧಲಿಂಗನ ಬದುಕಿನೊಳಗೆ ಬರಬಾರದ ದುರ್ದಿನವಾಗಿತ್ತು. ಯಥಾ ಪ್ರಕಾರ ತಾತನಿಗೆ ಸ್ನಾನ ಮಾಡಿಸಿ ಉಡಿಗೆ ಉಡಿಸುತ್ತಿದ್ದನು. 'ಅತಿಪರಿಚಯಾದವ ಜ್ಞಾಭವತಿ' ಎಂಬಂತೆ "ಬೊಜ್ಜು ಬಂತು ಎಂದನಂತೆ" ಬೆಳೆಯುತ್ತಿದ ಅವನ ಅಹಂಕಾರವನ್ನು ಸೂಕ್ಷ್ಮವಾಗಿ ಗಮನಿಸುತ್ತಲೇ ಇದ್ದ ಎರ್ರಿತಾತನು ಸಿಟ್ಟಿಗೆದ್ದು ಸೂಳೇ ಮಗನೇ ಗೇಲಿ ಮಾಡ್ತೀಯಾ ಗೋಲೀಲಿ ಸುಟ್ಟೆನು ಎಂದರಂತೆ (ಚನ್ನಬಸವೇಶ್ವರ ಸಿ.ವ. ಎರ್ರಿಸ್ವಾಮಿಗಳ ಲೀಲಾವಿಲಾಸ) 'ಸೋಹಂ ಭಾವಕ್ಕಿಂತ ದಾಸೋಹಂ' ಭಾವದಿಂದ ಮುಮುಕ್ಷುವು ಬೇಗನೇ ಮೇಲೇರ ಬಲ್ಲ. 'ದಾಸೋಹ' ಭಾವ, ಕೃತಜ್ಞತೆ, ವಿನಯತೆ, ದೀನತೆ ಅಳವಡಿಸಿಕೊಳ್ಳದ ಶಿಷ್ಯ ಬಲು ಬೇಗನೇ ಪತನಗೊಳ್ಳುವನು. ಸತ್ವಪೂರ್ಣನಾಗಿ ಸಾಧನೆಯಲ್ಲಿ ಸಾಗಿದಾಗ ಅವನ ಬುದುಕು

ಗಾಳಿಯ ಪಟದಂತೆ ಮೇಲಿರುವುದು. ಅಲ್ಲಿ ದೈವೀಶಾಲಿಯೇ ಗಾಳಿಪಟವನ್ನು ಹಿಡಿದ ಕೈ ದೈವಿ ಕಾರುಣ್ಯವೇ ಹಗ್ಗ. ಗುರುವೇ ಶಿಷ್ಯನೆಂಬ ಗಾಳಿಪಟವನ್ನು ಸಮತೋಲನದಲ್ಲಿಡಲು ಬಾಲಂಗೋಸಿ. ಎಲ್ಲವೂ ಸೇರಿಯೇ ಶಿಷ್ಯನೆಂದು ಗಾಳಿಪಟ ಆಧ್ಯಾತ್ಮದ ಆಗಸದಲ್ಲಿ ಸಂಚರಿಸುತ್ತದೆ. ಶಿಷ್ಯನೆಂಬುವನು ಬಹಳ ಎಚ್ಚರದಿಂದ ಹಾರಬೇಕಾಗುತ್ತದೆ. ಗುರುವಾಗಲೀ ದೈವವಾಗಲೀ ಕೈ ಬಿಟ್ಟರೆ ಸೂತ್ರವು ಹರಿದು ಶಿಷ್ಯನೆಂಬ ಗಾಳಿಪಟ ಗೋತ ಹೊಡೆಯದಿರದು. ಎಲ್ಲರ ಕಣ್ಣಿಗೆ ಕಾಣುವುದು ಗಾಳಿಪಟವೇ ಆದರೂ ಅದರ ಹಿಂದೆ ಇಷ್ಟೆಲ್ಲ ಶಕ್ತಿಗಳು ಕೆಲಸ ಮಾಡದೆ ಇರವು. ಇದಾವ ವಸ್ತುಗಳ ನೆರವಿಲ್ಲದೆ ತಾನು ಹಾರಾಡಬೇಕೆಂದು ಅಹಂಭಾವದಿಂದ ಹೊರಟ ಶಿಷ್ಯನ ಪಾಡಾದರೂ ಇದೇ ಆಗುವುದು.

ಕೆಲವು ದಿನಗಳು ಕಳೆದ ಮೇಲೆ ರೆವಿನ್ಯೂ ಅಧಿಕಾರಿಗಳು ಜಮಾ ಬಂದಿಗೆಂದು ಬಂದು ಮಠದಲ್ಲಿಯೇ ವಸತಿ ಮಾಡಿದ್ದರು. ಅವರಲ್ಲಿದ್ದ ಬಾರು ಮಾಡಿದ್ದ ಬಂದೂಕು ಒಂದು ಮೂಲೆಯಲ್ಲಿ ಒರಗಿಸಲ್ಪಟ್ಟಿತ್ತು. ಅಜಾಗರೂಕತೆಯಿಂದ ಅದನ್ನು ಯಾರೋ ತಡವಿದ್ದರಿಂದ ಅದರ ಗುಂಡು ಹಾರಿ ಜನರ ಮಧ್ಯದಲ್ಲಿದ್ದ ಸಿದ್ಧಲಿಂಗಪ್ಪನವರು ಕಾಲಿಗೆ ತಗುಲಿತು. ಅನಿರೀಕ್ಷಿತವಾಗಿ ಎರ್ರಿತಾತನ ಮಾತಿನಂತೆ ಕಾಲು ಹೋಯಿತು. ಪವಾಡ ಪುರುಷ ಬಳಿಯಲ್ಲಿ ಕುವ್ಯಾಡ ನಡೆಯಲಾರದು. ಅನಧಿಕಾರಿಗಳು ಅಹಂಕರಿಸಿ ಅಧಿಕಾರಿಗಳಂತೆ ವರ್ತಿಸಬಾರದು. "ಹಾವಿನ ಹೆಡೆಯ ಕೊಂಡು ಕನ್ನೆಯ ತುರಿಸಿಕೊಂಬಂತೆ, ಉರಿಯ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕು ಬಿಡಿಸಿಕೊಂಬಂತೆ, ಹುಲಿಯ ಮೀಸೆಯ ಹಿಡಿದುಕೊಂಡು ಉಯ್ಯಾಲೆಯನ್ನಾಡುವಂತೆ ಕೂಡಲ ಸಂಗನ ಶರಣನೊಡನೆ ಸರಸವಾಡಿದರೆ ಸುಣ್ಣದಕಲ್ಲ ಮಡಿಲಲ್ಲಿ ಕಟ್ಟಿಕೊಂಡು ಮಡುವಿನಲ್ಲಿ ಬಿದ್ದಂತೆ" ಎಂಬ ಸೂಳ್ನುಡಿಯು ಸಿದ್ಧಲಿಂಗಪ್ಪನ ಬಾಳಲ್ಲಿ ನಡೆಯಿತು.

ಗುರುಶಿಷ್ಯರ ಸಂಬಂಧ ಶಿಲ್ಪಿ ಶಿಲ್ಪದ ಸಂಬಂಧ. ಗುರುವು ಶಿಷ್ಯನಲ್ಲಿರುವ ಒಂದು ಪ್ರತಿಭೆಯನ್ನು ಗುರುತಿಸಿ, ಶಿಲ್ಪಿ ಕಲ್ಲಿನಲ್ಲಿ ಒಂದು ಚಿತ್ರದ ರೂಪುರೇಷೆ ಹಾಕಿಕೊಳ್ಳುವಂತೆ ಅದನ್ನು ಪ್ರಕಟಗೊಳಿಸುವಂತೆ ಸಂಸ್ಕರಿಸುತ್ತಾ ಹೋಗುವನು. ಕೆಲವೊಮ್ಮೆ ಅವನ ಆಯ್ಕೆ ತಪ್ಪಾಗುತ್ತದೆ. ಒಂದು ಹಿಟ್ಟುಗಲ್ಲನೋ, ಕಠಿಣ ಶಿಲೆಯನ್ನೋ ತೆಗೆದುಕೊಂಡು ಬಿಟ್ಟಿರುತ್ತಾನೆ. ಅದು ಕಟೆಸಿಕೊಳ್ಳುವ ಕಲ್ಲಾಗದೆ ಪುಡಿ ಪುಡಿಯಾಗುತ್ತದೆ. ಅದೇ ಕಲ್ಲಿನ ಚೂರು ಕಣ್ಣಿಗೆ ಬಡಿದು ಬಾಧೆಯನ್ನು ಕೊಡುತ್ತದೆ. ಸಿದ್ಧಲಿಂಗಪ್ಪನ ವರ್ತನೆಯು ಅದಕ್ಕೆ ಸಾಕ್ಷಿಯಾಗಿದೆ. ಹಾಗೆಯೇ ರಜೋಗುಣ ಪ್ರವೃತ್ತಿಯ ಚಂಚಲ ಮನಸ್ಕನಾದ ದುರ್ಬಲ ಶಿಷ್ಯನು ಹಿಟ್ಟಿಗಲ್ಲಿನಂತೆ ಪುಡಿಯಾಗುವುದು ಮಾತ್ರವಲ್ಲ, ಕಟೆಯುವ ಕಲಾವಿದನಿಗೂ ಬಾಧೆಕೊಡುವನು. ಕಠಿಣ ಶಿಲೆಯಾದರೆ ಶಿಲ್ಪಿ ನೀರಿಕ್ಷಿಸಿದಷ್ಟು ಸುಂದರ ಕಲಾಕೃತಿಯಾಗದೆ, ಒರಟಾದ ಮೂರ್ತಿಯಾಗುತ್ತದೆ. ಅದರಂತೆ ಶಿಷ್ಯನು ತೀಕ್ಷ್ಣಮತಿಯೂ, ಸದೃಢ ಮನುಷ್ಯನೂ ಆಗಿರದಿದ್ದರೆ ಪರಿಪೂರ್ಣ ಶಿಲ್ಪವಾಗದಿದ್ದರೂ ಪರವಾಗಿಲ್ಲ ಎಂಬಷ್ಟು ಆಗಿಬಿಡುತ್ತಾನೆ. ಶಿಲ್ಪಿಯ ಯೋಜನೆಗೆ ತಕ್ಕಂತೆ ಅದು ವಿಧೇಯವಾಗಿ ರೂಪಗೊಳ್ಳುತ್ತದೆ. ಅದರಲ್ಲಿರುವ ಸ್ವಭಾವವೂ ತಾತ್ವಿಕವೂ ಸದೃಢವೂ ಅಷ್ಟೇ ಪ್ರಕಾರವಾಗಿರುತ್ತದೆ.

ಗುರುವು ತನ್ನ ಸಂಕಲ್ಪನುಗುಣವಾಗಿ ಅದನ್ನೆ ಮೂರ್ತಿಗೊಳಿಸಿ, ಸಮಾಜದಲ್ಲಿ ಪ್ರತಿಷ್ಠಾಪಿಸಿದಾಗ ಅವನ ಭಾಗ್ಯಕ್ಕೆ ಎಣೆಯಿಲ್ಲ, ಸಂತೋಷಕ್ಕೆ ಪಾರವಿಲ್ಲ. ಅಂತಹ ಶಿಲ್ಪವನ್ನು ಕಟೆದಿಟ್ಟ ಗುರುವು ಕೀರ್ತಿಗೆ

ಭಾಜನನಾಗುವನು. ಗುರುವಿನ ಕಟೆಯುವ ಪ್ರತಿಭೆ ಅತೀಮುಖ್ಯ. ಆದರೂ ಕಟೆಸಿಕೊಳ್ಳುವ ಶಿಷ್ಯನಲ್ಲಿ ಅಂಥಶಕ್ತಿ, ಸಹಿಸಿಕೊಳ್ಳುವ ತಾಳ್ಮೆ ಅದಕ್ಕೆ ಅಲ್ಲಮ ಪ್ರಭು 'ಗುರುವೂ ಇದ್ದಾನೆ ಶಿಷ್ಯನೂ ಇದ್ದಾನೆ. ಶಿಷ್ಯನಲ್ಲಿ ಜ್ಞಾನೋದಯವಾಗದಿದ್ದರೆ ಪ್ರಯೋಜನವೇನು ಎನ್ನುವಂತಹ ಮಾತಿನಲ್ಲಿ ನೈಜತೆ ಹಾಗೂ ಸಹಜತೆಯು ಗುರು ಶಿಷ್ಯರ ಸಂಗಕ್ಕೆ ಹತ್ತಿರವಾದ ಭಾವವನ್ನು ನೀಡುತ್ತದೆ.

**೫.೪. ನಿರಂಜನ ಸ್ವಾಮಿಗಳು**

ಎರ್ರಿತಾತನ ಶಿಷ್ಯ ಸಂಕುಲದಲ್ಲಿ ದರ್ಶನದ ಮೂಲಕ ಆತನ ಸೇವೆಗೆಂದು ಕರೆಯಲ್ಪಟ್ಟ ಶಿಷ್ಯನೇ ಈ ನಿರಂಜನ ಸ್ವಾಮಿ. ಈತನ ಕುರಿತ ಬಹು ಮುಖ್ಯವಾದ ಐತಿಹ್ಯವೊಂದು ಹೀಗಿದೆ. ಕೆಲವು ಸನ್ಯಾಸಿಗಳೊಂದಿಗೆ ಉಳವಿಗೆ ಇನ್ನು ಜಾತ್ರೆ ಒಂದೆರಡು ತಿಂಗಳು ಮುಂಚೆ ಇರಲಿಕ್ಕೆ ಹೋದರಂತೆ. ಅದೇ ಸಮಯಕ್ಕೆ ಬೆಳಗಾವಿ ಮಠದ ಸ್ವಾಮಿಗಳೊಬ್ಬರು ಬಂದರಂತೆ. ಅವರು ನಿರಂಜನ ಸ್ವಾಮಿಗಳನ್ನು ತಮ್ಮ ತರುವಾಯ ತಮ್ಮ ಮಠಕ್ಕೆ ಉತ್ತರಾಧಿಕಾರಿಗಳಾಗಬೇಕೆಂದು ಕೇಳುವಾಗ ಅದಕ್ಕೆ ಅವರು "ಚನ್ನ ಬಸವೇಶ್ವರನ ಅನುಗ್ರಹ ಹೇಗಿದೆಯೋ ನಾನು ಬೆಳಿಗ್ಗೆ ತಿಳಿಸುವೆನೆಂದು ಹೇಳಿ ದೇವಸ್ಥಾನದೊಳಗೆ ಹೋಗಿ ಬಾಗಿಲು ಮುಚ್ಚಿ ಹೆಚ್ಚು ಚಳಿಯಿದ್ದುದರಿಂದ ತುಂಬಾ ಕಂಬಳಿ ಹೊದೆದು ಮಲಗಿಬಿಟ್ಟರಂತೆ. ಯಾರೋ ಹಠಾತ್ತನೆ ಬಾಗಿಲು ನೂಕಿದಂತಾಗಿ" ನಾನು ಅಲ್ಲಿದ್ದೇನೆ. 'ನೀನೂ ಅಲ್ಲಿಗೆ ಬಾ' ಎಂದು ಶಬ್ದಕೇಳಿಸಿದಂತೆ. ಎದ್ದು ಕದ ತೆಗೆದು ನೋಡಿದಾಗ ಯಾರೂ ಇರಲಿಲ್ಲ. ಅಲ್ಲಿಂದ ಹೊರಟು ಬಳ್ಳಾರಿಗೆ ಬಂದಾಗ ತಾತನವರ ವಿಷಯ ಕೇಳಿ ದರ್ಶನಕ್ಕೆಂದು ಚೇಳಗುರಿಕೆಗೆ ಬಂದರಂತೆ ನಿರಂಜನ ಸ್ವಾಮಿಗಳು. ಚೇಳುಗುರಿಕೆಯಲ್ಲಿ ಒಂದೆರಡು ದಿನಗಳ ತರುವಾಯ ಒಮ್ಮೆ ಸಾಷ್ಟಾಂಗ ನಮಸ್ಕಾರ ಮಾಡುತ್ತಿದ್ದಾಗ "ಆ ರಾತ್ರಿ ಉಳಿವಿಯಲ್ಲಿದ್ದ ನಿನ್ನನ್ನು ಇಲ್ಲಿಗೆ ಬರಬೇಕೆಂದು ಕರೆದವನು ನಾನೇ. ನನ್ನಲ್ಲಿ ನಿನ್ನ ಸೊತ್ತುಗಟ್ಟಿಗೆ ತೆಗೆದುಕೋ ಎಂದು ಆಶೀರ್ವದಿಸಿದರಂತೆ". (ಚನ್ನ ಬಸವೇಶ್ವರ ಸಿ.ವ. ಚೇಳಗುರಿಕೆ ಎರ್ರಿಸ್ವಾಮಿಗಳ ಲೀಲಾವಿಲಾಸ ಪು. ೭೦) ಅಲೌಕಿಕ ಮಾತುಗಳಿಗೆ ಅವರ ಆಂತರ್ಯದಲ್ಲಿ ಒಂದಾಗಿರುವವರಿಗೆ ಮಾತ್ರ ಅರ್ಥವಾದೀತು. ಸಾಮಾನ್ಯ ಮನುಜರಿಗೆ ಅದರ ಅರ್ಥವಾಗುವುದೆಂತು. ಆದ್ದರಿಂದಲೇ ಆ ಸೂತ್ರಗಳು ಯಾವುವು? ಕೊಡು ಕೊಳ್ಳುವಿಕೆಗಳ ಸಮನ್ವಯತೆ ಬಗೆಗೆ ಯಾವೊಂದು ಉತ್ತರಗಳು ಸಿಗುವುದಿಲ್ಲ.

ಮಹಾತ್ಮರಾಗಲೀ, ಅದ್ವಿತೀಯರಾಗಲಿ ಮುನಿಸಿಕೊಂಡರೆ ಇಡೀ ಪ್ರಕೃತಿ, ಅಷ್ಟೇ ಅಲ್ಲ ಮನುಜ ಕುಲವೇ ನಡುಗಿ ಅಲ್ಲೋಲ ಕಲ್ಲೋಲವಾಗುವುದರಲ್ಲಿ ಯಾವ ಸಂಶಯವಿಲ್ಲ. ಕೆಲವು ಪುರಾಣ ಐತಿಹ್ಯಗಳಲ್ಲಿ ದೈವತ್ವದ ಪರಿಕಲ್ಪನೆಗಳಲ್ಲಿ ಈ ರೀತಿಯ ಅವಗಡಗಳು ಸಂಭವಿಸಿರುವುದು ತಿಳಿದುಬರುತ್ತದೆ. ಅವುಗಳು ಸತ್ಯವೋ ಅಸತ್ಯವೋ ಎಂಬುದರ ವಿವೇಚನೆಗೆ ಬೌದ್ಧಿಕ ಜಗತ್ತು 'ಊಹು' ಎನ್ನುವುದಕ್ಕಿಂತ 'ಊ' ಎನ್ನುವುದೇ ಹೆಚ್ಚು. ಅದು ನೇರವಾಗಿ ಇಲ್ಲವೇ, ತುಮುಲಗಳ ಒತ್ತಡ ಒತ್ತಾಯಕ್ಕೂ ಮಣಿದಿರುವದಂತೂ ಕಟು ಸತ್ಯ. ಬಾಹ್ಯವಾಗಿ ಅದನ್ನೆ ತಿರಸ್ಕರಿಸಿದಾಗ ಬಿಂಬದೊಳ ಪ್ರಾಣ ಮಾತ್ರ ಡುಬುಡುಬು ಎಂದು ಬಡಿದುಕೊಳ್ಳುತ್ತದೆ.

ನಿರಂಜನ ಸ್ವಾಮಿಗಳ ಕುರಿತಾಹ ಒಂದು ಸ್ವಾರಸ್ಯಕರ ಪ್ರಸಂಗವಿದೆ. ಭಕ್ತಾದಿಗಳು ತಮ್ಮ ಬೇಡಿಕೆಗಳು ಈಡೇರಿದಂತೆ ಹಲವು ಹರಕೆಗಳನ್ನು ಸಲ್ಲಿಸುವುದು ಸಾಮಾನ್ಯ ಅವುಗಳು ಹಣದರೂಪದಲ್ಲಾಗಲೀ, ದವಸಧಾನ್ಯದ ರೂಪದಲ್ಲಾಗಲೀ ಇಲ್ಲವೇ ವಸ್ತ್ರದ ರೂಪದಲ್ಲಾಗಲೀ ತಾವು ಅಂದುಕೊಂಡ ದೈವದ ಸನ್ನಿಧಿಯಲ್ಲಿ ಸಮರ್ಪಿಸುತ್ತಾರೆ. ಅದು ಅವರವರ ಶಕ್ತ್ಯಾನುಸಾರ ಮತ್ತು ಭಕ್ತ್ಯನುಸಾರವಾಗಿರುತ್ತದೆ. ಅದರಂತೆಯೇ ಎಳ್ರಿತಾತನ ಭಕ್ತರೊಬ್ಬರು ಆತನು ತಮ್ಮ ಇಚ್ಛೆ ನೆರವೇರಿಸಿದನೆಂದು ರೇಷ್ಮೆ ಮಡಿಯನ್ನು ತಂದು ಉಡಿಸಿದರಂತೆ. ಅಲ್ಲಿಯೇ ಸೇವೆ ಮಾಡುತ್ತಿದ್ದ ನಿರಂಜನ ಸ್ವಾಮಿಗಳಿಗೆ ಅದರ ಬಗೆಗೆ ವ್ಯಾಮೋಹವುಂಟಾಗಿ ತನಗೂ ಬೇಕೆಂಬುದಾಗಿ ಕೇಳಿದಾಗ ಅದಕ್ಕೆ ಆತನು 'ನೀನು ಬೆತ್ತಲೆಯಿರು' ಎಂದು ಕೋಪದಿಂದ ನುಡಿದರು. ಅದರ ಪರಿಣಾಮವಾಗಿಯೇ ನಿರಂಜನ ಸ್ವಾಮಿಗಳ ಮನಸ್ಸು ಹಿಡಿತದಿಂದ ತಪ್ಪಿ ವಿಕಾರಕ್ಕೂ ಒಳಗಾಗಿ ಬಟ್ಟೆಯಿಲ್ಲದೆ, ಬಹಳ ದಿನಗಳ ನಂತರ ಅದು ತಾತನವರ ಅನುಗ್ರಹದಿಂದಲೇ ಮತ್ತು ಮನಸ್ಸು ಸ್ಥಿಮಿತಕ್ಕೆ ಬಂದಾಗ ವಸ್ತ್ರಧರಿಸಿದರು. ನಿರಂಜನ ಎಂದರೆ ಯಾವುದೇ ಇಹಲೋಕದ ವ್ಯಾಮೋಹಕ್ಕಾಗಲೀ, ಆಸೆ ಅತ್ಯಾಸೆಗಳಿಗಾಗಲಿ ಒಳಗಾಗದವನು ಎಂದರ್ಥ. ಆದರೆ ನಿನಗೆ ಹೊರಗಿನ ರಂಜನಿಯ ಕಡೆ ದೃಷ್ಟಿನೆಡುವುದೇಕೆ? ಎಂದು ಎಳ್ರಿತಾತನು ಈ ರೀತಿಯಾಗಿ ನುಡಿದನೆಂದು ಹಲವು ಐತಿಹ್ಯಗಳ ತಿಳಿಸುತ್ತವೆ.

### ೫.೫. ಎ.ಜಿ.ಶ್ಯಾಮಣ್ಣ ಮತ್ತು ಜೋಳದರಾಶಿ ದೊಡ್ಡನ ಗೌಡರು

ಎಲ್ಲವನ್ನು ತೊರೆದು ಎಳ್ರಿತಾತನ ಸೇವೆ ಮಾಡಿದವರು ಹಲವರಾದರೆ, ಇನ್ನು ಕೆಲವರು ಸಂಸಾರದಲ್ಲಿದ್ದುಕೊಂಡೇ ಆತನ ಸೇವೆಮಾಡಿದವರಲ್ಲಿ ಬೆಂಗಳೂರಿನ ಶ್ಯಾಮಣ್ಣ ಮತ್ತು ಜೋಳದರಾಶಿ ದೊಡ್ಡನಗೌಡರು ಮುಖ್ಯರಾಗುತ್ತಾರೆ. ಸೇವೆಯೆಂಬುದಾಗಲಿ, ಭಕ್ತಿಯೆಂಬುದಾಗಲಿ ತೋರಿಕೆಯ ಸಂಕೇತವಲ್ಲ, ಅದು ಅಂತರಂಗದ ಅಲಂಕಾರ ಮತ್ತು ಅಂತರಂಗದ ಆನಂದವಾಗಿರುತ್ತವೆ. ಅದು ಫಲಾಪೇಕ್ಷಿತ ಮನಸ್ಥಿತಿಗಿಂತ ತೀರಾ ಭಿನ್ನವಾಗಿರುತ್ತವೆ. ಲೌಕಿಕ ಅಲೌಕಿಕಗಳ ಪಾರಮಾರ್ಥಿಕ ಬದುಕಿನ ಸಾರತೆಯನ್ನು ಅರಿಯಲು ಸೇವೆಯೆಂಬುದು ಮೊದಲ ಮೆಟ್ಟಿಲು ಎಂಬುದನ್ನೇ ಮೊದಲು ಅರಿತವರಂತೆ ಎಳ್ರಿತಾತನ ಸೇವೆಗೆ ಪ್ರತ್ಯೇಕ್ಷ ಪರೋಕ್ಷವಾದ ಸಹಾಯ ಸಹಕಾರವನ್ನು ಮಾಡಿದವರು. ಅವರ ಸೇವಾನಿಷ್ಠೆಯ ಫಲವಾಗಿಯೇ ಮಠವು ಇಂದು ಹಲವು ರಾಜ್ಯಗಳಿಂದ ಭಕ್ತರನ್ನು ಸೆಳೆಯುತ್ತಿದೆ. ಈಗಿನ ಮಠದ ಎಲ್ಲಾ ಕಾರ್ಯಕ್ರಮಗಳನ್ನೆ ಅವರು ಹಾಕಿಕೊಟ್ಟ ಮಾರ್ಗದಲ್ಲಿಯೇ ಸಾಗಿಸಿಕೊಡು ಬಂದಿರುವುದಾಗಿ ಮಠದ ಹಿರಿಯರೊಬ್ಬರು ಕ್ಷೇತ್ರಕಾರ್ಯಕ್ಕೆ ಹೋದಾಗ ನೀಡಿದ ಮಾಹಿತಿಯಿಂದ ತಿಳಿದು ಬಂದಿದೆ.

ಶ್ಯಾಮಣ್ಣನವರು ಮೂಲತಃ ಬೆಂಗಳೂರಿನವರಾಗಿದ್ದು ಅಂದಿನಕಾಲಕ್ಕೆ ಶ್ರೀಮಂತ ವ್ಯಾಪಾರಿಗಳು. "ಯಾವ ಮೋಹನ ಮುರಳಿ ಕರೆಯಿತೋ ದೂರತೀರಕೆ ನಿನ್ನನು ಯಾವ ಬೃಂದಾವನವು ಸೆಳೆಯಿತೋ ನಿನ್ನ ಮಣ್ಣಿನ ಕಣ್ಣನು, ಇರುವದೆಲ್ಲದ ಬಿಟ್ಟು ಇಲ್ಲದುದರ ಕಡೆಗೆ ನಡೆಯುವುದೇ ಜೀವನ". ಎಂಬಂತಹ ಸಾರವನ್ನು ಹೊತ್ತವರಂತೆ ಬರಗಾಲ ಪ್ರದೇಶವಾದ ಚೇಳಗುರಿಕೆಗೆ ಬಂದು ಎಲ್ಲಾವನ್ನು ಒದಗಿಸಬಲ್ಲೆ ಎಂಬ ನಂಬಿಕೆಯಿಂದ ಎಳ್ರಿತಾತನ ಸೇವೆಯಲ್ಲಿ ನಿರತನಾದನು.

ತನ್ನತನದ ಮೋಹದಿಂದ, ಮನೆಯಿಂದ ಜಾರಿದವರಾಗಿ ಬೆಂಗಳೂರನ್ನು ಬಿಟ್ಟರು. ಅವರ ಜೀವನದ ಆಂತರ್ಯದಲ್ಲಿ ದಿನ ದಿನ ಬದಲಾವಣೆಗಳು ಆವರಿಸಿದಂತೆಲ್ಲ ಪ್ರತಿಯೊಂದನ್ನು ವಿವೇಚಿಸುವುದರ ಜೊತೆಗೆ ಅವುಗಳು ಶಾಶ್ವತವೇ? ಎನ್ನುವಂತಹ ಅನುಮಾನಗಳು ಅವರನ್ನು ನಿದ್ದೆಗೆಡಿಸಿದ್ದವು. ಕೊನೆಗೆ ಕೈಲಾಸವಾಸಿಗಳಾಗಿ, ಎಲ್ರಿತಾತನ ಸಾನ್ನಿಧ್ಯದಲ್ಲಿಯೇ ಸಮಾಧಿಸ್ಥರಾಗುವ ಪುಣ್ಯ ಪಡೆಯುವಂತ ಭಾಗ್ಯ ಆತನ ಯಥಾರ್ಥ ಸೇವೆಯಿಂದಲೇ ಎಂಬುದು ಮನದಟ್ಟಾಗುತ್ತದೆ. ತಿಕ್ಕಯ್ಯನು ಕಟ್ಟಿಸಿದ ಮೂಲಮಠಕ್ಕೆ ವಿಸ್ತರಣಾ, ಅನುಗುಣವಾದ ಅಲಂಕರಣ, ವೈಭವೋಪೇತವಾದ ಅರ್ಚನ, ಭಕ್ತರಿಗೆ ಅನ್ನೋದಕಗಳ ಅರ್ಪಣ ಇವುಗಳನ್ನೆಲ್ಲಾ ಯೋಚಿಸಿ ನಿಯೋಜಿಸಿದ ನಿಷ್ಠಾವಂತರು. ದೇಶದ ನಾನಾ ಭಾಗಗಳಲ್ಲಿ ಸುತ್ತಾಡಿ ಭಕ್ತರಿಂದ ಸಂಗ್ರಹಿಸಿದ ದುಡ್ಡನ್ನು ಮಠದ ಅಭಿವೃದ್ಧಿಗಾಗಿ ಉಪಯೋಗಿಸಿದ್ದರು. "ಮತ್ತೆ ತಿಕ್ಕಯ್ಯನವರು ಬರ್ತಾರೆ" ಎಂದು ಒಂದು ಸಲ ಶಾಮಣ್ಣನವರಂದರು. ಅದಕ್ಕೆ ದೊಡ್ಡನಗೌಡರು ಬರ್ತಾರೆ ಅನ್ನೋದೇಕೆ ಬಂದಾರೆ! ತಿಕ್ಕಯ್ಯನವರು ಶಾಮಣ್ಣನ ರೂಪದಿಂದ ಬಂದಾರೆ! ಆಗ ಮಾಡಬೇಕೆಂದುಕೊಂಡದ್ದನ್ನೆಲ್ಲಾ ಈಗ ಮಾಡ್ತಾ ಇದ್ದಾರೆ. (ಅದೇ ಪುಟ. ೮೫) ಎನ್ನುವ ಮಾತು ನಿಜವಾದಂತಾಗಿದೆ. ಎಲ್ರಿತಾತನ ಕುರಿತು ಆತನಿಗಿದ್ದ ಭಕ್ತಿ ಹಿಮ್ಮಡಿಗೊಳುತ್ತಾ ಭಕ್ತಿಯು ಪರಾಕಾಷ್ಠೆಗೆ ತಲುಪಿತು.

ಶ್ಯಾಮಣ್ಣನವರು ನಂತರದ ದಿನಗಳಲ್ಲಿ ಎಲ್ರಿತಾತನ ಪೂರ್ವಜೀವನದ ಐತಿಹ್ಯಗಳನ್ನು ಅರಿಯಲು ಬಹಳ ಶ್ರಮಪಟ್ಟರು. ಅಂಥಹ ಐತಿಹ್ಯಗಳ ಹುಡುಕಾಟ ಮತ್ತು ತಾಕಲಾಟಗಳಿಗೆ ಸಿಡಗಿನಮೋಳೆ ಶ್ರೀ ವೈ.ಯಂ ಚಂದ್ರಯ್ಯನವರನ್ನು ನೇಮಿಸಿದರು. ಕ್ಷೇತ್ರಕಾರ್ಯಕ್ಕೆ ಎಲ್ಲಾ ರೀತಿಯ ಅನುಕೂಲಗಳನ್ನು ಸ್ವತಃ ಶ್ಯಾಮಣ್ಣನವರೇ ಮಾಡಿದರು. ಎಲ್ರಿತಾತನು ಬಾಲ್ಯದಿಂದ ಹಿಡಿದು ಅವರು ವೈರಾಗ್ಯ ತಾಳಿ ಚೇಳಗುರಿಗೆ ಬಂದು ನೆಲೆನಿಲ್ಲುವ ಹತ್ತು ಹಲವು ವಿಷಯಗಳ ಶೋಧನೆಗೆ ಬಹಳ ಶ್ರಮಪಟ್ಟರು. ಎಲ್ರಿತಾತನ ಕುರಿತು ಕೆಲವು ಊಹಾತ್ಮಕ ಐತಿಹ್ಯಗಳನ್ನು ಬಿಟ್ಟರೆ ಬಹುತೇಕ ಗೊಂದಲಗಳನ್ನು ಪರಿಹರಿಸುವಲ್ಲಿ ಶ್ಯಾಮಣ್ಣನವರ ಕಾರ್ಯ ಮೆಚ್ಚುವಂಥದ್ದು.

ಜಾತಕದಂತೆ ಶ್ಯಾಮಣ್ಣನವರ ಮೂವತ್ತೊಂಭತ್ತನೆಯ ವಯಸ್ಸಿನಲ್ಲಿ ದೊಡ್ಡ ಗಂಡಾಂತರವಿತ್ತಂತೆ. ಉಳಿಯುವುದು ಕಷ್ಟವೆಂದು ಜ್ಯೋತಿಷ್ಯ ತಜ್ಞರು ಆತನ ಮೂವತ್ತುಮೂರು ವಯಸ್ಸಿಗೆ ಎಲ್ರಿತಾತನು ಕನಸ್ಸಿನಲ್ಲಿ ಕಾಣಿಸಿಕೊಂಡು ಒಬ್ಬ ಬರುತ್ತಾನಯ್ಯಾ, ಅವನು ನಿನ್ನನ್ನು ಕಾಪಾಡುತ್ತಾನೆ. ಎಂದು ಹೇಳಿದರಂತೆ ಆಗ ಶ್ಯಾಮಣ್ಣನು "ನೀವು ಏನಪ್ಪಾ" ಅಂದಾಗ ನಾನು ಯಾವಾಗಲೂ ಇದ್ದೇನಯ್ಯಾ ಎಂದರಂತೆ ತಾತ". (ಅದೇ ಪುಟ ೭೨) ಶ್ಯಾಮಣ್ಣ ಆತನ ಕನಸ್ಸಿನ ದರ್ಶನದ ನಂತರ ದಿನಗಳಲ್ಲಿ ಎಲ್ರಿತಾತನ ಮಠವನ್ನು ಕುರಿತು ಹಿರಿಯರಿಗೆ ಬಹು ಜಾಗರೂಕತೆ ವಹಿಸುವಂತೆ ಸಲಹೆ ಮಾಡಿದರು.

ದೊಡ್ಡನಗೌಡರು, ಶ್ಯಾಮಣ್ಣನ ಮಾಡುವ ಮಠದ ಎಲ್ಲಾ ಕಾರ್ಯಕ್ರಮಗಳಿಗೆ ಬೆನ್ನೆಲುಬಾಗಿ ನಿಂತವರು. ಅವರ ಬಹುಮುಖ ಪ್ರತಿಭೆ ನಾಡಿನಲ್ಲೆಲ್ಲಾ ಪಸರಿಸಿ ರಂಗ ನಟನೆಯಲ್ಲಿ 'ಗಮಕ ನಿಧಿ' ಎಂದೇ ಹೆಸರು ಪಡೆದಿದ್ದರು. ಎಲ್ರಿತಾತನ ಕುರಿತ ಜೀವನ ಚರಿತ್ರೆಯನ್ನು ಕಟ್ಟುವಲ್ಲಿ ದೊಡ್ಡನಗೌಡರು

ಅತ್ಯಂತ ಕಾಳಜಿ ತೋರಿದವರು ಮತ್ತು ಆ ನಿಟ್ಟಿನಲ್ಲಿ ಅನೇಕ ಭಕ್ತರಿಗೆ ಮಾರ್ಗದರ್ಶನ ನೀಡಿದವರು. ಮೂಲತಃ ಸಾಹಿತ್ಯಾಸಕ್ತರಾಗಿದ್ದ ಅವರು ಆತನ ಕುರಿತ ಹಲವು ಭಕ್ತಿಗೀತೆಗಳನ್ನು ರಚಿಸಿ, 'ತಾತನ ಗೀತಾಂಜಲಿ' ಎಂಬ ಪುಸ್ತಕವನ್ನು ಮಠದ ಮೂಲಕ ಪ್ರಕಟಿಸಿದ್ದಾರೆ. ಅವರ ಅಂಥಹ ಭಕ್ತಿಗೀತೆಗಳನ್ನು 'ಎರ್ರಿತಾತನ ಕುರಿತು ಸಾಹಿತ್ಯ' ಎನ್ನುವ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ದೊಡ್ಡನಗೌಡರ ತಂದೆ ಪಂಪನಗೌಡರು ಎರ್ರಿತಾತನ ಆಪ್ತಭಕ್ತರಾಗಿದ್ದವರು. ಚೇಳಗುರಿಕೆ ಗ್ರಾಮದ ನೀರಿನ ಕೊರತೆಯನ್ನು ನೀಗಿಸಲು ತಾತನ ಶಿಷ್ಯನಾಗಿದ್ದ ತಿಕ್ಕಯ್ಯನವರಿಂದ ಅನೇಕ ಸಲ ಭೂಮಿ ಪೂಜೆ ನಡೆಸಿ ನೀರಿನ ಭವಣೆಯನ್ನು ಬಗೆಹರಿಸಲು ಪ್ರಯತ್ನ ಪಟ್ಟವರು. ಅಂಥಹ ಕುಟುಂಬದಲ್ಲಿಯೇ ಹುಟ್ಟಿದ ದೊಡ್ಡನಗೌಡರು ಎರ್ರಿತಾತನನ್ನು ಹತ್ತಿರದಿಂದ ಕಂಡವರಾಗಿದ್ದರು. ತಾತನ ನಂತರದ ದಿನಗಳಲ್ಲಿ ಮಠದಲ್ಲಿ ಪುರಾಣ ಪ್ರವಚನಗಳನ್ನು ಪ್ರತಿ ಬುಧವಾರ ನಡೆಸುತ್ತಾ, ಹಲವಾರು ಪೂಜಾ ಕಾರ್ಯಗಳು ಅನೇಕ ಗಣ್ಯರನ್ನು ಮಠಕ್ಕೆ ಆಹ್ವಾನಿಸುತ್ತಿದ್ದರು. ಶ್ಯಾಮಣ್ಣ ಮತ್ತು ದೊಡ್ಡನಗೌಡರ ಪರಿಶ್ರಮದ ಫಲವಾಗಿ ಅಂದಿನಿಂದ ಇಂದಿನವರೆಗೂ ಎಲ್ಲಾ ಪೂಜಾಕಾರ್ಯಗಳು ವ್ಯವಸ್ಥಿತವಾಗಿ ನಡೆಯಲು ಸಹಕಾರಿಯಾದವು ಎಂಬುದು ಮಠದ ಸದಸ್ಯರು ಕ್ಷೇತ್ರಕಾರ್ಯಕ್ಕೆ ಹೋದಾಗ ಮಾಹಿತಿ ನೀಡಿದರು. ಶ್ಯಾಮಣ್ಣನವರಿಗೆ ಎರ್ರಿತಾತನು ಕನಸ್ಸಿನಲ್ಲಿ ಕಂಡಂತೆ ದೊಡ್ಡನಗೌಡರಿಗೂ ಕಾಣಿಸಿಕೊಂಡಿರುವುದು ಅವರ ಕೃತಿಯನ್ನು ಅವಲೋಕಿಸಿದಾಗ ತಿಳಿದುಬರುತ್ತದೆ.

### ೫.೬. ಇತರ ಶಿಷ್ಯರು

ಬೆಲ್ಲವಿದ್ದಲ್ಲಿ ಇರುವೆಗಳು ಮತ್ತು ನೊಣಗಳು ಸಹಜವೆಂಬಂತೆ ಎರ್ರಿತಾತನ ಸೇವೆಯಲ್ಲಿ ಎಲ್ಲವನ್ನು ತ್ಯಜಿಸಿ ನಿಸ್ವಾರ್ಥತೆಯಿಂದ ಬಾಳಿದ ಶಿಷ್ಯರೂ ಇದ್ದರು, ಅವರಲ್ಲಿ ಅಹಂಕಾರದ ಮದದಲ್ಲಿ ಮುಳುಗಿ ಆತನ ಕೋಪಕ್ಕೆ ತುತ್ತಾಗಿ ಶಾಪವನ್ನು ತಂದುಕೊಂಡ ಶಿಷ್ಯರು ಇರುವುದು ಕಂಡುಬರುತ್ತದೆ. ಅರಿವಿನ ಆಸೆಯಿಂದ ಗುರುವಿನ ಪಾದಗಳಲ್ಲಿ ಶಿಷ್ಯರು ಭಕ್ತರೂ ಬಂದು ಸೇರುತ್ತಾರೆ. ಬಂದು ಆತನ ಸೀಮೆಯಲ್ಲಿ ನೆಲೆನಿಂತ ಭಕ್ತರಿಗೂ-ಶಿಷ್ಯವೃಂದಕ್ಕೂ ಆತ ಏನು ಹೇಳುತ್ತಿದ್ದನೋ, ಅವರು ಏನು ಕೇಳುತ್ತಿದ್ದರೋ ತಿಳಿಯದು, ಅದು ಅವರವರ ನಂಬಿಕೆ ಮತ್ತು ನಿರೀಕ್ಷೆಗಳಿಗೆ ಬಿಟ್ಟ ವಿಷಯವಾಗಿರುತ್ತದೆ. ಸಿಕ್ಕಿದವನಿಗೆ ಸಿಕ್ಕಿದಷ್ಟು, ದಕ್ಕಿದವನಿಗೆ ದಕ್ಕಿದಷ್ಟು ಆತನು ಮಾತಾಡುತ್ತಿದ್ದುದೇ ಅಷ್ಟಕಷ್ಟೇ. ಸದಾ ಅಂತರ್ಮುಖವಾದ ಶಾಂತಮೌನ ಶಬ್ದಗಳು. ಅವರು ಮಾತಾಡಿದರೆ ಯಾರಿಗೂ ಅರ್ಥವಾಗದ ಅಲೌಕಿಕವಾದ ಸಾಂಕೇತಿಕವಾದ ತಮಗೆ ತಾವೇ ಮಾತಾಡಿಕೊಳ್ಳುತ್ತಿದ್ದ ಕೆಲವು ಮಾತುಗಳು ಭಕ್ತರಿಗೆ, ಶಿಷ್ಯರಿಗೆ ಪ್ರಶ್ನೆಗಳಾಗಿಯೇ ಉಳಿದುಬಿಡುತಿದ್ದವು. ಮತ್ತೆ ಮತ್ತೆ ಮಾತಾಡುವುದು ಆತನ ತನ್ನ ವ್ಯಕ್ತಿತ್ವಕ್ಕೆ ತಕ್ಕದ್ದಲ್ಲವೆನ್ನುವ ನೀತಿ ನಿಯಮಗಳಿಗೆ ಅಂಟಿಕೊಂಡವನಂತೆ ಸುಮ್ಮನಿರುತ್ತಿದ್ದ.

ಅಂಥಹ ಸಾಧು ಮೂರ್ತಿಯ ದರ್ಶನ ಪಡೆಯಲು, ಆತನ ಮೌನದ ಮಾತನ್ನು ಆಲಿಸಲು ಎಲ್ಲ ಕಡೆಗಳಿಂದಲೂ ಜನರು ಬರುತ್ತಿದ್ದರು. ಹುಬ್ಬಳ್ಳಿಯ ಸಿದ್ಧಾರೂಢರೂ, ಶಿರಡಿಯ ಸಾಯಿಬಾಬಾ ಕೂಡ

ಬಂದಿದ್ದರೆಂದು ವದಂತಿಯಿದೆ. ಹಾಲ್ವಿಚರಣ ಮಠದ ಶ್ರೀರುದ್ರಮುನಿ ಸ್ವಾಮಿಗಳೂ ಉರವಕೊಂಡೆಗೆ ಹೋಗುವಾಗ ಚೇಳಗುರಿಕೆಯಲ್ಲಿಳಿದು ಎರ್ರಿತಾತನ ದರ್ಶನ ಪಡೆದು ಮುಂದೆ ಸಾಗಿದರು. ಅಂದಿನ ದಕ್ಷಿಣ ದೇಶದ ಮಹಾನುಭಾವಿಗಳಾದ ರಾಮಾಲಿಂಗಸ್ವಾಮಿಗಳು ಆತನ ಸುಪ್ರಸಿದ್ಧ ಭಕ್ತರಾಗಿದ್ದರು. ಮೈಸೂರಿನ ಗೌರೀಶಂಕರ ಸ್ವಾಮಿಗಳೂ ಸಮಾಧಿಯಲ್ಲಿದ್ದಾಗ ದರ್ಶನವಿತ್ತನೆಂದು ತಿಳಿದುಬರುತ್ತದೆ. ಭಕ್ತರ ಕನಸು ಹಾಗೂ ಕನವರಿಕೆಗಳು ಈಡೇರಿದವೆಂಬ ನಂಬಿಕೆಗಳು ಅವರನ್ನು ಇನ್ನೂ ಹತ್ತಿರಕ್ಕೆ ಬರುವಂತೆ ಮಾಡುತ್ತಿದ್ದವು. ಹಾಗಾಗಿಯೇ ಎರ್ರಿತಾತನು ಬದುಕಿದ್ದಾಗ ಆತನ ಸೇವೆಗೈದ ಶಿಷ್ಯಸಂಕುಲ ಮತ್ತು ಅವರು ಮಠದ ಬೆಳವಣಿಗೆಗೆ ಪೂರಕವಾದ ಹಲವಾರು ಕಾರ್ಯ ಚುಟುವಟಿಕೆಗಳನ್ನು ಕುರಿತು ಚರ್ಚಿಸಲಾಗಿದೆ. ತಿಕ್ಕಯ್ಯವಧೂತ, ಶಿವರಾಮಾವಧೂತ, ಸಿದ್ಧಲಿಂಗಪ್ಪ, ನಿರಂಜನಸ್ವಾಮಿಗಳು, ಶ್ಯಾಮಣ್ಣ ಮತ್ತು ಜೋಳದರಾಶಿ ದೊಡ್ಡನಗೌಡರು ಎರ್ರಿತಾತನ ಬಗ್ಗೆ ಅಚಲವಾದ ಶ್ರದ್ಧಾಭಕ್ತಿಯಿಂದ ತಾತನ ಸೇವೆಗೈಯುತ್ತಾ ಬರುತ್ತಿದ್ದ ಭಕ್ತರು ಅನುಕೂಲಕ್ಕಾಗಿ ವಸತಿ, ನಿತ್ಯದಾಸೋಹ, ಪುರಾಣ ಪ್ರವಚನಗಳನ್ನು ನೀಡುತ್ತಿದ್ದರು.

ಎರ್ರಿತಾತನು ಸಮಾಧಿಯಾದ ತದನಂತರದ ಮಠದ ಕಾರ್ಯಗಳಿಗೆ ಪ್ರೇರಕಶಕ್ತಿಯಾಗಿ ನಿಲ್ಲುತ್ತದೋ? ಇಲ್ಲವೇ ಅವನತಿ ಹೊಂದುತ್ತಿರುವ ಸಾಲಿನಲ್ಲಿ ನಿಲ್ಲುವ ಮಠವಾಗಿ ಬಿಡುತ್ತದೆಯೋ? ಎಂಬ ಅನುಮಾನಗಳು ಕಾಡುತ್ತಿರುತ್ತವೆ. ಮಹನೀಯರ ಬದುಕುಗಳು ಅವರೊಂದಿಗೆ ಮುಗಿದುಹೋಗುವ ಸಂಭವವೇ, ಹೆಚ್ಚು. ಅಂಥಹ ಸಂದಿಗ್ಧ ಪರಿಸ್ಥಿತಿಯಲ್ಲಿ ಶ್ಯಾಮಣ್ಣನವರಿಗೆ, ಜೋಳದರಾಶಿ ದೊಡ್ಡನಗೌಡರಿಗೆ ಹೆಗಲಿಗೆ ಹೆಗಲಾಗಿ ನಿಂತ ಭಕ್ತರಲ್ಲಿ ಮಹಾಬಲೇಶ್ವರಪ್ಪ ಧಣಿಗಳು. ಎರ್ರಿತಾತನ ಮಠದಲ್ಲಿ ಶ್ಯಾಮಣ್ಣನವರು ನೀಡಿದ ಲಡ್ಡು ಪ್ರಸಾದದ ಮಹಿಮೆಯಿಂದ ಆತನ ಸೇವೆಗೆಂದು ಬರುವ ಭಕ್ತರು ನೀರಿಲ್ಲದೆ ಚೇಳಗುರಿಕೆಯಲ್ಲಿ ಪರಿದಾಡುವುದು ತಿಳಿಯಿತು. ಪೂಜಾಭಿಷೇಕಕ್ಕಾಗಲಿ, ಭಕ್ತರ ಮೂಲಭೂತ ಸೌಕರ್ಯಗಳಿಗಾಗಲಿ ನೀರಿನ ತೊಂದರೆ ನಿವಾರಣೆಗಾಗಿ ಒಂದು ಬಾವಿಯನ್ನು ತೊಡಿಸಿದರು. ಈ ರೀತಿಯಾಗಿ ಹಲವರು ಎರ್ರಿತಾತನು ಸಮಾಧಿಯಾದ ನಂತರದ ದಿನಗಳಲ್ಲಿ ಅಂತರಂಗದಲ್ಲಿ ಆತನನ್ನೆ ಗುರುವಾಗಿ ಸ್ವೀಕರಿಸಿದ ಅನೇಕ ಶಿಷ್ಯರು ಆತನ ಸೇವಗೆ ಪ್ರತ್ಯಕ್ಷ ಪರೋಕ್ಷವಾಗಿ ಸಹಾಯ ಸಹಕಾರ ನೀಡಿದವರಲ್ಲಿ ಪ್ರಮುಖರು. ಅವರೆಂದರೆ ಕೆ. ಕರಿಬಸಯ್ಯ, ಚೇಳಗುರಿಕೆ ಗಂಗಾಧರಪ್ಪ, ಉಡೇಗೊಲ್ಲದ ಉಮಾಪತಪ್ಪ, ಬೆಂಗಳೂರಿನ ಭಗವಾನ್‌ದಾಸ್, ಮದ್ರಾಸಿನ ಏಕಾಂಬರಂ ಪಿಳ್ಳೆಯವರೂ ಮುಂತಾದವರು ನಿಸ್ವಾರ್ಥ ಸೇವಾರ್ಥ ಬುದ್ಧಿಯಿಂದ ಪ್ರವಾಸಿಮಂದಿರಗಳನ್ನು ನಿರ್ಮಿಸಿದ್ದಾರೆ. ಮಠದ ಒಳಾವರಣದಲ್ಲಿನ ಕಟ್ಟಡಗಳು, ಹೊರಭಾಗದ ಕಟ್ಟಡಗಳು, ಮಠದ ಮುಂಭಾಗದ ಮಳಿಗೆಗಳು, ಮಠದ ಗೋಪುರ, ದಾಸೋಹದ ಮನೆ, ಕಲ್ಯಾಣ ಮಂಟಪ, ವಸತಿಶಾಲೆ ಮುಂತಾದ ಮಠದ ಸರ್ವತೋಮುಖ ಬೆಳವಣಿಗೆಗೆ ಅನೇಕ ಭಕ್ತರು ಅಂದಿನಿಂದ ಇಂದಿನವರಿಗೆ ನೆರವು ನೀಡಿದ್ದಾರೆ.

ಮೇಲೆ ವಿವರಿಸಿದ ಶಿಷ್ಯರಲ್ಲದೆ ಅನೇಕ ಪ್ರಮುಖ ಶಿಷ್ಯರು ಆತನನ್ನು ಕಣ್ಣಾರೆ ಕಂಡು ಆತನ ಲೀಲೆ ಪವಾಡಗಳಿಂದ ಭವದ ಬಂಧನದಲ್ಲಿ ಬಿಡುಗಡೆ ಹೊಂದಿದ್ದಾರೆ. ಅಂತವರಲ್ಲಿ ಪ್ರಮುಖರೆಂದರೆ ಅಂದಿನ

ಮಠದ ಧರ್ಮದರ್ಶಿಗಳಾಗಿದ್ದ ಎಂ. ಚಂದ್ರಮೌಳಿಯವರು, ಹೆಚ್. ಸಿದ್ದಲಿಂಗನಗೌಡರು, ಊಳೂರು ನಾಗಪ್ಪನವರು, ಮೇಟಿ ತಿಮ್ಮಪ್ಪ, ಪಾಟೀಲ ಭೀಮನಗೌಡರು, ಯಾಳ್ಪಿ ವಿರೂಪಾಕ್ಷಪ್ಪ, ಕಲ್ಲೂರು ನಾಗನಗೌಡರು, ಮೋಕ ರುದ್ರಣ್ಣನವರು, ಮೋಕ ಎರ್ರೆಪ್ಪನವರು, ಆಧೋನಿಯ ಬುಶ್ಶಣ್ಣನವರು. ಕೆ. ಪಂಪನಗೌಡರು, ವುಂಕಿ ದೊಡ್ಡರುದ್ರಪ್ಪನವರು ಮತ್ತು ಅಂಗಡಿ ವಿರೂಪಾಕ್ಷಪ್ಪ ಮೊದಲಾದವರು ದಕ್ಷತೆ ಹಾಗೂ ಸೇವಾಭಾವದಿಂದ ಕೆಲಸ ಮಾಡಿದರು. (ಅದೇ ಪು. ೯೮ರಲ್ಲಿ) ಹಾಗೆಯೇ ತ್ಯಾಗಶೀಲರಾದ ತೊಗರಿ ವೀರಮಲ್ಲಪ್ಪನವರು ಮಠದ ಆವರಣದಲ್ಲಿ ನವಗ್ರಹ ಪ್ರತಿಷ್ಠಾಪನೆ ಮಾಡಿರುವುದು ಇವೆಲ್ಲ ಭಕ್ತರ ಸೇವಾರ್ಪಣೆಯನ್ನು ತಿಳಿಸುತ್ತದೆ.

ಗುರು ಶಿಷ್ಯ ಪರಂಪರೆಯು ಹಿಂದೂ ಸಮಾಜದ ಕಲ್ಪನೆಯಲ್ಲಿಯೇ ಮಾತ್ರವಲ್ಲ, ಪ್ರಪಂಚದ ಪ್ರಮುಖ ಧರ್ಮಗಳಲ್ಲಿ ಅದರ ಪ್ರಖರತೆ ಹೆಚ್ಚಾಗಿರುವುದು ಕಂಡುಬರುತ್ತದೆ. ಕ್ರೈಸ್ತ ಧರ್ಮದಲ್ಲಿ ಚರ್ಚಿನ ಫಾದರ್, ಪಾಸ್ಟರ್‌ಗಳೇ ಜೀಸಸ್‌ನ ಅನುಯಾಯಿಗಳು, ಶಿಷ್ಯರಾಗಿ ಉಪದೇಶದ ಮೂಲಕ ಭಕ್ತ ಜನತೆಯಲ್ಲಿ ಆಧ್ಯಾತ್ಮಿಕತೆಯನ್ನು ಬೆಳೆಸುವುದು ಕಂಡುಬರುತ್ತದೆ. "ಸೂಫಿಸಂ ಮೂಲತಃ ಗುರುಪಂಥ. ಗುರುವಿನ ಮೂಲಕವೇ ಸಾಧಕ ರಹಸ್ಯ ವಿದ್ಯೆಯನ್ನು ಪಡೆಯಬೇಕು. ಗುರುವನ್ನು ಹುಡುಕುವುದು, ಗುರುವಿನಿಂದ ದೀಕ್ಷೆ ಪಡೆಯುವುದು, ಗುರುವಿಗೆ ತನ್ನನ್ನು ಅರ್ಪಿಸಿಕೊಳ್ಳುವುದು, ಇಲ್ಲಿ ಸಾಮಾನ್ಯ. ಎಲ್ಲ ಅನುಭಾವಿ ಪಂಥಗಳಲ್ಲೂ ಗುರುವಿನ ಪರೀಕ್ಷೆಗಳಿಗೆ ಶಿಷ್ಯ ಒಡ್ಡಿಕೊಂಡು ಗುರು ಕರುಣೆ ಸಂಪಾದಿಸುವ ಮಿತ್‌ಗಳಿರುವುದನ್ನು ಗಮನಿಸಬೇಕು. ದೇವರಿಗಲ್ಲದೆ ಯಾರಿಗೂ ತಲೆಬಾಗಿಸಬಾರದು ಎಂದು ನಂಬುವ ಇಸ್ಲಾಂ, ಗುರುವಿಗೆ ಮಣಿಯುವುದನ್ನು ದೈವ ವಿರೋಧವೆಂದು ಖಂಡಿಸಿತು" (ರಹಮತ್ ತರೀಕೆರೆ: ಕರ್ನಾಟಕದ ಸೂಫಿಗಳು ಪು. ೨೮-೨೯). ಮಸೀದಿಗಳಲ್ಲಿ ಮಾಲ್ವಿ, ಹಜಾರತ್ ಫೀಶ್‌ಗಳ ಮಾರ್ಗದರ್ಶನ ದಲ್ಲಿ ದಿನಂಪ್ರತಿ ಮತ್ತು ರಂಜಾನ್ ಉಪವಾಸ ದಿನಗಳ ಪ್ರಾರ್ಥನೆಗಳು ನಡೆಯುತ್ತಿರುವುದು ಗಮನಿಸಿದರೆ ಗುರುವಿನ ಅಗತ್ಯ, ಅವಸರಗಳನ್ನು ಗುರ್ತಿಸಬಹುದು. ಪ್ರಸ್ತುತ ಅಧ್ಯಯನದಲ್ಲಿ ಗುರು-ಶಿಷ್ಯರ ಅನನ್ಯತೆ ಯನ್ನು ಚರ್ಚಿಸುವುದರ ಜೊತೆಗೆ ಎರ್ರಿತಾತನ ಕಾಲ ಘಟ್ಟದಲ್ಲಿ ಬಂದ ಶಿಷ್ಯ ಸಂಕುಲವನ್ನು ಅವರ ಸೇವಾ ಭಾವನೆಯನ್ನು ಕುರಿತು ವಿಶ್ಲೇಷಿಸಲಾಗಿದೆ. ಅಂದಿನಿಂದ ಇಂದಿನವರಿಗೂ ಮಠದ ಬೆಳವಣಿಗೆಯಲ್ಲಿ ಸಹಕರಿಸಿದ ಶಿಷ್ಯ ಪರಂಪರೆಯನ್ನು ಕುರಿತ ಸಾಧ್ಯಾಸಾಧ್ಯತೆಗಳನ್ನು ಆಧುನಿಕತೆಯ ನೆಲೆಯಲ್ಲಿ ಪರಿಭಾವಿಸುವ ಪ್ರಯತ್ನಮಾಡಲಾಗಿದೆ.

**ಅಡಿಟಿಪ್ಪಣಿಗಳು**

೧. ಚೆನ್ನಬಸವೇಶ್ವರ ಸಿ.ವ.: ಚೇಳಗುರಿಕೆ ಎರ್ರಿಸ್ವಾಮಿಗಳ ಲೀಲಾವಿಲಾಸ ಪು. ೩೮.

೨. ಅದೇ ಪು. ೩೯

೩. ದೊಡ್ಡನಗೌಡರು ಜೋಳದರಾಶಿ: ಶ್ರೀ ಎರ್ರಿಸ್ವಾಮಿಗಳ ಶಿವಮಯ ಜೀವನ ಚರಿತ್ರೆ ಪು. ೧೩

೪. ರಹಮತ್ ತರೀಕೆರೆ: ಕರ್ನಾಟಕ ನಾಥಪಂಥ. ಪು. ೫

೫. ಭೂಸನೂರ ಮಠ ಸಂ.ಶಿ. ಶೂನ್ಯ ಸಂಪಾದನೆ ಪು. ೫೪ ವಚನ ೭೫

೬. ದೇ.ಜ.ಗೌ.: ಕುವೆಂಪು ಮತ್ತು ವಿಭೂತಿ ಪುರುಷರು ಪು. ೮೩

೭. ಚೆನ್ನಬಸವೇಶ್ವರ ಸಿ.ವ.: ಚೇಳಗುರಿಕೆ ಎರ್ರಿಸ್ವಾಮಿಗಳ ಲೀಲಾವಿಲಾಸ ಪು. ೪೯.

೮. ಅದೇ. ಪುಟ. ೭೦.

೯. ಅದೇ ಪು. ೮೫.

೧೦. ಅದೇ ಪುಟ. ೭೨

೧೧. ಅದೇ ಪುಟ ೯೫

೧೨. ರಹಮತ್ ತರೀಕೆರೆ: ಕರ್ನಾಟಕದ ಸೂಫಿಗಳು ಪುಟ ೨೮-೨೯

# ಅಧ್ಯಾಯ - ೬

## ಚೇಳಗುರಿಕೆ ಎರ್ರಿತಾತ : ಪವಾಡ ಸಾದೃಶ್ಯಗಳು

೬.೧. ಪವಾಡ ಪದದ ನಿರ್ವಚನ

೬.೨. ಚೇಳಗುರಿಕೆ ಎರ್ರಿತಾತ : ಪವಾಡಗಳು

೬.೨.೧. ಚೇಳಗುರಿಕೆ ಗ್ರಾಮಕ್ಕೆ ಬರುವ ಮುಂಚಿನ ಪವಾಡಗಳು

೬.೨.೨. ಚೇಳಗುರಿಕೆಯಲ್ಲಿ ತೋರಿದ ಪವಾಡಗಳು

೬.೩. ಪವಾಡಗಳ ತಾತ್ವಿಕ ಅನುಸಂಧಾನ

## ಚೇಳ್ಳಗುರಿಕೆ ಎರ್‍ರಿತಾತ : ಪವಾಡ ಸಾದೃಶ್ಯಗಳು

### ೬.೧. ಪವಾಡ ಪದದ ನಿರ್ವಚನ

ಪವಾಡಗಳು ನಮ್ಮ ಪರಂಪರೆಯ ನಂಬುಗೆಯ ಪ್ರಕಾರವಾಗಿವೆ. ಅಲ್ಲದೆ ಜಗತ್ತಿನ ಮಹತ್ವದ ಹಾಗೂ ಪ್ರಮುಖ ಧರ್ಮಗಳ ಗ್ರಂಥಗಳಲ್ಲಿಯೂ ಅದರ ಸಾರತೆಯನ್ನು ಸಾರ್ಥಕಗೊಳಿಸಿದಂತಿವೆ. ಜನತೆಯ ನಂಬುಗೆಗೆ ಪಾತ್ರವಾಗಿದ್ದ ಅವು ಧಾರ್ಮಿಕ ಸಾಹಿತ್ಯದ ಅವಿಭಾಜ್ಯ ಅಂಗಗಳಾಗಿ ಇಂದಿನವರೆಗೆ ಉಳಿದುಕೊಂಡು ಬಂದುದನ್ನು ಕಾಣಬಹುದಾಗಿದೆ. ಅವುಗಳೆಲ್ಲ ಧಾರ್ಮಿಕ ಮಹಾಪುರುಷರ, ಪ್ರವಾದಿಗಳ, ಸಾಧು ಸತ್ಪುರುಷರ ಜೀವನ ಚರಿತ್ರೆಯಲ್ಲಿ ಬೆರೆತುಕೊಂಡಿದೆ. ಅಗೋಚರತೆ ಅಸಾಧ್ಯತೆಯ ನೆಲೆಯಲ್ಲದ ಸಂಗತಿಗಳನ್ನು ಜನರ ಸಮೀಪಕ್ಕೆ ತಂದು ಆ ಮೂಲಕ ಪರಸ್ಪರ ಬಿಡುಗಡೆಯ, ಸಾರ್ಥಕತೆಯ ಬದುಕನ್ನು ನಿಭಾಯಿಸಲು ಪವಾಡಗಳು ಮಹತ್ವದ ಪಾತ್ರವಹಿಸುತ್ತವೆ.

ಪವಾಡ ಎಂಬ ಶಬ್ಧವನ್ನು ಆಂಗ್ಲದ ಮಿರಕಲ್ (Miracle) ಶಬ್ಧಕ್ಕೆ ಸಂವಾದಿಯಾಗಿ ಬಳಸಲಾಗುತ್ತವೆ. “Miracle is Genarally difined by the Ctymology of the word. as that which causes wonder and astonstment being extrgordinary in it self and inepli by normal standard of and sign of indicating something other than itself (Encyelopedia Brianca Vol. 16) ‘ಪವಾಡ’ ಎಂದರೆ ಅಸಮಾನ್ಯ ಘಟನೆ ಅಥವಾ ನಿಸರ್ಗದ ಯಾವುದೇ ನಿಯಮ ನಿಬಂಧನೆಗಳಿಂದ ವಿವರಿಸಲಾಗದ ಕಾರ್ಯಕಾರಣ ಸಂಬಂಧವಿಲ್ಲದ ಮತ್ತು ನಿಸರ್ಗದ ನಿಯಮಗಳಿಗೆ ಮಿಕ್ಕಿದ ಅಲೌಕಿಕ ಶಕ್ತಿಯ ಕಾರ್ಯ ಎನ್ನುವ ಅರ್ಥಗಳಿವೆ.

ಪವಾಡ ಪ್ರಮಾದ (ಸಂ) ಸಂಸ್ಕೃತದ ‘ವಾದ’ ಪದಕ್ಕೆ ಪ್ರ ಉಪಸರ್ಗ ಸೇರಿ ‘ಪ್ರಮಾದ’ ಆಗುತ್ತದೆ. ವಾದ ಎಂದರೆ ಚರ್ಚೆ, ತರ್ಕ, ಮಾತು, ಸಂಭಾಷಣೆ ಎಂಬ ಅರ್ಥವಿವರಣೆ ಬರುತ್ತದೆ. (ಕ.ಸಾ.ಪ. ನಿಘಂಟು ಪುಟ ಸಂಖ್ಯೆ ೭೬೨). ಪವಾಡ ಎಂಬ ಪದಕ್ಕೆ ನಿರ್ದಿಷ್ಟವಾಗಿ ಒಂದು ಮಿತಿಯೊಳಗೆ ಸೇರಿಸಲು ಕಷ್ಟಸಾಧ್ಯ. ಏಕೆಂದರೆ ಅಲೌಕಿಕತೆಯೇ ಅದರ ಅಂತರಾಳ. ನಿರ್ಲಿಪ್ತವಾದ ಜೀವನದ ಗರಿಯನ್ನು ದಾಟಿದ ಪರಾಕಾಷ್ಠೆಯ ಶಿಬಿರದೊಳಗೆ ಪ್ರಜ್ವಲಿಸುವ ದೀವಿಗೆಯಂತೆ ಆಧ್ಯಾತ್ಮಿಕತೆಯ ಪ್ರತೀಕವಾಗಿದೆ.

**ವೇದಾಂತದ ಪ್ರಕಾರ**

ಪವಾಡಗಳು ಒಬ್ಬ ಮಹಾಪುರುಷನಿಗೆ ಧಾರ್ಮಿಕ ಮುಂದಾಳುತನವನ್ನು ದೊರಕಿಸಿಕೊಡುವಲ್ಲಿ

ಯೋಗ್ಯತಾ ಪತ್ರಗಳಂತೆ ಅಥವಾ ಪ್ರತ್ಯೇಕ ಒಂದು ದೇವರ ಶ್ರೇಷ್ಠತಮವಾದ ಶಕ್ತಿಯ ಪ್ರದರ್ಶನಕ್ಕೆ ದೃಷ್ಟಾಂತವಾಗಿ, ಇಲ್ಲವೆ ಒಂದು ನಿರ್ದಿಷ್ಟವಾದ ಶಕ್ತಿಯ ಪ್ರದರ್ಶನಕ್ಕೆ ದೃಷ್ಟಾಂತವಾಗಿ, ಇಲ್ಲವೆ ಒಂದು ನಿರ್ದಿಷ್ಟವಾದ ಧರ್ಮದ ಸತ್ಯದ ಸಾಕ್ಷಿಯನ್ನೊದಗಿಸುವ ಸಾಧನಗಳಾಗಿ ಕಾರ್ಯನಿರ್ವಹಿಸುವವು.

**ಕಿರಂ ಸಾಗರಾಜ್**

ಕಲ್ಪನೆಯ ಉನ್ನತ ಹಂತವೇ ಪವಾಡ. ಅವಕ್ಕೆ ದೊಡ್ಡರೂಪಕ ಶಕ್ತಿಯಿದೆ (ವೆಂಕಟೇಶ್ ಇಂದ್ವಾಡಿ ಮಂಟೇಸ್ವಾಮಿ ಸಾಂಸ್ಕೃತಿಕ ಮುಖಾಮುಖಿ ಪು. ೧೬೨).

**ರಹಮತ್ ತರೀಕೆರೆ**

ಸಿದ್ಧಿಗಳನ್ನು ಅಲೌಕಿಕ ಶಕ್ತಿಯಂತೆ, ಅದರ ಪ್ರದರ್ಶನವನ್ನು ಪವಾಡವೆಂದು ಜನ ಭಾವಿಸಿದರು. ಈ ಪವಾಡಗಳು ವಿಶೇಷ ಜ್ಞಾನ ಮತ್ತು ಸಾಧನೆಗಳ ಉತ್ಪ್ರೇಕ್ಷಿತ ರೂಪಗಳು (ಕರ್ನಾಟಕದ ನಾಥಪಂಥ ಪು. ೧೬೪).

ಪವಾಡಗಳು ಅನಂತತೆಯ, ಅಗೋಚರತೆಯ ಸಂಕೇತಗಳಾಗಿವೆ. ವಿಚಿತ್ರವಾದ, ಆಶ್ಚರ್ಯಕರವಾದ, ಅಸಾಮಾನ್ಯವಾದ ವಸ್ತು ಅಥವಾ ಸಂಗತಿಗಳಾಗಿವೆ. ಈ ಪವಾಡಗಳು ಜನ ಸಾಮಾನ್ಯರ ಅನುಭವಕ್ಕಿಂತ ಬೇರೆಯಾದ ವಿಲಕ್ಷಣ ಸಂಗತಿಗಳು. ಇಂತಹ ಪವಾಡಗಳನ್ನು ದೇವರು ಇಲ್ಲವೇ ದೈವೀಶಕ್ತಿಯ ಒಲವಿದ್ದ ಮಾನವೀಯ ಅನುಕಂಪವುಳ್ಳ ಮಹಾಪುರುಷರಿಂದ, ದುಃಖಿತರ, ಆತ್ಮದ ರಕ್ಷಣೆಗಾಗಿ ಹಾಗೂ ಸಾಮಾನ್ಯ ಜನತೆ ದೈವೀ ಶಕ್ತಿಯಲ್ಲಿ ಸಂಶಯ ತಾಳಿದಾಗ ಅದರ ಸ್ಥಿರೀಕರಣಕ್ಕೆ ಯಾವುದೇ ಪೂರ್ವಭಾವಿ ತಯಾರಿಲ್ಲದೆ ಜರುಗುವ ಘಟನೆಗಳು ಎಂದು ಹೇಳಬಹುದು.

ಮನುಷ್ಯನ ಅಂತರಂಗ ಹಾಗೂ ಬಹಿರಂಗದ ನೇರ ಬಿಡುಗಡೆಗೆ ಸಹಾಯಕವಾಗುವ ಅಸಾಧ್ಯವಾದದ್ದನ್ನು ಸಾಧ್ಯವಾಗಿಸುವ ತಂತ್ರವೇ ಪವಾಡ. ಅದನ್ನು ಮಹತ್ಕಾರ್ಯ, ಸೂಚಕಕಾರ್ಯ, ಅದ್ಭುತಕಾರ್ಯ, ವಿವೇಚನಾಯುಕ್ತ ಕಾರ್ಯ, ಅಸಾಧ್ಯಕಾರ್ಯ, ಅಗೋಚರ ಶಕ್ತಿ, ಮಹೋನ್ನತ ಕಾರ್ಯ ಸಿದ್ಧಿಕಾರ್ಯ, ರೀತಿಗಳು, ಮಹಿಮೆಗಳು ಎಂಬ ವಿವಿಧ ಹೆಸರುಗಳಿಂದ ಸೂಚಿಸಲಾಗುತ್ತದೆ.

ಪವಾಡಗಳು ಭೂತ-ಭವಿಷತ್‌ಗಳ ನಡುವಿನ ಅಂತರವನ್ನು ಕಡಿಮೆಮಾಡಲು ವರ್ತಮಾನದ ತಲ್ಲಣಗಳೊಂದಿಗೆ ಮಾರಾಮಾರಿ ಮಾಡಿ ತನ್ನಲ್ಲಿ ವಿಶಿಷ್ಟವಾದ ದೈವನೋಟವನ್ನು ಕಾಣಲು ಸಹಕಾರಿಯಾಗಿವೆ. ಅನಂತ ಅಪೇಕ್ಷೆಗಳಿಗೆ ಒಗುಟ್ಟುವಂತೆ, ಚೇತನಗಳಿಗೆ ಚೈತನ್ಯವನ್ನು ನೀಡಲು ಆ ಮೂಲಕ ಪರಂಪರೆಗಳ ಸ್ಥಿತ್ಯಂತರೀಕರಣಕ್ಕೆ ಮುಖವೊಡ್ಡಲು ಪ್ರೇರೆಪಿಸುತ್ತವೆ. "ಪವಾಡಗಳು ನಂಬಿಕೆಯನ್ನು ಒಳಗೊಂಡ ತಾರ್ಕಿಕತೆಯನ್ನು ಮೀರಿದ ಕ್ರಿಯೆಗಳಾಗಿ ಕಾಣಿಸಿಕೊಂಡಿವೆ. ಈ ಪವಾಡಗಳು ಸಮುದಾಯದ ನಂಬಿಕೆಗಳನ್ನು ಆಧರಿಸಿರುವುದರಿಂದ ಈ ತರದ ನಂಬಿಕೆಗಳಿಗೆ ಧಾರ್ಮಿಕ ಪರಿವೇಷವಿರುವುದರಿಂದ ಅಂತಿಮವಾಗಿ ಅವು ಜನಪದ ಧೋರಣೆಯನ್ನು ಹೊಂದಿರುವುದರಿಂದ ಸಮುದಾಯಗಳು ತಾರ್ಕಿಕತೆಯನ್ನು ಬೆಳಸದೆ ನಂಬುತ್ತವೆ. (ರಹಮತ್ ತರೀಕೆರಿ ಸಂ. ಧರ್ಮವಿಶ್ವಕೋಶ ಪು. ೨೦೩). ಧಾರ್ಮಿಕತೆಯ ಮುಖ್ಯ ಆಶಯ

ಜನಮಾನಸದಲ್ಲಿಯ ಅನೇಕ ಕಷ್ಟಕಾರ್ಪಣ್ಯಗಳಿಗೆ ಸ್ಪಂದಿಸಲು ಪವಾಡಗಳನ್ನು ಮಾಡಲಾಯಿತು. ಆದರೆ ಗೊಡ್ಡು ಸಂಪ್ರದಾಯಗಳ ಸೆರಗಿನಲ್ಲಿ ಸೋರಿಹೋಗಿ ಅಂಧಕಾರದ ಮರುಭೂಮಿಯೊಳಗೆ ಏಕಾಂತತೆಯೆಂಬ ಬೀಜವು ಅಂಕುರಗೊಂಡು ವಿವಿಧ ಅನಾಚಾರದ ಆಡಂಬರದಲ್ಲಿ ಆಧುನೀಕತೆಯು ಸಹ ಮಿಲನವಾಗಿರುವುದು ವಿಪರ್ಯಾಸ.

ಅಸಾಮಾನ್ಯರು ಮಾಡಿದರೆನ್ನಲಾದ ರೀತಿಗಳಲ್ಲಿ ಸ್ವಾರ್ಥವಾಗಲಿ ಮಂತ್ರವಿದ್ಯೆಗಳಲ್ಲಿರುವಂತ ಮಾಟದ ಅಂಶವಾಗಲಿ, ವ್ರತಚಾರಣೆಯ ನಿಯಮ ನಿಬಂಧನೆಗಳಾಗಲೀ ಇರುವುದಿಲ್ಲ. ಅವಧೂತರ ಹೆಚ್ಚಿನ ಪವಾಡಗಳೆಲ್ಲಾ ಮಕ್ಕಳಿಲ್ಲದವರಿಗೆ ಸಂತಾನಕೊಡುವುದು, ರೋಗರುಜನಿಗಳನ್ನು ಹೋಗಲಾಡಿಸುವುದು, ಬರಡು ಆಕಳು ಮತ್ತು ಎಮ್ಮೆಗಳಲ್ಲಿ ಹಾಲು ಕರೆಸುವುದು, ಸಾಂಕ್ರಾಮಿಕ ರೋಗಗಳನ್ನು ನಿವಾರಿಸುವುದು, ತನ್ನನ್ನು ನಿಂದಿಸಿದವರಿಗೆ ಕಷ್ಟಕೊಡುವುದು ನಂತರ ಕ್ಷಮಿಸಿ ಮುಕ್ತಿನೀಡುವುದು. ಇತ್ಯಾದಿ ಭಕ್ತ ಜನರ ವೈಯಕ್ತಿಕ ಮತ್ತು ಸಾಮೂಹಿಕ ಸಮಸ್ಯೆಗಳಿಗೆ ಸಂಬಂಧಿಸಿದವುಗಳಾಗಿವೆ. ಉದ್ದೇಶಪೂರ್ವಕವಾಗಿ ಕೆಲವೊಮ್ಮೆ ದಿಢೀರ್ ಪರಿವರ್ತನೆಯ ಸಂಕಲ್ಪಗಳಿಂದ ಪವಾಡಗಳು ಜರುಗುತ್ತವೆ. ಹಾಗಾಗಿಯೇ ಎಷ್ಟು ಮುಂದುವರೆದ ಸಂಪ್ರದಾಯ ಸಮುದಾಗಳಾದರೂ ಒಮ್ಮೊಮ್ಮೆ ಅದರ ಜಾಡಿನೊಳಗೆ ನಾಜುಕಾಗಿ ಬೆರತು ಬೆಸಗೊಂಡಿರುವುದನ್ನು ಕಾಣುತ್ತೇವೆ.

ಪವಾಡವು ಮೇಲುನೋಟಕ್ಕೆ ಬಹುಮಟ್ಟಿಗೆ ಒಳ್ಳೇಯ ಮಂತ್ರ ವಿದ್ಯೆಯಂತೆ ಕಂಡರೂ ಅದನ್ನು ಒಂದು ಮಂತ್ರ ವಿದ್ಯೆಯೆಂದು ಪರಿಗಣಿಸಲಿಲಕ್ಕಾಗದು. ಏಕೆಂದರೆ ಇದರಲ್ಲಿ ಪವಾಡ ಪುರುಷನ ಸ್ವಾರ್ಥವಾಗಲೀ ಮಂತ್ರವಿದ್ಯೆಯಲ್ಲಿರುವಂತೆ ಇರುವುದಿಲ್ಲ. ಪವಾಡಗಳು ಚಮತ್ಕಾರಿಕದ್ದು ಅದ್ಭುತ ಅತಿಮಾನುಷ ಸಂಗತಿಗಳಿಂದ ಒಡಗೂಡಿದುದರಿಂದ ಇಂದ್ರಜಾಲ, ಮರ್ಹೇಂದ್ರಜಾ, ನಯನ ಬಂಧ (ಕಣ್ಕಟ್ಟು), ಕೈ ಚಳಕ, ಗಗನಗಾಮಿ ವಿದ್ಯೆ, ರಸವಿದ್ಯೆ, ಮಾಯಾವಿದ್ಯೆ ಇತ್ಯಾದಿ ವಿದ್ಯೆಗಳಂತೆ ಮೇಲುನೋಟಕ್ಕೆ ಕಾಣಿಸಿದರೂ ಅವುಗಳದೇ ಆದ ಒಂದು ವೈಶಿಷ್ಟ್ಯ ಇರುವುದನ್ನು ಮನಗಾಣಬಹುದು. ಅವು ಈ ವಿದ್ಯೆಗಳಂತೆ ಒಂದು ಪರಿಮಿತವಾದ ಉದ್ದೇಶವನ್ನು ಹೊಂದಿದವುಗಳಲ್ಲ ಸಿದ್ಧಿಯ ಸಾರ್ಥಕತೆಯನ್ನು ಪಡೆಯಲು ಯೋಗ, ಧ್ಯಾನ ಮುಂತಾದ ವಿಧಿವಿಧಾನಗಳು ಸಹಕಾರಿ ಎಂಬುದು ನಿರ್ವಿವಾದ.

ಮೇಲೆ ಅರ್ಥೈಸಿದಂತೆ ಪವಾಡವೆಂದರೆ ಅಸಾಮಾನ್ಯವಾದ, ಆಶ್ಚರ್ಯವನ್ನುಂಟು ಮಾಡುವ ಲೋಕ ವಿಲಕ್ಷಣವಾದ ಅದ್ಭುತ ಘಟನೆ ಅಥವಾ ಸಂಗತಿ. ಕಾರ್ಯಕಾರಣವಿಲ್ಲದ ನಿಸರ್ಗ ನಿಯಮದ ವಿರುದ್ಧ ಘಟಿಸುವ ಇಂಥ ಘಟನೆ ಅಥವಾ ಸಂಗತಿಯನ್ನು ಮಾನವೀಯ ಶಕ್ತಿಯಿಂದ ಎಸಗುವುದು ಅಸಾಧ್ಯ. ಈ ರೀತಿ ಮಾನವೀಯ ಶಕ್ತಿಗೆ ಅಸಾಧ್ಯವೆನಿಸಿದ ಕಾರ್ಯ ಇಲ್ಲವೆ ಸಂಗತಿಗಳನ್ನು ದೇವರ ಪ್ರೀತಿಗೆ ವಿಶೇಷವಾಗಿ ಪಾತ್ರನಾದವನು ಮಾತ್ರ ದೈವೀ ಶಕ್ತಿಯ ಬಲದಿಂದ ಎಸಗಬಲ್ಲ. ಪವಾಡಗಳು ದೇವರ ಪ್ರತಿರೂಪವೆನಿಸಿದ ವ್ಯಕ್ತಿಯಿಂದ ಪ್ರದರ್ಶಿತವಾಗುವಂಥವು ಎಂದಂತಾಯಿತು.

ವಿಶ್ವದ ಪ್ರಮುಖ ಧರ್ಮಗಳು ವಿಭಿನ್ನವಾದ ನೆಲೆಯಲ್ಲಿ ಪವಾಡಗಳನ್ನು ಅರ್ಥೈಸಲಾಗಿದೆ. ಯೇಸುಕ್ರಿಸ್ತನನ್ನು ಕುರಿತ ಅನೇಕ ಪವಾಡಗಳು ಜನರಿಗೆ ಹತ್ತಿರವಾದ ತತ್ವವನ್ನು ಪ್ರತಿಬಿಂಬಿಸಿದರೆ,

ಬುದ್ಧನು ತದ್ವಿರುದ್ಧ ಎಂಬಂತೆ ಓ ಬಿಕ್ಕುಗಳೇ! ನೀವು ಜ್ಞಾನದ ಪ್ರಭೆಯನ್ನು ಹೊಂದುವುದಕ್ಕೆ ಮೊದಲು ಅತಿಮಾನುಷ ಶಕ್ತಿಯ ಪ್ರದರ್ಶನಕ್ಕೆ ತೊಡಗಬೇಡಿ. ಯಾರು ಅದನ್ನು ಮಾಡುತ್ತಾರೋ ಅವರು ದುಷ್ಕೃತೆಯ ಬಗ್ಗೆ ಅಳುಕುಳ್ಳವರಾಗುತ್ತಾರೆ. ಪವಾಡಗಳನ್ನು ಆಧರಿಸಿ ಜೀವನ ರೂಪಿಸಬೇಡಿ, ಎಂದೆಂದಿಗೂ ಇರುವ ಸನಾತನ ನಿಯಮದ ಮೇಲೆ ನೀವು ನಿಮ್ಮ ಬಾಳನ್ನು ರೂಪಿಸಿಕೊಳ್ಳಿ ಎಂಬುದು ಆತನ ಧೋರಣೆಯಾಗಿತ್ತು. ಯಾವುದೇ ಒಂದು ಅದೃಷ್ಟವನ್ನಾಗಲೀ ನಂಬಿ ಕೂತುಕೊಳ್ಳದೇ ಪ್ರಯತ್ನಶೀಲರಾಗಿ ಎಂಬುದು ಅಂಬೇಡ್ಕರರವಾದ ಅಷ್ಟೆ ಅಲ್ಲ, ಸ್ವಾಮಿ ವಿವೇಕಾನಂದ ಬಸವಾದಿ ಪ್ರಮಥರ ಧ್ಯೇಯೋದ್ದೇಶಗಳು ಕೂಡ ಈ ಹಿನ್ನೆಲೆಯಲ್ಲಿಯೇ ಸೃಷ್ಟಿಯಾಗಿರಬೇಕು. ಏಕೆಂದರೆ ನಿಮಗೆ ನೀವೇ ದಾರಿ ದೀಪಗಳು, ನಿಮ್ಮನ್ನು ನೀವೇ ರೂಪಿಸಿಕೊಳ್ಳಿ ಎಂಬಂತಹ ಸಂದೇಶಗಳು ಒಡಮೂಡಿರಬೇಕು. ಕ್ರಿಸ್ತನದು ಜನಮುಖಿಯಾದ ಧೋರಣೆ ಎಂಬುದು, ಆತನು ತನ್ನ ಶಿಷ್ಯರಿಗೆ ಹೇಳಿದ ಸಂದೇಶದಿಂದ ತಿಳಿಯಬಹುದೇನಂದರೆ "ನೀವು ಭೂಲೋಕದ ಕಟ್ಟಕಡೆಗೆ ಹೋಗಿ ನನ್ನ ನಾಮದಲ್ಲಿ ದೆವ್ವಗಳನ್ನು ಬಿಡಿಸಿರಿ, ರೋಗಗಳನ್ನು ವಾಸಿಮಾಡಿರಿ, ಬಂಧನದಲ್ಲಿರುವವರಿಗೆ ಬಿಡುಗಡೆ ಮಾಡಿರಿ, ಕುಷ್ಟರೋಗಗಳನ್ನು ಗುಣಪಡಿಸಿರಿ ಮತ್ತು ಎಲ್ಲಾ ದೇಶಗಳಿಗೆ ಹೋಗಿ ಸಾಕ್ಷಿಗಳಾಗಿರ್ರಿ" (ಬೈಬಲ್ ಹೊಸ ಒಡಂಬಡಿಕೆ ಮತ್ತಾಯನು ಬರೆದ ಸುವಾರ್ತೆ ಗಮನಿಸಬಹುದು). ಎನ್ನುವ ಚಿಂತನೆಯಿಂದಲೋ ಇಂದು ಪ್ರಪಂಚದ ಮೂಲೆ ಮೂಲೆಗಳಲ್ಲಿ ಕ್ರೈಸ್ತತ್ವದ ಗಾಳಿ ಬೀಸಿರುವುದನ್ನು ಕಾಣಬಹುದು. ವಿಶ್ವದ ಜನಗಣತಿಯನ್ನು ಪರಿಗಣನೆಗೆ ತೆಗೆದುಕೊಂಡರೆ ಕ್ರೈಸ್ತರೇ ಅತೀ ಹೆಚ್ಚು ಎಂಬುದು ಗಮನಾರ್ಹವಾಗಿದೆ.

ಪರಸ್ಪರ ಹಲವು ಧರ್ಮಗಳಲ್ಲಿನ ಪವಾಡ ಸಾದೃಶ್ಯಗಳಿಗೆ ವೈರುಧ್ಯವಿದ್ದರೂ, ದೃಷ್ಟಿಯಲ್ಲಿ ವಿಭಿನ್ನತೆಯಿದ್ದರೂ ಅವರ ಆಂತರ್ಯದ ಗುರಿಸಾಧನೆಗೆ ಹಿಂಬುಕೊಡುತ್ತವೆ. ಆಚರಣೆಯಲ್ಲಿ ಅಗಾಧ ವ್ಯತ್ಯಾಸವಿದ್ದರೂ ಸಹ ವಿಚಾರಣೆಗಳ ತಾತ್ವಿಕತೆಯ ಮೂಲ ತಿರುಳು ಒಂದೇ ಆಗಿದ್ದವು. ಅದಕ್ಕಾಗಿಯೇ ದೈವತ್ವಕ್ಕೆ ಸಿಗುವಷ್ಟು ಮನ್ನಣೆ ಬೇರೆ ಯಾವುದಕ್ಕು ಅಷ್ಟೊಂದು ಆದ್ಯತೆ ಸಿಗಲಾರದು ಎಂದೇ ಹೇಳಬೇಕಾಗುತ್ತದೆ. ಧಾರ್ಮಿಕ ಪರಿಕಲ್ಪನೆಯಲ್ಲಿ ಮನುಷ್ಯನ ಸಾಮಾನ್ಯ ಪ್ರಜ್ಞೆಗೆ ಒಪ್ಪಿಕೊಳ್ಳಲಾಗದ ರೀತಿಯ ಕೆಲವು ಅಸಮಾನ್ಯವಾದ ಅಪರೂಪದ ಮತ್ತು ಅಸಹಜವಾದ ಘಟನೆ, ಕ್ರಿಯೆ ಮತ್ತು ಹೇಳಿಕೆಗಳ ಈ ದಾಖಲೆಗಳನ್ನು 'ಪವಾಡ'ಗಳೆಂದು ಧರ್ಮ ತನ್ನಲ್ಲಿ ಕಾಪಾಡಿಕೊಂಡಿದೆ. ಈ ಪವಾಡಗಳು ಸಾಮಾನ್ಯವಾಗಿ ಅತೀಂದ್ರಿಯ ಶಕ್ತಿಯನ್ನು ದೈವೀಕತೆಯನ್ನಾಗಿ ಪರಿಪೂರ್ಣಗೊಳಿಸುವ ಪ್ರಣಾಳಿಕೆಗಳಾಗಿ ಧಾರ್ಮಿಕ ಚರಿತ್ರೆಯಲ್ಲಿ ಬಳಕೆಗೊಂಡಿದೆ. ಅಂದರೆ ತಾಂತ್ರಿಕ ವಿದ್ಯೆಗಳಿಗೆ ದೈವೀಕತೆಯ ಸ್ಥಾನವನ್ನು ದೊರಕಿಸಿಕೊಡುವ ಕೆಲಸವಾಗಿದೆ. ಯಾರು ತಮ್ಮ ಪ್ರಜ್ಞೆಯನ್ನು ದರ್ಶನಗಳ ಕನಸುಗಳ ಅಥವಾ ಅಭ್ಯಾಸದ ಮೂಲಕ ನಿಯಂತ್ರಣದಲ್ಲಿರಿಸಿಕೊಂಡಿರುತ್ತಾರೋ ಅವರು ಪವಾಡ ಪುರುಷರೆನಿಸಿಕೊಳ್ಳುತ್ತಾರೆ.

ಮಂಟೇಸ್ವಾಮಿ, ಮಲೆಯ ಮಹದೇಶ್ವರ, ಎಡೆಯೂರು ಸಿದ್ಧಲಿಂಗ, ಸೊನ್ನಲಿಗೆ ಸಿದ್ಧರಾಮ ಮುಂತಾದ ಸಾಂಸ್ಕೃತಿಕ ನಾಯಕರು ಪವಾಡಗಳನ್ನು ತೋರಿದ್ದಾರೆ. ಧರಣಿಗೆ ದೊಡ್ಡವರ ಕತೆಯೆಂದು ಕರೆಯಲಾಗುವ ಮಂಟೇಸ್ವಾಮಿ ಕಾವ್ಯದ ಪ್ರತಿಯೊಂದು ಪಲ್ಲವಿಯೂ "ಪವಾಡ ಗೆದ್ದಯ್ಯ ನೀವೇ ಬನ್ನಿ" ಎಂದು

ಕೊನೆಗೊಳ್ಳುತ್ತದೆ. ತನ್ನ ಬಳೆಪವಾಡ, ವಿಭೂತಿ ಪವಾಡ, ಹಿತ್ತಾಳೆ ಕೊಪ್ಪರಿಕೆ ವಾಡ, ಕಾದೆಣ್ಣೆ ಪವಾಡ, ಅಡಿಗಲ್ಲು ಪವಾಡ, ಸುಣ್ಣದ ಪವಾಡ, ಕಾದಗಟ್ಟಿ ಪವಾಡ ಇಂಥಹ ಏಳು ಅದ್ಭುತ, ಪವಾಡಗಳ ಮೂಲಕ ಒಕ್ಕಲಿಗೆ ಶಿಸುಮಕ್ಕಳನ್ನು ಪಡೆದರು. ಉತ್ತರದಿಂದ ಬಂದ ಮಾದೇಶ್ವರನು ಸುತ್ತೂರು ಮಠದಲ್ಲಿ ಏಳು ಖಂಡಗ ರಾಗಿಯನ್ನು ಒಂದೇ ದಿನದಲ್ಲಿ ಬೀಸಿ ಹಿಟ್ಟು ಮಾಡುವುದು. ಆ ಮೂಲಕ ಅವನು ಪವಾಡಗೆದ್ದು ಕತ್ತಲ ರಾಜ್ಯದಲ್ಲಿ ತನ್ನ ಅಸ್ತಿತ್ವ ಸ್ಥಾಪಿಸುತ್ತಾನೆ. ಹೀಗೆ ಕೆಳವರ್ಗದ ಸಾಂಸ್ಕೃತಿಕ ನಾಯಕರು ಅಂದಿನ ಮಠ ಹಾಗೂ ಪ್ರಬಲ ವರ್ಗದವರ ವಿರುದ್ಧ ಪವಾಡಗಳನ್ನು ಎಸಗಿ ತಮ್ಮ ಅನನ್ಯತೆಯನ್ನು ಸಾಬೀತುಪಡಿಸಿದ್ದಾರೆ. ಮಧ್ಯಕಾಲೀನ ಸ್ಥಿತಿಯಲ್ಲಿ ಸೂಫಿಗಳು, ಅವಧೂತರು, ನೂರೊಂದು ವಿರಕ್ತರು, ಆರೂಢರು, ಸಿದ್ದರನ್ನು ಪವಾಡ ಪುರುಷರೆಂದು ಕರೆಯಲಾಗಿದೆ.

ಪವಾಡಗಳಿಗೆ ಅಥೆಂಟಿಕ್ ಎಂಬುದಿಲ್ಲ. ಆಯಾ ಕಾಲ ಪ್ರದೇಶಗಳ ಸ್ಥಿತಿಯ ಮೇಲೆ ಪವಾಡಗಳು ಗಂಭೀರ ಪರಿಣಾಮ ಬೀರುತ್ತವೆ. ಕೆಲವರು ಪವಾಡಗಳನ್ನು ತಿರಸ್ಕರಿಸಿದರೂ ಬಹುತೇಕರ ಬದುಕಿನೊಳಗೆ ಹಾಸುಹೊಕ್ಕಾಗಿ ಇಂದಿಗೂ ವೈಚಾರಿಕ ಜಗತ್ತಿಗೆ ಸವಾಲೊಡ್ಡುವಂತೆ ಮೈತಳೆದು ನಿಂತಿವೆ. ಒಂದೆಡೆ ಅವಮಾನ ಮತ್ತೊಂದಡೆ ಅಭಿಮಾನ, ಭಿನ್ನಮತ ಮತ್ತೊಂದಡೆ ಸಹಮತ, ನಂಬಿಕೆ ಮತ್ತೊಂದಡೆ ಅಪನಂಬಿಕೆ ಇವುಗಳ ಮಧ್ಯೆ ಪವಾಡಗಳು ಸರಪಳಿಯ ಕೊಂಡಿಯಂತೆ ಬೇರ್ಪಡಿಸಲು ಹೋದರೆ ಸಮಾಜದ ಧಾರ್ಮಿಕ ಪಲ್ಲಟಗಳಿಗೆ ಸವಾಲೊಡ್ಡಿ ನಿಲ್ಲುತ್ತವೆ.

ದೊಡ್ಡ ದೊಡ್ಡ ಶರಣರು ಪವಾಡಗಳನ್ನು ಮೆರೆದಿದ್ದಾರೆ. ಅವರಿಗಿಂತ ದೊಡ್ಡವರಾದ ಶರಣರು ಪವಾಡಗಳನ್ನು ಜರೆದಿದ್ದಾರೆ; ಅವರಿಗಿಂತಲೂ ದೊಡ್ಡವರಾದ ಶರಣರು ಪವಾಡಗಳನ್ನು ಬರೆದಿದ್ದಾರೆ ಮತ್ತು ಮೆರೆದಿದ್ದಾರೆ. ದೊಡ್ಡವರ ಪವಾಡಗಳನ್ನು ನೋಡಿ ಪವಾಡಗಳನ್ನು ಮಾಡಿ ದೊಡ್ಡವರಾಗ ಬಯಸುವ ಸಣ್ಣತನದ ಕ್ಷುದ್ರವ್ಯಕ್ತಿಗಳೂ ಇಲ್ಲದಿಲ್ಲ. ದುಡಿದ ದುಡ್ಡನ್ನು ಅಥವಾ ದುಡಿದಿಟ್ಟ ದುಡ್ಡನ್ನು ವ್ಯರ್ಥವಾಗಿಸುವಂತೆ, ದುಡಿದಶಕ್ತಿಯನ್ನೋ ಪಡೆದ ಶಕ್ತಿಯನ್ನೋ ಹಡಾ ಹುಡಿಯಾಗಿ ಹಾಳುಮಾಡುವ, ಸ್ವಾರ್ಥಕ್ಕಾಗಿ ದುರುಪಯೋಗಪಡಿಸುವ ಸ್ವಾಮಿಗಳ ರೂಪದಲ್ಲಿರುವ ಕಾಮಿಗಳೂ, ಯೋಗಿಗಳ ರೂಪದಲ್ಲಿರುವ ಭೋಗಿಗಳು ಬೇಕಾದಷ್ಟು ಜನ ಕಣ್ಣು ಮುಚ್ಚಿಕೊಂಡರೂ ಕಾಣುತ್ತಾರೆ.

**೬.೨. ಚೀಳಗುರಿಕೆ ಎರ್ರಿತಾತ: ಪವಾಡಗಳು**

ಮಹಾತ್ಮರು ಬಾಲ ಉನ್ಮತ್ತ ಪಿಶಾಚಿಗಳ ವರ್ತನೆಯಂತಿರುವರೆಂದು ಹೇಳುವ ಅನುಭವದ ನುಡಿಯು ಎರ್ರಿಸ್ವಾಮಿಗಳಿಗೆ ಸರಿಯಾಗಿ ಅನ್ವಯಿಸಿತ್ತು. ಹಸಿವು ತೃಷೆಗಳ ಅರಿವಿಲ್ಲದೆ ಮಾನ, ಅವಮಾನ, ಭಯ, ನಾಚಿಕೆಗಳ ಗುರುತಿಲ್ಲದೆ, ಭಾವ ಬತ್ತಲೆಯ ಕುರುವೆಂಬಂತೆ ತನುಬತ್ತಲೆಯಾಗಿ, ಅರೆಗಣ್ಣಿನ ನೋಟದಿಂದ ಕತ್ತಲು ಬೆಳಕುಗಳ ಹಂಗಳಿದು ಜನಸಂಗದಲ್ಲಿ ನಿಸ್ಸಂಗಿಯಾಗಿ, ನಿರಂಕುಶನಾಗಿ ತನಗಿಷ್ಟಬಂದಂತೆ ಹುಚ್ಚರೆಂದು ಕರೆದ ಜನರಿಗೆ ಹುಚ್ಚು ಹಿಡಿಸುತ್ತ ಸುಳಿದಾಡುತ್ತಿದ್ದರು. ಇಂತಹ ಸುಳಿದಾಟವನ್ನು ಹುಚ್ಚೆಂದು ಅಪಹಾಸ್ಯ ಗೈದು, ನಕ್ಕು ದುರ್ಲಕ್ಷಿಸುವ ಜನರು ನಮ್ಮ ದೇಶದಲ್ಲಿದ್ದರೂ, ಇಂತಹ ಹುಚ್ಚನಲ್ಲಿಯೇ

ಯಾವುದೋ ಅವ್ಯಕ್ತ ಮಹಿಮೆಯು ಅಡಗಿರುತ್ತದೆಂದು ನಂಬಿ ಆ ಹುಚ್ಚನ ವಿಪರೀತ ಚರ್ಯೆಗಳನ್ನು ಸಹಿಸಿ ಸೇವೆಯಲ್ಲಿದ್ದು, ಆತನ ಆಶೀರ್ವಾದ ಅನುಗ್ರಹಕ್ಕೆ ಪಾತ್ರರಾಗಿ ಧನ್ಯರಾದ ಭಕ್ತರು ಇದ್ದಾರೆ.

ಶ್ರೀರಾಮ ಕೃಷ್ಣ ಪರಮಹಂಸರನ್ನು ಕಂಡಾಗ, "ಇವನೊಬ್ಬ, ಮಾಟಗಾರ, 'ಹುಚ್ಚ'ನೆಂದು ಬಾಲ್ಯ ಚಾಪಲ್ಯದ ತುಂಟತನದಿಂದ ತಿರಸ್ಕರಿಸಿದ ನರೇಂದ್ರನು ಕಡೆಗೆ ಪರಮಹಂಸರ ಅನುಗ್ರಹದಿಂದ ವಿವೇಕನಂದನಾಗಿ ಭಾರತೀಯರ ತತ್ವಶಾಸ್ತ್ರಗಳನ್ನು ವಿದೇಶಗಳಲ್ಲಿಯೂ ಹರಡಿದನೆಂಬುದು ನಮ್ಮ ದೇಶದ ಜನಾಂಗದ ಸಹಜ ಚರಿತ್ರೆಯಲ್ಲಿ ಹೆಗ್ಗುರುತಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಎರ್ರಿತಾತನು ಮಾಡಿದರೆನ್ನಲಾದ ಪವಾಡಗಳನ್ನು ಎರಡು ರೀತಿಯಲ್ಲಿ ವರ್ಗೀಕರಿಸಿಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಮೊದಲನೆಯದು ಎರ್ರಿತಾತನವರು ಚೇಳಗುರಿಕೆ ಗ್ರಾಮಕ್ಕೆ ಬರುವ ಮುಂಚಿನ ಪವಾಡಗಳೆಂದು, ಎರಡನೆಯದು ಚೇಳಗುರಿಕೆ ಗ್ರಾಮದಲ್ಲಿ ತೋರಿದ ಪವಾಡಗಳು.

**೬.೨. ೧.ಚೇಳಗುರಿಕೆ ಗ್ರಾಮಕ್ಕೆ ಬರುವ ಮುಂಚಿನ ಪವಾಡಗಳು**

ಎರ್ರಿತಾತನು ಚೇಳಗುರಿಕೆ ಗ್ರಾಮಕ್ಕೆ ಬರುವ ಮುಂಚಿನ ಮಹಿಮೆಗಳನ್ನು ಕುರಿತು ಕೆಲವು ಜನರು ಹೇಳಿಕೊಳ್ಳುತ್ತಿರುವುದು ನೋಡಿದರೆ ಇವರು ಕಲ್ಯಾಣದುರ್ಗ, ಬೆಳಗುಪ್ಪ, ಮುಷ್ಟೂರು, ಉರವಕೊಂಡೆ, ವೆಲುಗೊಂಡೆ, ಚೀಕಲಗುರಿಕೆಗಳಿದ್ದನೆಂದು ಅವರ ಪೂರ್ವಚರಿತ್ರೆಯ ಭಾಗದಲ್ಲಿ ಅದನ್ನು ಪ್ರಸ್ತುತಪಡಿಸಲಾಗಿದೆ. ಅಲ್ಲಿ ಕೆಲವು ಪವಾಡಗಳಿಂದ ಜನರನ್ನು ಅಚ್ಚರಿಗೊಳಿಸಿದಂತೆಯು ತಿಳಿದುಬರುತ್ತದೆ.

**ಒಬ್ಬ ಹೆಂಗಸಿನ ಬಂಜೆತನ ನಿವಾರಿಸಿದ್ದು**

ಯೋಗಿಗಳು ಸ್ವೇಚ್ಛಾವಿಹಾರಿಗಳು ಲೀಲಾ ಪೂರ್ಣವಾದ ಅವರ ಸ್ವೇಚ್ಛೆಯೇ ಶಿವೇಚ್ಛೆ ಅಲ್ಲಿ ಹಾಗೇಕೆ ಇಲ್ಲಿ ಹೀಗೇಕೆ ಎಂದು ಶಂಕಿಸುವ ಬುದ್ಧಿಗೆ ಆತ್ಮಸಿದ್ಧರ ಸನ್ನಿಧಿಯಲ್ಲಿ ಸ್ಥಾನವೇ ಇಲ್ಲ. (ಚನ್ನಬಸವೇಶ್ವರ ಸಿ.ವ ಶ್ರೀ ಎರ್ರಿಸ್ವಾಮಿಗಳ ಲೀಲಾವಿಲಾಸ ಪು. ೧೫). ಒಮ್ಮೆ ಎರ್ರಿತಾತನು ಬೆಳಗುಪ್ಪೆ ಗ್ರಾಮದಲ್ಲಿ ಅರೆಬತ್ತಲೆಯಾಗಿ ಸುತ್ತುತ್ತಿದ್ದಾಗ ಮಕ್ಕಳಿಲ್ಲದ ಬಂಜೆ ಹೆಂಗಸು ಒಂದು ಬಿಂದಿಗೆ ಹಿಡಿದು ನೀರಿಗೆ ಹೋಗುತ್ತಿದ್ದಳು. ಎರ್ರಿತಾತನು ಆಕೆಯ ಬಳಿ ಹೋಗಿ ಎದೆಯನ್ನು ಮುಟ್ಟಿದ ಕೆಲವು ದಿನಗಳಲ್ಲಿಯೇ ಆಕೆಯ ಬಂಜೆತನವೆಲ್ಲಾ ಮಾಯವಾಗಿ ಸಂತಾನ ಭಾಗ್ಯ ಪ್ರಾಪ್ತಿಯಾಯಿತೆಂದು ಲೀಲಾಮೃತ ಕೃತಿಯಲ್ಲಿ ಉಲ್ಲೇಖಿಸಲಾಗಿದೆ.

"ತಿರುಕನಾತನು ಬತ್ತಲೆಯಾಳ್ಕೆ
ತರುವುದಂ ಕಂಡೊಮ್ಮೆ ನೀರನು
ತರುವ ನಾರಿಯ ರಂಜಿಯೋ ನಾಣ್ಗೊಂಡ ಜವದಿಂದ
ತೆರಳೆ ಬೇರೆಡೆಗೋರ್ವ ತರುಣಿಯು
ತೊರೆದು ಭೀತಿಯ ನಿಲ್ಲಲಲ್ಲಿಗೆ

ಛರದೆಬಂದಾ ನಗ್ನಮೂರ್ತಿಯು ಮುಟ್ಟಾತವಳೆದೆಯಾ"

(ನಾಗೇಶ ಶಾಸ್ತ್ರಿ ವೈ. ಲೀಲಾಮೃತ ಸಂಧಿ ಏಳು. ಪು. ೭೭).

ಇಲ್ಲಿಯೇ ಒಂದು ಭಾವಿಯಲ್ಲಿ ಮುಳುಗಿ ಮತ್ತೊಂದು ಬಾವಿಯಲ್ಲಿ ತೇಲುವುದು. ಒಂದೇ ಸಮಯದಲ್ಲಿ ಹಲವು ಕಡೆ ಹಲವರೊಂದಿಗಿರುವುದು. ಮಳೆಯಾದಾಗ ಹಳ್ಳದ ತೆಪ್ಪ (ಕಸಕಡ್ಡಿಗಳ)ದಲ್ಲಿ ಪರವಶನಾಗಿರುವುದು. ಜನರೇನಾದರೂ ಕೇಳಿದರೆ ಅವರಿಗೆ ಇಷ್ಟಬಂದಂತೆ ಆಡಿದ ಮಾತು ಆಗಲೇ ಸತ್ಯವಾಗುವುದು. ಇತ್ಯಾದಿ ಅನೇಕ ಪವಾಡಗಳು ನಡೆದಿವೆ. ಆಯಾ ಗ್ರಾಮದವರು ಇಂದಿಗೂ ನೆನೆದುಕೊಳ್ಳುತ್ತಾರೆ. ಎಂದು ಕ್ಷೇತ್ರಕಾರ್ಯದ ಮಾಹಿತಿಯಿಂದ ತಿಳಿದುಬರುತ್ತದೆ.

**೨. ಹಾವನ್ನು ಬಂಗಾರವಾಗಿ ಮಾರ್ಪಡಿಸಿದ್ದು**

ಮಣ್ಣು ಮುಚ್ಚಲು ಕರದೆ ಮಹಿಮರು
ಚಿನ್ನವಾಗುವುದೆಂಬದಿ ಯೋ
ಗೋನ್ನತನು ಹಾವಿದನು ಕಾಲ ಬಂಗಾರ ಮುಂಗೈದು
ತನ್ನ ವಿಸ್ಮಯ ಕರದ ಲೀಲೆಯ
ನಿನ್ನು ಭುವಿಯೊಳ್ ಮೋದಿದನು ಸಾ
ಮಾನ್ಯಲ್ಲೀ ಪುರುಷನೆಂದುರೆ ಪೊಗಳಿದರು ಬುಧರು"

(ನಾಗೇಶಶಾಸ್ತ್ರಿ ವೈ. ಲೀಲಾಮೃತ ಸಂಧಿ ಏಳು, ಪು. ೮೦).

ಅದೇ ಬೆಳಗುಪ್ಪೆ ಗ್ರಾಮದ ಒಬ್ಬ ಭಕ್ತ ಎರ್ರಿತಾತನವರನ್ನು ಒಂದು ಹಾವಿನ ಹುತ್ತದ ಬಳಿಕಂಡು ನಮಸ್ಕಾರ ಮಾಡಿದಾಗ 'ಕಂಬಳಿ ಹಾಸಿ ಕಣ್ಣು ಮುಚ್ಚಯ್ಯಾ' ಎಂದರಂತೆ. ಆ ಭಕ್ತ ಕಣ್ಣು ಮುಚ್ಚಿದಾಗ ಆ ಕಂಬಳಿಯಲ್ಲಿ ಹುತ್ತದಲ್ಲಿಯ ಹಾವನ್ನು ಹಾಕಿ ಮೂಟೆಕಟ್ಟಿ ಹೊತ್ತು ಕೊಳ್ಳಯ್ಯಾ, ಎಂದಾಗ ಆ ಭಕ್ತ ಹೊತ್ತುಕೊಂಡು "ಮನೆಯ ದೇವರ ಜಗಲಿ ಮೇಲಿಟ್ಟು ಪೂಜೆಮಾಡಿ ಬಿಚ್ಚಯ್ಯಾ" ಎಂದು ಹೇಳಿ ಕಳುಹಿಸಿದ ತರುವಾಯ ಭಕ್ತ ಅದರಂತೆ ಮಾಡಲು ಹಾವು ಬಂಗಾರವಾಗಿತ್ತಂತೆ.

ಭವದ ಬಂಧನವನ್ನು ಮುರಿದ ಮಹಾತ್ಮರು ಯಾವಾಗಲೂ ದೈವಿಕ ಶಕ್ತಿಯೊಳಗೆ ಬಂಧಿತರಾಗಿರುತ್ತಾರೆ. ಅವರಿಗೆ ಅರಿವಿದ್ದೋ ಅರಿವಿಲ್ಲದೆಯೋ ಪರಲೌಕಿಕ ಮಹೋನ್ನತ ಮಹಿಮೆಗಳನ್ನು ತೋರುತ್ತಿರುತ್ತಾರೆ. ಇಲ್ಲಿನ ಸಂದರ್ಭದಲ್ಲಿ ಹೇರೂರು ವಿರೂಪವಧೂತರ ಒಂದು ಪವಾಡವನ್ನು ಗಮನಿಸವುದು ಸೂಕ್ತವಾಗಿದೆ. ಬ್ರಾಹ್ಮಣ ಮನೆತನದ ವೆಂಕೋಬಯ್ಯನವರು ಬೆಲ್ಲದ ವ್ಯಾಪಾರಿಗಳು. ವ್ಯಾಪಾರದಿಂದ ನಷ್ಟಕ್ಕೊಳಗಾಗಿ ಮಾನ ಮರ್ಯಾದೆಗೆ ಅಂಜಿ ಮಧ್ಯರಾತ್ರಿ ತುಂಗಭದ್ರನದಿಗೆ ಹಾರಿ ಪ್ರಾಣ ಕಳೆದುಕೊಳ್ಳಲು ಹೋದಾಗ ಅದೆಲ್ಲಿದ್ದರೋ ವಿರುಪಾವಧೂತರು, ಇದ್ದಕ್ಕಿದ್ದಂತೆ ಪ್ರತ್ಯೇಕ್ಷರಾಗಿ "ಸರಿ ಹಿಂದಕ್ಕೆ, ಮರಣ ಇನ್ನಿಲ್ಲ, ದುರ್ಮರಣ ಬೇಡ. ಅದು ಬಹುಪಾಪ, ನಿಲ್ಲು ನಿಲ್ಲು ಎನ್ನುತ್ತಾರೆ. ಸಾಯಲು ಬಂದ ಶಾಸ್ತ್ರೀಗಳ ಮನ ಪರಿವರ್ತನೆಯಾಗಿ ತನ್ನೆಲ್ಲಾ ಕಷ್ಟಗಳನ್ನು ಹೇಳಿಕೊಳ್ಳುತ್ತಾನೆ. ಆ

ಸಮಯದಲ್ಲಿ ವಿರೂಪಾವಧೂತರು ಹುತ್ತದೊಳಗಿನ ಹಾವನ್ನು ತೆಗೆದು ಅವರ ಉಡಿಯಲ್ಲಿ ಹಾಕಿ ಮನೆಯಲ್ಲಿ ನೋಡು ಎಂದಿದ್ದಾರಂತೆ. ಅದರಂತೆ ಶಾಸ್ತ್ರಿಗಳು ಮನೆಗೆ ಬಂದು ನೋಡಿದಾಗ ಬಂಗಾರದ ನಾಣ್ಯಗಳಾಗಿದ್ದವೆಂದು ತಿಳಿಯುತ್ತದೆ. ಹೀಗೆ ಸಜ್ಜನರ ಕಷ್ಟಗಳನ್ನು ಪರಿಹರಿಸಿ ಅವರ ಆರಾಧ್ಯ ದೈವರಾಗಿದ್ದಾರೆ. ಮಹಾತ್ಮ ಮಹಾತ್ಮರಲ್ಲಿ ಅನೇಕ ಬಗೆಯ ವಿರಸಗಳಿದ್ದರೂ ಭಕ್ತರ ಸಂಕಷ್ಟಗಳನ್ನು ನಿವಾರಿಸುವಲ್ಲಿ ಸಾಮ್ಯತೆಗಳೇ ಹೆಚ್ಚು ಎಂದು ತಿಳಿಯುತ್ತದೆ. ನಿರ್ಭೀತಿಯನ್ನುಂಟು ಮಾಡುವುದು ಆಂತರಿಕ ಶಕ್ತಿ. ನಿರ್ಭೀತನಾದವನು ಮಾತ್ರ ಸೀಮಿತವಾದ ವ್ಯಕ್ತಿಗತ ಪ್ರಜ್ಞಾಮಿತಿಯನ್ನು ದಾಟುತ್ತನಲ್ಲದೆ ವಿಶ್ವಪ್ರಜ್ಞೆಯಲ್ಲಿ ಒಂದಾಗುತ್ತಾನೆ. ವಿವಿಧ ಅನುಭಾವಿ ಪಂಥಗಳ ನಂಬಿಕೆಯಂತೆ (ಅವಧೂತ ಗೀತೆ) ಅಲೌಕಿಕತೆಯ ಸಾಧಿಸಿದವರು. ಯಾವುದೇ ಹಿಮ್ಮುಖ ಮುಮ್ಮುಖಗಳಿಲ್ಲದೆ ಜನರ ಆಶೋತ್ತರಗಳಿಗೆ ಅರಿವಿಲ್ಲದೆ ಸ್ಪಂದಿಸಿದ್ದಾರೆ.

೩. ಕಲ್ಲು ಬಸವನನ್ನು ನಡೆಸಿದ್ದು

ಆಧ್ಯಾತ್ಮ ಪುರುಷರಿಗೆ ಮನುಕುಲವಷ್ಟೇ ಅಲ್ಲ ನಿಸರ್ಗದ ಪ್ರತಿವಸ್ತುಗಳು ಶರಣಾಗುತ್ತವೆ. ಎರ್ರಿತಾತನದು ಸಂಚಾರಶೀಲ ಮನಸ್ಸು ನಿಂತಲ್ಲೆ ನಿಲ್ಲದೆ, ಕುಳಿತಲ್ಲಿ ಕೂತುಕೊಳ್ಳದೇ ಮನಬಂದ ಕಡೆಗೆ ಮನೋಜ್ಞವಾಗಿ ನಡೆದರು. ಬೆಳಗುಪ್ಪೆಯ ಗುಡ್ಡದಲ್ಲಿ ಕಲ್ಲುಕಂಬದ ಮೇಲೆ ಕೆಲದಿನವಿದ್ದು, ಅನಂತರ ಎಣ್ಣೆ ಹೊಳೆಯಲ್ಲಿ ಕೆಲವು ದಿನವಿದ್ದು, ಅಲ್ಲಿಂದ ಮುಸ್ಟೂರಿಗೆ ಬಂದು ಅಲ್ಲಿಯ ಈಶ್ವರಗುಡಿಯಲ್ಲಿಯ ಬಸವಣ್ಣನನ್ನು ನೋಡಿ "ಬಾರಯ್ಯಾ ಬಸವಾ" ಎಂದು ಕರೆದಾಗ, ಆ ಕಲ್ಲು ಬಸವ ಕರೆದ ಕೂಡಲೇ ಸರಿದು ಬಂದ. ಆದರಿಂದ ಆ ಊರಿನ ಗೌಡನಿಗೆ ಒದಗಿಬಂದ ಮರಣ ಸೂಚನೆಯನ್ನು ಅರುಹಿದರೆಂಬ ವದಂತಿಯಿದೆ.

ನೋಡಿಲಿಂಗದ ಮುಂದೆಸೆವ ಕಳೆ
ಗೂಡಿರುವ ಬಸವಣ್ಣನಂ ನಡೆ
ನಾಡೆನೀ ಮುಂದಕ್ಕೆನಲು ತದ್ಗುರುವು ನುಣ್ಣಲಿಂ
ಮಾಡಿರುವ ತನ್ಮೂರ್ತಿ ನಡೆದುದು
ಮೂಡಿಸುತ್ತಚ್ಚರಿ ನಲವುಗಳ
ನೋಡುದಲ್ಲಿಯ ಜನರ ಮನದೋಲ್ ನಡೆದಲೀಲೆಯದಾ
(ನಾಗೇಶ ಶಾಸ್ತ್ರಿ ವೈ. ಲೀಲಾಮೃತ ಸಂಧಿ ೭ ಪು. ೮೧).

ಅವಧೂತರು ಅಸಾಧ್ಯ ಪುರುಷರು ಒಮ್ಮೆಮ್ಮೊ ನಿಸರ್ಗದೊಡನೆ ಸಂಭಾಷಿಸುತ್ತಿದ್ದರು. ಅದಕ್ಕೆ ಪೂರಕವಾಗಿ ಯೇಸುಕ್ರಿಸ್ತನ ಒಂದು ಪವಾಡವನ್ನು ನೋಡಬಹುದು. ಒಮ್ಮೆ ಯೇಸುವು ತನ್ನ ಶಿಷ್ಯರನ್ನು ಕರೆದುಕೊಂಡು ಆಚೆ ದಡಕ್ಕೆ ಸೇರಲು ಹಡಗಿನಲ್ಲಿ ಪಯಣಿಸುತ್ತಿದ್ದರು. ಆಗ ಇದ್ದಕ್ಕಿದ್ದಂತೆ ಬಿರುಗಾಳಿಗೆ ಸಮುದ್ರದ ಅಲೆಗಳು ಬಂದು ತಾವು ಪಯಣಿಸುತ್ತಿದ್ದ ಹಡಗಿಗೆ ಬಂದು ಬಡಿದಾಗ ಅಲ್ಲೋಲ

ಕಲ್ಲೋಲವಾಯಿತು. ಶಿಷ್ಯರು ಹೆದರಿದಾಗ ಯೇಸುವು ನಿದ್ರೆಯಿಂದ ಮೇಲೆದ್ದು ಬಿರುಗಾಳಿಯನ್ನು ಕುರಿತು ಸುಮ್ಮನಿರು ಎಂದು ಅಲೆಗಳಿಗೂ ಆಜ್ಞೆಮಾಡಿದ ತಕ್ಷಣವೇ ಆ ಮಹಾಪುರುಷನ ಎಂಬ ಬಿರುಗಾಳಿಯು ಸಮುದ್ರದ ಅಲೆಗಳು ಶಾಂತವಾದವು ಎಂದು ಬೈಬಲ್ ಹೇಳುತ್ತದೆ (ಹೊಸ ಒಡಂಬಡಿಕೆಯ ಸುವಾರ್ತೆಗಳು ಯಾವ ಪುಸ್ತಕಗಳಲ್ಲಿ ಬರೆಯಲ್ಪಟ್ಟಿದೆ).

ಚೀಕಲಗುರಿಕೆ ಮತ್ತು ಬುಧಗವಿಗೂ ಮಧ್ಯವಿರುವ ಹಳ್ಳದ ದಂಡೆಯ ಮೇಲಿನ ದಾಸಯ್ಯನ ಹೊಲದಲ್ಲಿ ತಾತ ಬಂದು ಇರುತ್ತಿದ್ದನು. ಭಾರಿಮಳೆ ಬರುವ ಸಂಭವವಿದ್ದರಿಂದ ದಾಸಯ್ಯನು ತಾತನನ್ನು ಕರೆದಾಗ ಮುನಿ ಪುಂಗವನು ಬಾಯ್ದೆರೆಯಲಿಲ್ಲ. ಕುಳಿತಲ್ಲಿಂದ ಎದ್ದು ಕಾಲು ಕಿತ್ತಲಿಲ್ಲ. ಅಷ್ಟರಲ್ಲಿಯೇ ಮಳೆ ಹೆಚ್ಚು ಬಾರಿಸಿತು. ದಾಸಯ್ಯ ಓಡಿಹೋಗಿ ಚೌಟಿಗೆ ಅಡಗಿಕೊಂಡ. ಮನುಷ್ಯ ಪ್ರಮಾಣಕ್ಕೂ ಮೀರಿ ಹಳ್ಳ ಸೆಳವಿಗೆ ಏರಿಬಂದು ಕುಳಿತ ತಾತ ನೀರಿನಲ್ಲಿ ಮರೆಯಾದ. ಹಳ್ಳದ ಸೆಳವಿಗೆ ಹುಚ್ಚ ಕೊಚ್ಚಿಕೊಂಡು ಹೋಗಿರಬಹುದೆಂದು ದಾಸಯ್ಯಾ ಭಾವಿಸಿದ. ಹಳ್ಳ ಇಳಿದ ಮೇಲೆ ಇದ್ದಲ್ಲಿಯೇ ಇದ್ದ ತಾತನನ್ನು ಕಂಡು ದಾಸಯ್ಯಾ ತಾನೇ ಹುಚ್ಚನಲ್ಲದೆ ಆತನಲ್ಲ ಎಂದುಕೊಂಡು ತಾತನು ಮಹಾತ್ಮನೆಂದು ಊರಲ್ಲಿ ಕಂಡವರಿಗೆಲ್ಲಾ ತಿಳಿಸಿದ.

**೪. ಮುಸ್ಲಿಂ ಯುವಕನಿಗೆ ಕಂಡ ಆಶ್ಚರ್ಯ**

ಮುಷ್ಟೂರನ್ನು ಬಿಟ್ಟು ತಾತ ಉರವಕೊಂಡಕ್ಕೆ ಬಂದನು. ತಾತನಿಗೆ ಈಜುವ ಹವ್ಯಾಸವಿತ್ತು. ತಾಸುಗಟ್ಟಲೇ ದಿನಗಟ್ಟಲೇ ಈಜುತ್ತಿದ್ದನಂತೆ. ಊರವಕೊಂಡ ಊರಿನವರಿಗೂ ತಾತನ ಮಹಿಮೆ ಗೊತ್ತಾಗಿತ್ತು. ಯಾರಾದರೂ ಏನಾದರೂ ಕೊಟ್ಟರೆ ತಿನ್ನುವುದು ಮತ್ತೇ ನೀರಿನಲ್ಲಿ ಮುಳುಗುವುದು ಮನಸ್ಸಿಗೆ ಬಂದಾಗ ಹೊರಬರುವುದು. ಹೀಗಿರಲು ಒಂದು ದಿನ ಬಾವಿಯಲ್ಲಿ ಮುಳುಗಿದ್ದ ತಾತನು ಈಜಿ ಗಡ್ಡೆಗೆ ಬರುವಾಗ ಬಾವಿಯ ಗಡ್ಡೆಯ ಮೇಲೆ ನಿಂತಿದ್ದ ಮುಸಲ್ಮಾನ ಪೋಕರಿಯೊಬ್ಬನು ಬೇಕೆಂದೇ ನೀರಿನಲ್ಲಿದ್ದ ತಾತನ ಮೇಲೆ ಕುಪ್ಪಳಿಸಿ ಹಾರಿದ. ಅದರ ಪರಿಣಾಮವಾಗಿ ತಾತನು ಮತ್ತೇ ನೀರಿನಲ್ಲಿ ಆಳವಾಗಿ ಮುಳುಗಿಹೋದ. ಭಯಗ್ರಸ್ಥನಾದ ಆ ಮುಸ್ಲಿಂ ಯುವಕನು ಬಾವಿಯಲ್ಲಾ ಹುಡುಕಿ ತಾತ ಸಿಕ್ಕದಾದಾಗ ಸತ್ತನೆಂದು ತಿಳಿದು ತಪ್ಪಿಸಿಕೊಳ್ಳಲು ನುಸುಳಿಕೊಂಡು ಊರೊಳಗೆ ಬರುತ್ತಿದ್ದಾಗ ಬಸವಣ್ಣ ದೇವರ ಗುಡಿಯಲ್ಲಿ ಬಸವಣ್ಣನಿಗೆ ಪತ್ರೆ ಧರಿಸುತ್ತಾ ನಿಂತಿದ್ದ ತಾತನನ್ನು ಕಂಡು ಭಯಗೊಂಡು 'ಇಂಥಾ ಮಹಾತ್ಮನಿಗೆ ನಾನು ಅಪಚಾರ ಎಸಗಿದೆನಲ್ಲ ನನ್ನ ಮನೆ ಹಾಳಾಗಿ ಹೋಗುತ್ತದೆ' ಎಂದು ಚಿಂತಿಸಿದ ಅದರಂತೆಯೇ ಅವನ ಮನೆಯು ಸರ್ವನಾಶವಾಯಿತು.

ಹುಚ್ಚನಂತೆ ತಿರುಗುತ್ತಿದ್ದ ತಾತನ ಮೇಲೆ ಉರವಕೊಂಡೆಯ ಹುಡುಗರು ಪುಂಡಪೋಕರಿಗಳಾಗಿ ಕಲ್ಲೆಸೆಯುತ್ತಿದ್ದರು. ಅದನ್ನೆಲ್ಲಾ ಸಹಿಸಿಕೊಂಡು ಪ್ರತಿಕ್ರಿಯೆ ಏನನ್ನೂ ಮಾಡದೆ ತಾತನು ಬೀದಿಯಲ್ಲಿ ತಿರುಗುತ್ತಿದ್ದರು. ಕಡುಬಡವರಾಗಿದ್ದ ಜೀಜಮ್ಮನ ಮನೆತನ ತಾತನ ಸೇವೆಯಿಂದ ಉದ್ಧಾರವಾಯಿತು. ಜೀಜಮ್ಮನ ಮನೆಯಲ್ಲಿ ಸ್ನಾನಮಾಡಿಸಿ ಊಟಮಾಡಿಸಿದರೆ ಗೌಡರ ಬಾವಿಯಲ್ಲಿಯೋ ಕೆರೆಯಲ್ಲಿಯೋ

ಹೋಗಿ ಮುಳುಗುವುದು 'ರಂಗಾಯ್ಯ ನಿನ್ನ ಪಾದ ಬೆಂದ' ಎಂದು ಇಷ್ಟೆ ನಾಲ್ಕು ಮಾತನ್ನು ಇಷ್ಟಬಂದಷ್ಟು ಹೊತ್ತು ಸರಾಗವಾಗಿ ಹಾಡುತ್ತಾ ಬಜಾರದಲ್ಲಿ ಸುತ್ತಾಡುವುದು, ಇಲ್ಲವೆ ಯಾವುದಾದರು ಗುಡಿಯ ಹಜಾರದಲ್ಲಿಯೋ ಕುಳಿತುಕೊಳ್ಳುವುದು ಇದು ಎರ್ರಿತಾತನ ದಿನಚರಿಯಾಗಿತ್ತು.

ಜೀಜಮ್ಮನ ಮನೆಗೆ ಎರ್ರಿತಾತನು ಬರುವ ಮುಂಚೆ ಅಲ್ಲಾಸ್ವಾಮಿ ಎಂಬ ಮಹನೀಯನು ಬರುತ್ತಿದ್ದನಂತೆ. ಯಾರೇ ಸತ್ಪುರುಷರು ಬಂದರೂ ಉಪಚರಿಸಿ ಆಶೀರ್ವಾದ ಹೊಂದುತ್ತಿದ್ದಳು. ಎರ್ರಿತಾತನನ್ನು ಮುಸ್ಲಿಂಯುವಕ ಕೆಣಕಿದ್ದರಿಂದ ಆತನಿಗೆ ಶಾಪ ಕೊಡುತ್ತಾನೆ. ಆದರೆ ಯೇಸುಸ್ವಾಮಿಯು ವಿಭಿನ್ನ ವ್ಯಕ್ತಿತ್ವವನ್ನು ಹೊಂದಿರುವುದು ಕಂಡುಬರುತ್ತದೆ. ತನ್ನನ್ನು ನಿಂದಿಸಿದವನಾ ಕ್ಷಮಿಸಿ, ತನ್ನನ್ನು ಶಪಿಸುವವರನ್ನು ಆಶೀರ್ವಾದಿಸು, ಒಂದು ಕಪಾಳಕ್ಕೆ ಹೊಡೆದರೆ ಇನ್ನೊಂದು ಕಪಾಳವನ್ನು ಒಪ್ಪಿಸು ಹಾಗೂ ನಿನ್ನಂತೆಯೇ ನಿನ್ನ ನೆರೆಯವರನ್ನು ಪ್ರೀತಿಸು ಎಂಬುದು ಈತನ ದೈವೋಕ್ತಿ ಇಲ್ಲ, ದೈವೀಶಕ್ತಿ ಎಂದು ಕರೆಯುವ ಇಬ್ಬರಲ್ಲಿ ವಿಭಿನ್ನತೆಯ ಅಂಶವನ್ನು ನಾನು ಕಾಣಬಹುದು.

**೫. ಕಳ್ಳರೇ ತಲೆ ಹೊಡೆದುಕೊಂಡದ್ದು**

ಎರ್ರಿತಾತನವರು ಅಲ್ಲಲ್ಲಿ ತಿರುಗಾಡುತ್ತಾ ಬಂದು ಒಂದು ದಿನರಾತ್ರಿ ಮುಸ್ಟೂರಿನ ಜಂಬುನಾಥ ಬಸವಣ್ಣನ ಗುಡಿಯಲ್ಲಿ ಮಲಗಿರಲು ಕೆಲವು ದರೋಡೆಗಾರರು ಬಂದು ಈ ಎರ್ರಿಯವನು ದೇವರು ಹೇಳ್ತಾನಂತೆ ಕೇಳಿ ಲೂಟಿಗೆ ಹೋಗೋಣ ಎಂದು ತಾತನನ್ನು ಕುರಿತು ಕೇಳಿದರು.

ಇಂತು ಲೀಲಾಜಾಲಮಂ ತಾ
ನಾಂತ ತಾತನದೊಂದಿರುಳುನಿ
ಶ್ಚಿಂತಯಿಂ ಮಲಗಿರಲು ಬಸವಣ್ಣನ ಗುಡಿಯೊಳಂದು
ಅಂತಿಕಕ ಕೆಲಕಳ್ಳ ರೈತಂ
ದಾಂತನಗೆಯಿಂ ನಮ್ಮ ಕಳವಿಗೆ
ನೇಂತಿಳಿಸುಗೆಲವಾಗುವುದನೆಂದವರು ಪೀಡಿಸುತೇ
(ನಾಗೇಶ ಶಾಸ್ತ್ರಿ ಲೀಲಾಮೃತ ಸಂಧಿ ಏಳು ಪು. ೮೬).

"ತಾತ ಕಳ್ಳತನಕ್ಕೆ ಹೋಗುವೆವು ಜಯವಾಗುವುದೋ ಇಲ್ಲವೋ ಹೇಳು" ಎಂದು ಕೇಳಲು ಅಂತರ್ಮುಖಿಯಾಗಿದ್ದ ತಾತನು ಅದನ್ನು ನಿರ್ಲಕ್ಷಿಸಿ ಸುಮ್ಮನೆ ಇದ್ದ. ಆತನ ಮೌನವನ್ನು ಸಹಿಸದೆ ಅಸಹ್ಯ ಜೀವಿಗಳು ತಾವು ತಂದಿದ್ದ ತೆಂಗಿನ ಕಾಯಿಯನ್ನು ಸಿಟ್ಟಿನಿಂದ ತಾತನ ತಲೆಗೆ ಹೊಡೆದು ಹೋದರು. ಹೊಡೆದರೂ ತಾತನು ಸಮ್ಮನಿದ್ದ. ಬಾಹ್ಯದ ಆಘಾತಗಳು ಆತನ ಅಂತಸ್ಸಮಾಧಿಯನ್ನು ಭಂಗಗೊಳಿಸಲಿಲ್ಲ. ಹೊಡೆದ ಆ ಕಳ್ಳರು ಮಾತ್ರ ಕಷ್ಟಕ್ಕೀಡಾದರು. ಗುಡದೂರು ರಂಗಯ್ಯನ ಮನೆಯಲ್ಲಿ ಕಳವು ಮಾಡಿ ಕೆಲವರು ಸಿಕ್ಕಿ ಜೈಲಿಗೆ ಹೋದರು. ಕೆಲವರು ಹೊಡೆದಾಡಿ ಸತ್ತರು.

"ಚೋರರ ವರಾಗಮಿಸ್ಸತಂ ಗುಡ
ದೂರ ರಂಗಯ್ಯನ ನಿಲಯದೋಲ್

ಭೂರಿಧನಮಂ ಕದ್ದು ಕೆಲವರು ಸಿಕ್ಕು ಸೆರೆಮನೆಯಾ
ಸೇರಿದರು ಯಮಸದನಮಂ ಕೈ
ಸೇರಿರುವ ಹಣಕ್ಕಾಗಿ ತಮ್ಮೊಳೆ ಬಿಡದೆ ಹೊಡೆದಾಡಿ"

ಇಲ್ಲಿ ಕಳ್ಳರು ತಮ್ಮಷ್ಟಕ್ಕೆ ತಾವು ಹೊಡೆದಾಡಿ ಸತ್ತರು ಎಂದು ತಿಳಿಯುತ್ತದೆ. ಕೆಲವು ಲೇಖನಗಳ ಪ್ರಕಾರ ತಾತನ ತಲೆಗೆ ಹೊಡೆದಾದ ಕಳ್ಳರ ತಲೆಯಲ್ಲಿ ರಕ್ತಬರುತ್ತಿತ್ತು ಎಂಬುದು ತಿಳಿಯುತ್ತದೆ.

ಕೆಲವು ಸಮಯದಲ್ಲಿ ಕೋಪಿಷ್ಟನಾಗಿದ್ದರೂ ಭಕ್ತ ಜನರ ಸಂಕಷ್ಟ ಹಾಗೂ ಬದುಕನ್ನು ಹಸನಮಾಡಿದ್ದೆ ಹೆಚ್ಚು. ಒಮ್ಮೆ ಎಲಿಗೊಂಡ ಬಸಪ್ಪ ಎಂಬುವರು ಬುತ್ತಿಯನ್ನೊಯ್ದು ತಾತನಿಗೆ ಉಣಿಸುತ್ತಿದ್ದರಂತೆ. ಒಂದುದಿನ ತಾತನು ತನಗಾಗಿ ಯಾರೋ ತಂದಿಟ್ಟಿದ್ದ ಒಂದು ದೊಡ್ಡ ಬೆಲ್ಲದ ಹಲಗೆಯನ್ನು ಬಸಪ್ಪನಿಗೆ ಕೊಟ್ಟನಂತೆ. ತಾತನ ಆಶೀರ್ವಾದದ ಫಲವಾಗಿ ಆತನ ಪರಿಸ್ಥಿತಿಯು ಅದರಿಂದ ಸುಧಾರಿಸಿತು.

**೬. ಕುತ್ತಿಗೆಗೆ ಸುತ್ತಿದ ಸರ್ಪದ ಮಹಿಮೆ**

ನಾಗವೊಂದ್ಯೆತಂದು ತಚ್ಛಿವ
ಯೋಗಿ ಕಂಡದೆ ಸುತ್ತಿಕೊಂಡನು
ರಾಗದಿಂದರದೆತ್ತಿ ಹೆಡೆಯಾಡಿ ಸುತಿರಲು ಕಂಡು
ಪೋಗದೆಯ ಸನಿಹಕ್ಕೆ ದೂರದೊ
ಳಾಗುಶೊತ್ತಮಗೆರಗಿ ಭಕ್ತರು
ಪೋಗುತಿರ್ದರು ಸತ್ಯಮಯದೋಳ್ ಬಿಟ್ಟು ನೆಲೆಯದನು
(ನಾಗೇಶ ಶಾಸ್ತ್ರ ವೈ. ಲೀಲಾಮೃತ ಸಂಧಿ. ೮, ಪು. ೯೩).

ಎರ್ರಿತಾತನು ಸಂಚಾರಿಶೀಲನಾಗಿ ಉರವಕೊಂಡ ಗ್ರಾಮವನ್ನೆ ಬಿಟ್ಟು ಯೋಗ ಮಗ್ನರಾಗಿ ತನ್ನಿಚ್ಛೆ ಬಂದಲ್ಲಿಗೆ ನಡೆದು ವೆಲಗೊಂಡಗೆ ಬಂದನು. ಈ ಪ್ರಾಂತ್ಯದಲ್ಲಿ ಸುತ್ತುತ್ತಿದ್ದಾಗ ಮಳೆಗಾಲವೆಂದು ಕಾಣುತ್ತದೆ. ಮಳೆಬಂದು ಹಳ್ಳಕೊಳ್ಳಗಳು ತೇಲಿಸಿಕೊಂಡು ಬಂದ ಕಸಕಡ್ಡಿಗಳು ತನ್ನ ಮೇಲೆ ತೆಪ್ಪಗಟ್ಟಿ ಮುಚ್ಚಿಕೊಂಡರೂ ತಾತನು ಎಚ್ಚರವಿಲ್ಲದ ಪರವಶ ಸ್ಥಿತಿಯಲ್ಲಿಯೇ ಇರುತ್ತಿದ್ದನೆಂದು ತೋರುತ್ತದೆ "ಒಮ್ಮೆ ತಾತನು ಮಲಗಿದ್ದಾಗ ಹಾಡುಹಗಲಲ್ಲೇ ಒಂದು ನಾಗರಹಾವು ಸುತ್ತಿಕೊಂಡು ಆಡುತ್ತಿತ್ತು. ಆತನಿಗೆ ಸುತ್ತಿಕೊಂಡು ಆಡಿದ ಹಾವು ಸಾಮಾನ್ಯ ಸರ್ಪವಲ್ಲ ಅದು ಆತನ ಉದ್ಬುತ್ಮೋನ್ಮತ ಕುಂಡಲಿನೀ ಶಕ್ತಿಯ ಯೌಗಿಕ ಸಂಕೇತ. (ಚಂದ್ರಯ್ಯನವರು ಸಂಗ್ರಹ ರಾಮನ ಗೌಡರ ಬಸಪ್ಪ ತಿಳಿಸಿದ್ದು).

ತಾತನು ಶಿಷ್ಟೋಚ್ಛಿಷ್ಟ ಭಾವನೆಯೇ ಇಲ್ಲದಂತೆ ಸಿಕ್ಕಿದ್ದನ್ನು ಸಿಕ್ಕ ಸಿಕ್ಕಲ್ಲಿ ಸ್ವೇಚ್ಛೆಯಿಂದ ತಿನ್ನುತ್ತಾ ಇರುವಾಗ ನಾಯಿಗಳೂ, ಕಾಗೆಗಳು ಬಂದು ಆತನ ಜೊತೆಗೆ ಸೇರುತ್ತಿದ್ದವಂತೆ. ಅವುಗಳೊಂದಿಗೆ ಸಂತುಷ್ಟನಾಗಿ ತಾತನು ತಿನ್ನುತ್ತಿದ್ದ ಅವುಗಳಿಗೂ ತಗೊಳ್ಳಿರಯ್ಯಾ! ಎಂದು ತಿನಿಸುತ್ತಿದ್ದ.

"ಶುನಿ ಶ್ವಪಚ ಶ್ವಪಕಾಘ ಪಂಡಿತಾ ಸಮದರ್ಶಿತಾಃ" ಎಂಬ ಮಾತು ಇಂತಹ ಯೋಗಿಗಳನ್ನು ಕುರಿತೇ ಹೇಳಿದ್ದು. ಹೇಯೋಪಾದೇಯ ಭಾವಾಭಾವಾ ವಿವಜೀತನಾಗಿ ಬಾಲೋನ್ಮತ್ತಪಿಶಾಚವತಾ ಸಂಚರಿಸುವ ಅವಧೂತನನ್ನು ಕುರಿತೇ.

ಸಂಧಿಗ್ನ: ಪರ್ವ ಭೂತಾನಾಂ ವರ್ಣಾಶ್ರಮ ವಿವರ್ಜಿತಃ!

ಅಂಥವತ್ ಜಡವಚ್ಚಾಪಿ ಮೂಕವೆಚ್ಚ ಮಹೀಂ ಚರೇತ್॥ ಎಂದು ಉಪನಿಷತ್ ಸಾರುತ್ತದೆ. ಸರ್ವವೂ ಶಿವಮಯವಾಗಿ ಕಾಣುವಾಗ ಯಾವುದು ಪ್ರಸಾದ, ಯಾವುದು ಪದಾರ್ಥ? ತಾನೇ ಶಿವಸ್ವರೂಪನಾದವನಿಗೆ ಯಾವುದರಿಂದ ಏನು ಆತಂಕ.

೭. ಜ್ವರವನ್ನು ವಾಸಿಮಾಡಿದ್ದು

ಯೌಗಿಕ ಪರಂಪರೆಯಲ್ಲಿ ಗಿಡಮರಗಳೇ ಔಷಧಿಗಳಾಗಿ ಕೆಲವೊಮ್ಮೆ ಆಧುನಿಕ ಲೋಕಕ್ಕೆ ಸವಾಲಾಗಿರುವ ರೋಗ ರುಜಿನಗಳನ್ನು ಗುಣಪಡಿಸುವ ಶಕ್ತಿಯಿದೆ. ಅವರವರ ಭಾವನೆಗಳು ಕೇಂದ್ರತ್ವವನ್ನು ಪಡೆಯುತ್ತವೆ. ಬಸವಣ್ಣನವರ ವಚನದ ಸಾರಯಂತಿದೆ.

ನಂಬಿದಡೆ ಪ್ರಸಾದ ನಂಬಿದಿದ್ದಡೆ ವಿಷವು
ತುಡುಕಬಾರದು ನೋಡಾ, ಲಿಂಗನ ಪ್ರಸಾದ ಸಂಗನ ಪ್ರಸಾದ
ಕೂಡಲ ಸಂಗನ ಪ್ರಸಾದ ಸಿಂಗಿ ಹಾಳಕೂಚ ವಿಷವು
ಎಂಜಲುಂಟೆ ಪ್ರಸಾದ ವಿದ್ದೆಡೆಯಲ್ಲಿ?
ಅಪವಿತ್ರವ ನುಡಿಯ ನುಡಿವ ಸೂತಕವೆ ಪಾತಕ
(ವ್ಹಿ.ಜಿ. ಪೂಜಾರ ವೀರಶೈವ ಸಾಹಿತ್ಯದಲ್ಲಿ ಪವಾಡ ಕಥೆಗಳು ಪು. ೫೫).

ಭಕ್ತರನ್ನು ಭವದ ಜಂಜಾಟದಿಂದ ಬಿಡಿಸುವುದು ದೈವೀಶಕ್ತಿಯ ಬಹುಪಾಲು ಸಿದ್ಧತ್ವ. ಅನೇಕ ಸಿದ್ಧಿಗಳನ್ನು ಊರು ಊರುಗಳಲ್ಲಿ ಮಾಡುತ್ತ, ಅನೇಕ ರೀತಿಯ ಪೂಜೆ ಪುನಸ್ಕಾರಗಳಿಂದ ಭಕ್ತರ ಹೃದಯದಲ್ಲಿ ದೈವತ್ವ ಸ್ಥಾಪಸಿದನು. ಒಮ್ಮೆ "ಮಕ್ಕಳಿಗೆ ಜ್ವರ ಬರುತ್ತಿದೆ ತಾತ ಏನು ಮಾಡಬೇಕು" ಎಂದು ಕೇಳಿದ ತಾಯಂದಿರಿಗೆ ತಾತನು "ಬೆಲ್ಲ ತಾ, ನಿಲ್ಲಿಸ್ತೀನಿ"! ಎಂದು ಹೇಳುತ್ತಿದ್ದ. ಅದರಂತೆಯೇ ಜ್ವರ ನಿಲ್ಲುತ್ತಿತ್ತು. ಇನ್ನು ಕೆಲವರು ಕೇಳಿದರೆ "ಜಯನತುಃ ಪಾರ್ವತೀಪತಿ ಹರಹರ ಮಹಾದೇವ" ಎನ್ನುತ್ತಿದ್ದರಂತೆ ತಾತ. ತಾತ ಹಾಗೆಂದಾಗ ಅವರ ಮಕ್ಕಳು ಸಾಯುತ್ತಿದ್ದವು. ಹೀಗೆ ಅಲೌಕಿಕ ಶಕ್ತಿಗಳನ್ನು ಪ್ರೀತಿಸಿದರೆ ಒಳ್ಳೆಯದು ದ್ವೇಷಿಸಿದರೆ ತೊಂದರೆಗಳು. ಪ್ರಪಂಚವೆಲ್ಲವೂ ಆ ಅಲೌಕಿಕ ಶಕ್ತಿಗಳ ಮಾಯೆ ಅವುಗಳ ಪ್ರೀತಿಯೇ ಸಕಲ ಸೌಭಾಗ್ಯಗಳನ್ನೊದಗಿಸಿಕೊಳ್ಳುವ ಮಾರ್ಗ ಎಂಬುದು ಪ್ರಸ್ತುತ ಅಧ್ಯಯನದಿಂದ ತಿಳಿಯಬಹುದು.

೮. ಕಹಿ ನೀರನ್ನು ಸಿಹಿ ನೀರಾಗಿಸಿದ್ದು

ಪವಾಡಗಳು ಯಾವಾಗಲೂ ಒಳ್ಳೇಯದನ್ನೆ ಮಾಡುತ್ತವೆಯೆಂಬ ಭಾವನೆಯಿಂದ ಜನ ಇವುಗಳ ಮೇಲೆ ನಂಬಿಕೆಯಿಟ್ಟು ಪವಾಡ ಪುರುಷರನ್ನು ಪೂಜಾಭಾವನೆಯಿಂದ ಕಾಣುವುದುಂಟು. ಮಂತ್ರವಾದಿಗಳು ವೈಯಕ್ತಿಕ ಲಾಭ, ಸ್ವಾರ್ಥಕ್ಕಾಗಿ ಜನತೆಗೆ, ಸಮಾಜಕ್ಕೆ ಅಹಿತವನ್ನು ಮಾಡಲು ಹಿಂದೆ ಮುಂದೆ ನೋಡದರು ಆದುದ್ದರಿಂದ ಜನ ಇವರನ್ನು ಹೀಗೆ ಕೀಳಾಗಿ ಪರಿಗಣಿಸಿರುವುದುಂಟು.

ಒಮ್ಮೆ ಎರ್ರಿತಾತನು ಕರೂರು ಕೊನೆಕೊಂಡ್ಲದ ಮಧ್ಯದ ಮುಮ್ಮುದ್ರಗನ ಬಾವಿಯ ಹತ್ತಿರ ತಾತನಿದ್ದ ಸುದ್ದಿಯನ್ನು ಕೇಳಿ ಊರೊಳಗೆ ಕರೆತರಲು ಗಟ್ಟು ಮಲ್ಲೇಶಪ್ಪ, ಬರಗುಂಟ್ಲ ಮಲ್ಲಪ್ಪ, ಚೆನ್ನಮಲ್ಲಪ್ಪ ಅಲ್ಲಿಗೆ ಹೋಗಲು ತಾತನಿದ್ದ ಬಾವಿಯ ನೀರು ಹಸಿರು ಪಾಚಿಗಟ್ಟಿ ದುರ್ವಾಸನೆ ಹೊಡೆಯುತ್ತಿತ್ತಂತೆ. ಕರೆಯಲು ಬಂದವರನ್ನು ಕುರಿತು "ನೀರು ಕುಡಿಯಿರಿ ಹೋಗೋಣ" ಎಂದರಂತೆ ತಾತನವರು. ಅವರು ಅನುಮಾನಿಸುತ್ತಾ ಕುಡಿಯಲು ನೀರು ಸೊಗಸಾಗಿತ್ತಂತೆ. ಶರಣರು ತಾನು ಮತ್ತು ಶಿವ ತತ್ವಃ ಒಂದೇ ಎಂದು ಅರಿತುಕೊಂಡಿದ್ದರೂ. ಆ ಶಿವನನ್ನು ಎದುರಿಟ್ಟು ತನ್ನ ಸರ್ವಸ್ವವನ್ನು ಆತನಿಗೆ ಅರ್ಪಿಸುವುದರಿಂದ ಉಂಟಾಗುವ ಆನಂದವನ್ನು ಅನುಭವಿಸಲು ಆಕಾಂಕ್ಷೆಯುಳ್ಳವನು ಮತ್ತು ಆ ಆನಂದದ ಫಲವನ್ನು ಸಮಾಜಕ್ಕೆ ನೀಡುವ ಬಯಕೆಯುಳ್ಳವನು. ಸಾಧಕ ತಾನೊಬ್ಬನ ಮೋಕ್ಷವನ್ನು ಗುರಿಯಾಗಿಟ್ಟುಕೊಂಡರೆ ಸಾಲದು, ಸಮಾಜದ ಒಳಿತಿಗೂ ಆತನ ಸಾಧನೆ ಕಾರಣವಾಗಬೇಕು. "ಸಕಲ ಪ್ರಾಣಿಗಳಿಗೆ ಲೇಸಾಗಲೆಂದು ಮಜ್ಜನಕ್ಕೆರೆವ ಲಾಂಛನಧಾರಿಗಳ ವೇಷಕ್ಕೆ ಶರಣೆಂಬನಯ್ಯಾ ಎನ್ನುತ್ತಾನೆ ಚನ್ನಬಸವಣ್ಣ ಅದೇ ರೀತಿ ಸಿದ್ಧರಾಮ ಹೀಗೆ ಹೇಳುತ್ತಾನೆ.

ಮಾಡಿದರು ಮಾಡಿದರು ತಮ್ಮ ಹಿತಕ್ಕಲ್ಲದೆ
ಮತ್ತಾರ ಹಿತಕ್ಕಲ್ಲ ನೋಡಯ್ಯಾ!
ನೋಡಿದರು ನೋಡಿದರು ತಮ್ಮ ಹಿತಕ್ಕಲ್ಲದೆ
ಮತ್ತಾರ ಹಿತ್ತಕ್ಕಲ್ಲ ನೋಡಯ್ಯಾ!
ತಮ್ಮ ಬಿಟ್ಟನು ಹಿತವ ನೋಡಿದರೆ ಕೂಡಿಕೊಂಬ
ನಮ್ಮ ಕಪಿಲಸಿದ್ಧಮಲ್ಲಯ್ಯ

ತನ್ನ ಬಿಟ್ಟು ಅನ್ಯ ಹಿತವ ನೋಡುವುದು ಇದು ಪ್ರತಿ ವ್ಯಕ್ತಿ ಸಮಾಜಕ್ಕೆ ಸಲ್ಲಿಸಬೇಕಾದ ಋಣ. ಅದರಂತೆ ಎರ್ರಿತಾತನು ತನ್ನ ಮೇಲೆ ಪರಿವೆಯಿಲ್ಲದೆ ಇದ್ದುದ್ದನ್ನೆಲ್ಲವ ಬಿಟ್ಟು ಇಲ್ಲದುದರ ಕಡೆಗೆ ಸಾಗುತ್ತಾ ಭಕ್ತ ಜನರ ಬಂಧನ ಹಾಗೂ ಬಡತನ ನಿವಾರಿಸುತ್ತಾ ಸಮಾಜದ ಹಿತಕ್ಕೆ ಮುನ್ನುಡಿ ಬರೆಯುತ್ತಾ ದಿನದಿಂದ ದಿನಕ್ಕೆ ಭಕ್ತರ ಗುಂಪು ಹಿರಿದಾಯಿತು.

ಸಾಮಾನ್ಯವಾಗಿ ಪವಾಡಗಳಿಗೆ ಜನತೆಯ ಬೆಂಬಲ ಹಾಗೂ ನಂಬಿಕೆಗಳೇ ಭದ್ರ ಬುನಾದಿಯಾಗಿವೆ. ಇವುಗಳ ಆಧಾರದ ಮೇಲೆಯೇ ನಿಂತುಕೊಂಡು ಇಂದಿನವರೆಗೂ ಪ್ರಚಲಿತದಲ್ಲಿದ್ದುದನ್ನು ಗಮನಿಸಬಹುದು. ಮಾಟ ಮಂತ್ರಗಳು ಕೇವಲ ಪರಪೀಡನೆಯ ಶಕ್ತಿಯಿಂದ ಜನತೆಯಲ್ಲಿ ಪ್ರಭಾವ ಬೀರಿದರೆ, ಪವಾಡ ಶಕ್ತಿಯು ಇಂತಹ ಹೆದರಿಕೆಯಿಂದ ಪ್ರಭಾವವನ್ನುಂಟು ಮಾಡದೆ ಜನತೆಯಲ್ಲಿ ಭಕ್ತಿ ಶ್ರದ್ಧೆಯನ್ನು ಮೂಡಿಸುವುದರ ಮೂಲಕ ಪ್ರಭಾವ ಬೀರುತ್ತದೆ. ಹೀಗೆ ಎರ್ರಿತಾತನು ತನಗೆ ತಾ ಮರೆತು, ಭಕ್ತ ಜನರ ಉದ್ಧಾರಕ್ಕಾಗಿ ಮರುಗಿದರು. ಸತತ ಯೋಗಧ್ಯಾನಗಳಿಂದ ಪರಿಪೂರ್ಣರಾಗುತ್ತಾ ತಾನು ಮೊದಲು ಮಾರ್ಗವನ್ನು ಕಂಡುಕೊಳ್ಳಬೇಕು ಇಲ್ಲದಿದ್ದರೆ ಕುರುಡನಿಗೆ ಕುರುಡನೇ ದಾರಿ ತೋರಿಸಿದಂತಾಗುತ್ತದೆ.

ಆದ್ದರಿಂದ ತಮ್ಮ ಜೀವನವೇ ಜೀವಂತ ಆದರ್ಶವಾಗುವಂತೆ ಎರ್ರಿತಾತನು ಬದುಕಿದರು. ಮತ್ತು ಅಷ್ಟರಿಂದಲೇ ತೃಪ್ತರಾಗದೆ ದೀನರನ್ನು, ದುಃಖಿಗಳನ್ನು, ಆರ್ತರನ್ನು ಒಳಗೊಂಡು ಎಲ್ಲರನ್ನು ತಮ್ಮ ಬಳಿಗೆ ಆಕರ್ಷಿಸಿ ಎಲ್ಲಾರಿಗೂ ಉದ್ಧಾರದ ಮಾರ್ಗವನ್ನು ತೋರಿಸಿದರು. ಅವರವರ ಮಟ್ಟದಲ್ಲಿಯೇ ನಿಂತು ಭಕ್ತರನ್ನು ಮೇಲಕ್ಕೆತ್ತಲು ಬಂಧನಗಳಿಂದ ಬಿಡಿಸಲು ಪರೋಕ್ಷವಾಗಿ ಪ್ರಯತ್ನಿಸಿದರು. ಪ್ರಭುದೇವನು ಹೇಳುವಂತೆ.

ನೋಡುವುದ ನೋಡಲರಿಯದೆ ಕೆಟ್ಟಿತೀ ಜಗವೆಲ್ಲ
ನೋಡುವುದ ನೋಡಿಬಲ್ಲದೆ ಕೂಡಲಿಲ್ಲ, ಅಗಲಿಲ್ಲ
ನಿಮ್ಮ ನೋಟದ ಕೂಟದ ಅಗಲದ ಸುಖವನು
ಗುಹೇಶ್ವರಾ ನಮ್ಮ ಶರಣರೇ ಬಲ್ಲರು

ಎರ್ರಿತಾತನು ನೋಡುವ ರೀತಿಯಲ್ಲಿ ನೋಡುವುದನ್ನು ಬಾಳುವ ರೀತಿಯಲ್ಲಿ ಬಾಳುವುದನ್ನು ನೋಡಿ ಬಾಳಿ ತೋರಿದರು.

ಬಂದು ದಿನದಿನದಲ್ಲಿ ಮನಸಿಗೆ
ಬಂದುದಂ ಯಾಚಿಸುವ ಜನಗಳ
ವೃಂದಮದು ಹಿರಿದಾಗ ತೊಡಗಿದ ಕತದೆ ತದ್ಗುರುವು
ಒಂದು ತಿರುವ ಸಮಾಧಿಗಡ್ಡಿಯು
ಬಂದುದೆಂದರಿಯುತ್ತೆ ಮೊರೆಯುತ
ದೊಂದು ನಿಶೆಯೋಳ್ ಗುಡಿಯನಾದ ಕಾಲ ಪಯಣ ವೆಸಗಿದನು

ದಿನದಿಂದ ದಿನಕ್ಕೆ ಹೆಚ್ಚುತ್ತಿರುವ ಭಕ್ತರಿಂದ ತಪ್ಪಿಸಿಕೊಳ್ಳಲು ಸದಾ ಏಕಾಂತತೆಯನ್ನು ಬಯಸಿದ ಎರ್ರಿತಾತನು ಕಲ್ಯಾಣದುರ್ಗ, ಬೆಳಗುಪ್ಪೆ, ವೆಲಗೊಂಡ, ಮಷ್ಠೂರ, ಹಾಗೂ ಚೀಕಲಗುರಿಕೆಯಲ್ಲಿ ಅನೇಕ ಪವಾಡಗಳಿಂದ ಸುತ್ತಿಸುಳಿದಾಡುತ್ತಾ ಎಲ್ಲಿಯೂ ನಿಲ್ಲದೆ ಚೆಳಗುರಿಕೆಯ ಮಾರ್ಗವಾಗಿ ಬಂದರು. ಊರಿಗೆ ಎರಡು ಮೈಲು ದಕ್ಷಿಣಕ್ಕಿರುವ ಮಲ್ಲಪ್ಪನ ಮಟ್ಟಿತಿಪ್ಪೆಯ ಹತ್ತಿರ ಬಂದು ಕೂತಿರಲು ಊರವರಿಗೆ ಈ ವಿಷಯತಿಳಿದು ಊರಿಗೆ ಕರೆತಂದರು. ಎಲ್ಲೆಲ್ಲಿಯೋ ಸಂಚರಿಸಿ ಯಾರವಶಕ್ಕೂ ನಿಲುಕದೆ ಎಲ್ಲಿಯೂ ನಿಲ್ಲದೆ ಚೇಳಗುರಿಕೆಯಲ್ಲಿ ನಿಂತನೆಂದರೆ ಅದು ಗ್ರಾಮಕ್ಕೆ ಬಂದ ಭಾಗ್ಯವಾಗಿದೆ. ಈ ಊರಿಗೆ ಮಹತ್ವ ಬಂದಿರುವುದು ಎರ್ರಿತಾತನವರಿಂದಲೇ ಎಂಬುದು ಕ್ಷೇತ್ರಕಾರ್ಯದಲ್ಲಿ ಒಬ್ಬ ವಕ್ತೃವಿನಿಂದ ತಿಳಿದ ವಿಷಯವಾಗಿದೆ.

ಭಕ್ತ ಜನರ ಬದುಕಿನೊಳಗೆ ಬೆರೆಯುತ್ತ ಕರ್ನಾಟಕ ಆಂಧ್ರ ಎರಡು ಪ್ರದೇಶಗಳ ನಡುವೆ ಭಕ್ತಿಯ ಸೇತುವೆ ನಿರ್ಮಿಸಿ, ಪರಸ್ಪರ ಹೊಂದಾಣಿಕೆಯ ಮನವ ತೆರೆದರು. ಆಡಂಬರದ ಭಕ್ತಿಯ ಅಳಿಸಿ ನಿಜ ಭಕ್ತಿಯ ಮೆರೆದ ಜನರಿಗೆ ಬಂಧುವಾಗಿ ತನ್ನನ್ನು ಜರೆದವರಿಗೆ ಕಂಟಕವಾಗಿ ಭಾಧಿಸಿದರು ಎಂದು ತಿಳಿಯುತ್ತದೆ.

ಅನೇಕ ಗ್ರಾಮಗಳಲ್ಲಿ ಹಲವಾರು ರೀತಿಯ ಪವಾಡ ಸಾದೃಶ್ಯಗಳಿಂದ ಭಕ್ತರ ಸಮೂಹವು ಹೆಚ್ಚಾಗಿ, ಪೂಜೆ ಪುನಸ್ಕಾರ ಗೌರವಗಳಿಂದ ಆರಾಧ್ಯದೈವವಾಗಿ ಶಾಶ್ವತವಾಗಿ ನೆಲೆನಿಂತಿದ್ದಾರೆ.

ಕೆಲವು ಐತಿಹ್ಯಗಳಿಂದ ಅವರು ಚೇಳಗುರಿಕೆಗೆ ಬರುವ ಮುಂಚೆ ಮಾಡಿದ ಪವಾಡಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಕ್ರಮಬದ್ಧವಾಗಿ ಇದೇ ಮೊದಲು ಇದೇ ಕೊನೆಯೆಂದು ಹೇಳಲು ಕಷ್ಟಸಾಧ್ಯವಾಗಿದೆ. ಏಕೆಂದರೆ ಮಹಾತ್ಮರ ಮಹಿಮೆಗಳಲ್ಲಿ ಅಲೌಕಿಕವಾಗಿರುವುದರಿಂದ ನಿರ್ದಿಷ್ಟವಾಗಿ ಹೇಳುವುದು ಕಷ್ಟವಾಗುತ್ತದೆ.

**೬.೨.೨. ಚೇಳಗುರಿಕೆಯಲ್ಲಿ ತೋರಿದ ಪವಾಡಗಳು**

ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣ, ಹದಿನೈದನೆಯ ಶತಮಾನದಲ್ಲಿ ವಿಜಯನಗರ ಶಿವಶರಣರ, ದಾಸರ ಲೀಲಾಮಯ ಚರಿತ್ರೆಗಳಿಗೆ ಆವಾಸಸ್ಥಾನವಾಗಿದ್ದಂತೆ. ಹತ್ತೊಂಬತ್ತನೆಯ ಶತಮಾನದ ಕೊನೆ ಇಪ್ಪತ್ತನೇ ಶತಮಾನದ ಪ್ರಾರಂಭದ ಸುಸಂಧಿಯಲ್ಲಿ ಬಳ್ಳಾರಿ ಪ್ರಾಂತ್ಯದಲ್ಲಿ ಶರಣರು ಮಹಾಯೋಗಿಗಳು ಮಿಂಚಿ ಮರೆಯಾಗಿದ್ದಾರೆ. ಆದವಾನಿಯ ಲಕ್ಷಮ್ಮನವರು; ಎಮ್ಮಿಗನೂರು ಜಡೆಪ್ಪ ತಾತ, ಗೂಳ್ಯದ ಗಾದಿಲಿಂಗಪ್ಪನವರು, ಕೊಕ್ಕರಚೇಡು ಲಿಂಗಪ್ಪನವರು, ಬಳಗಾನೂರು ಮರಿಸ್ವಾಮಿಗಳು, ಗುಡ್ಡದ ಗವಿಸಿದ್ದೇಶ್ವರರು, ಅಯೋಧ್ಯೆಯ ಚಿದಾನಂದಾವಧೂತರು, ಹೇಮಕೂಟದ ಶಿವರಾಮಾವಧೂತರು, ನಂದಾವಧೂತರು ಹಾಗೂ ಚೇಳಗುರಿಕೆಯ ಎರ್ರಿತಾತನವರು. ಅವರಲ್ಲಿ ಯೋಗ ವಿಧಾನದ ವಿವಿಧತೆ ಇರಬಹುದು, ಅವರ ಯೋಗಾನುಭೂತಿಯಲ್ಲಿ ಅಂತಸ್ತುಗಳೂ ಇರಬಹುದು, ಅವರು ಸಾಧಿಸಿದ ಸಿದ್ಧಿಯಲ್ಲಿ ತಾರತಮ್ಯಗಳು ಇರಬಹುದು, ಅವರ ಕುಲ ನೆಲಗಳೂ, ಜಾತಿ-ನೀತಿಗಳೂ, ಬಲ-ಛಲಗಳೂ ಒಂದೇ ಅಲ್ಲದಿರಬಹುದು, ಆದರೆ ಅವರ ನಿಲುವು ಮಾತ್ರ ಒಂದೇ ಆಗಿತ್ತು.

ಎರ್ರಿತಾತನು ಯೋಗಮಗ್ನರಾಗಿ ಅಲ್ಲಲ್ಲಿ ಸಂಚಾರಿಸಿ ಹಲವು ಮಹಿಮೆಗಳ ಮೂಲಕ ಭಕ್ತಜನರ ಪುಣ್ಯ ಪುರುಷನಾಗಿ, ಅದರ ಮನದಾಳದ ಇಂಗಿತವಾಗಿ ಕೊನೆಗೆ ಆರಾಧ್ಯದೈವವಾಗಿ ನಿಂತಲ್ಲೆ ನಿಲ್ಲದೆ ಮಾರ್ಗವಿಡಿದು ಚೇಳಗುರಿಕೆಗೆ ಬಂದನು. ಚೇಳಗುರಿಕೆಗೆ ತಾತನು ಬಂದಾಗ ತಲೆತುಂಬಾ ಕೂದಲು ಗಡ್ಡಮೀಸೆಗಳಿಂದ ಕೂಡಿದ್ದು, ಕೈಕಾಲುಗಳ ಬೆರಳಿನಲ್ಲಿ ಉದ್ದುದ್ದವಾದ ಉಗುರುಗಳು ಬೆಳೆದಿದ್ದವು. ನೋಡುವವರ ಕಣ್ಣಿಗೆ ಹುಚ್ಚನಾಗಿ (ಎರ್ರಿ) ನೆನೆದವರ ಮನಕ್ಕೆ ಯೋಗಿಯಾಗಿ, ಬಿರಿದವರ ಬಾಳಿಗೆ ಬದುಕಾಗಿ ಕಂಡರು. ಅದು ಕ್ರಿ.ಶ. ೧೮೬೭ ಹೇವಳಂಬಿ ಸಂವತ್ಸರ ಊರಹೊರಗೆ ಮಲ್ಲಪ್ಪನ ತಿಪ್ಪೆಯ ಹತ್ತಿರ ವಿಚಿತ್ರ ರೀತಿಯಲ್ಲಿ ಕುಳಿತಿದ್ದ.

ಚೇಳಗುರಿಕೆಯ ಯಾಳ್ಪಿ ಭೀಮನಗೌಡ, ಊಳೂರು ದೊಡ್ಡಪ್ಪ, ಮೋಕ ಕರಿಬಸಪ್ಪ, ಚಾಗನೂರು ಹಂಪಣ್ಣ, ಕೊಳಗಲು ಬಸಲಿಂಗಪ್ಪ ಮೊದಲಾದ ಪುರ ಪ್ರಮುಖರು ಕೂಡಿ ಹೋಗಿ ನೋಡಲು ಮಾತಾಡಿಸಿದರೂ ಮಾತಡಲಿಲ್ಲವಂತೆ ಕೊನೆಗೆ ಊರಿನವರೆಲ್ಲ ಪ್ರೀತಿಯಿಂದ ರಟ್ಟೆ ಹಿಡಿದು ಊರೊಳಗೆ ತಂದರಂತೆ. ಅಂದಿನಿಂದ ತಾತನು ಚೇಳಗುರಿಕೆ ಎರ್ರಿತಾತನಾದನು. ಅಲ್ಲಿಯೇ ಆತನ ಪವಾಡಗಳ ದಿನದಿಂದ ದಿನಕ್ಕೆ ಹೆಚ್ಚಿ ಭಕ್ತಸಾಗರವೇ ಇಂದು ಸೇರುತ್ತಿದೆ.

೧. ಕಾಲರಾ ರೋಗದ ಮುನ್ಸೂಚನೆ ಮತ್ತು ನಿವಾರಣೆ

ಇಡೀ ಊರಿನ ಸ್ಥಿತಿಯನ್ನು ಬದಲಾಯಿಸಲು ಬಂದ ಮಹಾಪುರುಷನಂತೆ ತಾತನು ಮಠದ ಮುಂದಿರುವ ಬೇವಿನ ಮರವಿರುವ ಕಟ್ಟೆಯ ಹತ್ತಿರ ಕುಳಿತ್ತಿದ್ದ. ಅನಂತರ ಈಶ್ವರನ ಗುಡಿಯಲ್ಲಿ ಕೆಲವು ದಿನ, ಯಾಳ್ವಿ ಭೀಮನಗೌಡರ ಮನೆಯಲ್ಲಿ ಕೆಲವುದಿನ, ಮೇಗಳ ಮನೆ ದೊಡ್ಡನಗೌಡರ ಮನೆಯಲ್ಲಿ ಕೆಲವು ದಿನ ಇದ್ದಾಗ ಊರಿಗೆ ಕಾಲರಾ ಬಂತಂತೆ. ಒಂದು ತಿಂಗಳೊಳಗೆ ಸುಮಾರು ಇನ್ನೂರು ಜನರು ಸತ್ತರಂತೆ. ಆ ಮಹೋಪದ್ರವ ಪ್ರಾಪ್ತವಾಗುವುದರ ಪೂರ್ವಸೂಚಕವಾಗಿಯೋ ಏನೋ ತಾತನು ಈಶ್ವರನ ಗುಡಿಯಿಂದೆದ್ದು ಸ್ಮಶಾನಕ್ಕೆ ಹೋಗುವಿಕೆ ಬರುವಿಕೆ ಮಾಡುತ್ತಿದ್ದನು. ಹಗಲೂ ರಾತ್ರಿಯೆನ್ನದೆ ದಿನಕ್ಕೆ ನೂರಾರು ಸಲ ಊರಿಗೆ ಸ್ಮಶಾನಕ್ಕೂ ಸುತ್ತಾಡುತ್ತಿದ್ದ ತಾತನನ್ನು ನೋಡಿ ಜನ "ಈ ಹುಚ್ಚ ಹೀಗೆಕೆ ಮಾಡುತ್ತಾನೆ" ಎಂದು ಅಂದುಕೊಳ್ಳುತ್ತಿದ್ದರಂತೆ.

ಊರಲ್ಲಿ ಕಾಲರಾರೋಗ ಪ್ರಾರಂಭವಾದ ಮೇಲೆ ಕೈಯಲ್ಲಿ ಕಲ್ಲುಹಿಡಿದು ತಾತನು ಕೆಲವರ ಮನೆಗಳಿಗೆ ಎಸೆಯುತ್ತಿದ್ದನಂತೆ. ಕೆಲವರ ಮನೆಗಳಿಗೆಸೆಯಲೆಂದು ಕೈಗೆತ್ತಿಗೊಂಡ ಕಲ್ಲನ್ನು "ಬೇಡ ಬೇಡ" ಎಂದು ತನಗೆ ತಾನೇ ಒಟಗುಟ್ಟುತ್ತಾ ಕೆಳಗೆಸೆದುಬಿಡುತ್ತಿದ್ದನು. "ಕಾಲರಾ ಕಾಟಬೇರೆ ಅದರ ಜೊತೆಗೆ ಈ ಹುಚ್ಚನ ಕಾಟ ಬೇರೆ" ಎಂದು ಅಂದುಕೊಂಡಿರಬೇಕು ಜನ. ಯಾರು ಏನೆಂದುಕೊಂಡರೂ ತಮಗೆ ತಾವೇ ಅಂದುಕೊಳ್ಳಬೇಕು. ಆತನ ಮುಂದೆ ಅನ್ನುವಂತಿಲ್ಲ. ಅಂದರೂ ಆತನು ಅದನ್ನು ಅನ್ನಿಸಿಕೊಳ್ಳುವಂತಿಲ್ಲ. ಯಾರ ಮನೆಗಳಿಗೆ ಕಲ್ಲೆಸೆದಿದ್ದಾನೋ ಅವರ ಮನೆಗಳಲ್ಲಿ ಒಬ್ಬರೋ ಇಬ್ಬರೋ ಕಾಲರಾ ಬೇನೆಗೆ ತುತ್ತಾದರು. "ಬೇಡ ಬೇಡ" ಎಂದು ಬಿಟ್ಟ ಜನರ ಮನೆಗಳಲ್ಲಿ ಯಾರೂ ಸಾಯಲಿಲ್ಲ ಮಾತ್ರವಲ್ಲ ಕಾಲರಾ ಬಂದರೂ ಗುಣಹೊಂದಿ ಬದುಕಿಕೊಂಡರು. ಇದೊಂದು ವಿಚಿತ್ರ ಪವಾಡ. ಇಂಥಾ ವಿಚಿತ್ರಮಯ ಪವಾಡಗಳು ಈ ಕಾಲರಾ ಕಾಲದಲ್ಲಿ ನಡೆದವುಗಳೆಂದು ಜನರು ಹೇಳುತ್ತಾರೆ.

ಕೊಳಗಲ್ಲು ವೀರಮ್ಮ ಎಂಬಾಕೆಯ ಮನೆಯಲ್ಲಿ ಇಬ್ಬರಿಗೆ ಉಪದ್ರವ ಬಂದಿರಲು ಆಕೆಯು ಬಂದು ತಾತಾ ಹೀಗಾದರೆ ಗತಿಯೇನಪ್ಪ ಎಂದು ಕೇಳಲು ತಾತನು ಆಕೆಯ ಕುಚಗಳನ್ನು ಹಿಡಿದೆತ್ತಿ ನೆಲಕ್ಕೆ ಕುಕ್ಕಿ "ನಡಿ" ಎಂದನಂತೆ ಆಕೆಯು ಮನೆಗೆ ಬರುವುದರೊಳಗಾಗಿ ರೋಗಗ್ರಸ್ಥರು ಗುಣಹೊಂದಿದ್ದರಂತೆ. ಪವಾಡಗಳು ಉಪದ್ರವ ಆರಂಭವಾಗುವಿಕೆಯನ್ನು ತಾತನು ಸೂಚಕವಾಗಿ ಮಾತ್ರವಲ್ಲದೆ ವಾಚಕವಾಗಿಯೂ ಕೂಡಿ ತಿಳಿಸಿದ್ದನಂತೆ.

"ಅಕ್ಕ ಬರತಾಳೆ ಅಕ್ಕೀಕಾಳು ಹಾಕಿಕೋ

ಎಂದು ತಾತ ಅನ್ನುತ್ತಿದ್ದರೆ ಆತನ ಮಾತಿನ ಮನವರಿಕೆ" ಸುಮ್ಮನೆ ಕುಂತಿರಬಾರದೇನೋ ಹುಚ್ಚು ಮಗನೇ? ಎಂದು ಗದರಿಸುತ್ತಿದ್ದರಂತೆ. ಉಪದ್ರವ ತಗಲಿದ್ದು ತಾತನಿಗೆ ಮೊದಲಂತೆ ಕಟ್ಟಂಬಲಿ ಮಜ್ಜಿಗೆ ಕುಡಿದ ತಾತನಿಗೆ ನಿಂತು, ಕುಡಿಸಿದ ಊರವರಿಗೆ ಸುರುವಾಯಿತಂತೆ. ಬಹಳ ಜನ ಸತ್ತ ಮೇಲೆ ಜನರು ಭಯಪಟ್ಟು ಊರಿನ ಮಠದಯ್ಯ ಗಂಗಾಧರಯ್ಯಾ, ರೆಡ್ಡಿ ಭೀಮನಗೌಡ ಮೊದಲಾದವರು ಬಂದು

ತಾತನನ್ನು "ಏನು ತಾತ ಕಾಲರಾ ಯಾವಾಗ ನಿಲ್ಲುವುದು?" ಎನ್ನಲು ತಾತನು "ಇನ್ನೂ ಲೆಕ್ಕ ತಯಾರಾಗಿಲ್ಲಯ್ಯ (ಚನ್ನಬಸವೇಶ್ವರ ಸಿ.ವ. ಶ್ರೀ ಎರ್ರಿಸ್ವಾಮಿಗಳ ಲೀಲಾವಿಲಾಸ ಪು. ೨೬) ಎಂದು ಸ್ವಲ್ಪ ಯೋಚಿಸಿ ಕೈ ಬೆರಳುಗಳನ್ನು ತೋರಿಸಿದನಂತೆ. ಇನ್ನು ಕೆಲವರು ಕೇಳಲು ತಾತನು 'ಅಕ್ಕೀ ಕಾಳು ಹಾಕಿ ಕಳಿಸಯ್ಯ ಎಂದನಾತ'. (ಚನ್ನಬಸವೇಶ್ವರ ಸಿ.ವ. ಶ್ರೀ ಎರ್ರಿಸ್ವಾಮಿಗಳ ಲೀಲಾ ವಿಲಾಸ ಪು.೨೬)

ಕೆಲವರು ಮಠಪತಿ ಕುಮಾರಯ್ಯ ಮತ್ತು ಕರಿಬಸಯ್ಯ ಕೇಳಲು "ನಾಳೆ" ಎಂದನಂತೆ ತಾತ. ಅದೇ ದಿನವೇ ಊರಿಗೆ ಮೀರಿದ ಒಂದು ದೇವರ ಕೋಣವನ್ನು ತಾತನು ಕಿವಿ ಹಿಡಿದುಕೊಂಡು ರಾಯನ ಗೌಡನ ಮನೆಯ ಹತ್ತಿರ ತಂದನಂತೆ. ಹೆದರಿದ ಜನ "ಇದೇನಪ್ಪಾ ಮಾರಾಯ ನಿನ್ನ ಕಥೆ" ಎನ್ನಲು, ತಾತನು ಪೂಜೆಮಾಡಿ ಕಳಿಸಿರಿ ಎಂದನಂತೆ. ತಾತನ ಮಾತಿನಂತೆ ಜನರು ದೇವರ ಕೋಣವನ್ನು ಪೂಜೆ ಮಾಡಿದರಂತೆ. ತರುವಾಯ ತಾತನು ಆ ಕೋಣವನ್ನು ಕುರಿತು "ಇನ್ನು ನಡಿ ನಿಮ್ಮವರೆನ್ನಲ್ಲಾ ಕರೆದುಕೊಂಡು" ಎಂದು ಹೇಳಲು ತಾತನ ಅಪ್ಪಣೆಗೆ ಮಂತ್ರ ಮುಗ್ಧವಾದಂತಿದ್ದ ಆ ಮಹಾಮಹಿಷವು ಸುಮ್ಮನೆ ಹೋಗಿ ಬಿಟ್ಟಿತಂತೆ. ಮರುದಿನ ಕಾಲರಾ ನಿಂತಿತಂತೆ.

ಎರ್ರಿತಾತನು ಕೆಲವೊಮ್ಮೆ ಮಾರಕಗಳನ್ನು ಸೂಚಕಗಳಾಗಿಯೇ ಮೊದಲು ತಿಳಿಸುತ್ತಿದ್ದರಂತೆ ಆದರೆ ಭವದ ಬಂಧನದೊಳಗೆ ಜಾರುತ್ತಿರುವ ಜನರಿಗೆ ಅವರ ದ್ಯೋತಕವು ಅರಿವಾಗುವುದು ಹೇಗೆ ಆದುದ್ದರಿಂದಲೇ ಬಂದ ಕಾಲರಾ ರೋಗವನ್ನು ತಾತನವರೇ ನಿವಾರಿಸಿದರು. ಅಂದಿನಿಂದ ಜನರು ಆತನನ್ನು ದೈವಲೀಲೆಯ ಮಹಾಪುರುಷನೆಂದು ಗೌರವ ಭಕ್ತಿಯಿಂದ ನಮಸ್ಕರಿಸಿ ದಿನಾಲು ಆತನನ್ನು ಆರಾಧ್ಯದೈವವಾಗಿ ಕಾಣುತ್ತಿದ್ದರು.

**೨. ಸತ್ತ ಎಮ್ಮೆಕರುವನ್ನು ಬದುಕಿಸಿದ್ದು.**

ಒಂದು ದಿನ ಮೇಗಳ ಮನೆಯ ದೊಡ್ಡಪ್ಪ ಗೌಡನ ಮನೆಯಲ್ಲಿ ಎಮ್ಮೆಕರು ಸತ್ತಿರುತ್ತದೆ. ಯಾರೋ ತಂದುಕೊಟ್ಟ ರೊಟ್ಟಿಯನ್ನು ತಿನ್ನುತ್ತಾ ಅಲ್ಲಿಗೆ ಬಂದ ತಾತನು, ಮೊಸರನ್ನ ಬಯಸಿ ಮನೆಯ ಯಜಮಾನಿಯನ್ನು ಕೂಗಿ 'ಮೊಸರು ತಾರವ್ವ' ಎಂದನಂತೆ ತಾತ. ಸತ್ತ ಕರುವಿನ ಕಳೇಬರವನ್ನು ಹೊತ್ತುಕೊಂಡು ಹೋಗಲು ಹೊಲೆಯರು ಕೂಡಿರಲು ಆ ಮನೆಯ ಮುದುಕಿ ತನ್ನ ಮಾಮೂಲು ಮಾತಿನಲ್ಲಿ "ನಿನ್ಬಾಯಾಗ ಮಣ್ಣಾಕ! ತಿಂದು ತಿಂದು ಹಲ್ಲತಿದೆಯಲ್ಲಾ! ಕರ ಸತ್ತು ಹೊತ್ತುಗೊಂಡು ಹೋಗೋಕೆ ಮಾದಿಗರು ಬಂದಿದ್ರೆ ಹಾಲು ಮೊಸರು ಬೇಡ್ತಾನೆ ಮುದಿಯ" ಎಂದಳಂತೆ. ಕೆಲವು ಜನರ ಮಾತು ವಕ್ರವಾದರೂ ಮನಸ್ಸು ವಕ್ರವಾಗಿರುವುದಿಲ್ಲ. ದೊಡ್ಡವರ ದೃಷ್ಟಿ ಮಾತಿನ ಮೇಲಿರದೆ ಆಡಿದವರ ಮನಸ್ಸಿನ ಮೇಲಿರುತ್ತದೆ.

ಒಳಗೆ ಬಂದಾಗುರುವು ತಾಯಿಯ
ಮಾಲೆಯುಣಲು ತೆರಳೆಂದು ಸತ್ತಿ
ರ್ದ ಳಿಗರುವ ನಿಜಪಾದದಿಂದೊದೆ ದಾಕ್ಷಣವೇ ಮತ್ತಂ
ತಳೆದು ಹರಣವನೆದ್ದು ಬಂದುದು

ನಲವಿನಿಂ ಬಾಯಿಂದ ಕೆಚ್ಚಲ
ಮೊಲೆಯ ಹಿಡಿದಳೆಯುತ್ತ ಪಾಲೀಂಟದುದೇ ನೋಕಿವೇಂ
(ನಾಗೇಶಶಾಸ್ತ್ರಿ ವೈ. ಲೀಲಾವಿಲಾಸ ಸಂಧಿ ೧೦ ಪುಟ. ೧೧೬).

ಆ ಮುದುಕಿಯ ಮನಸ್ಸಿನ ಕ್ಷೋಭೆಯನ್ನು ಅರಿತ ತಾತನು "ಕಣ್ಣೆ ಬಿಡಯ್ಯಾ" ಎಂದು ಹೇಳುತ್ತಾ ಸತ್ತ್ತಕರುವನ್ನು ಮೆತ್ತಗೆ ಒದ್ದರಂತೆ. "ಸ್ವಾಮಿ ನಡೆಸು! ನಡೆಸು ನಡೆಸು!" ಎದ್ದರಂತೆ. ಅವರ ಪಾದಸ್ಪರ್ಶದಿಂದ ಸತ್ತುಬಿದ್ದಿದ್ದ ಕರು ಬದುಕಿ ಥಂಗನೇ ಎದ್ದು ತಾಯಿಯ ಹತ್ತಿರಹೋಗಿ ಮಲೆಯುಣ್ಣ ತೊಡಗಿತಂತೆ. (ದೊಡ್ಡನಗೌಡ ಜೋಳದರಾಶಿ: ಶಿವಮಯ ಜೀವನ ಚರಿತ್ರೆ ಪು. ೧೮).

ಅದು ಕಳೆದ ಕೆಲವು ದಿನಗಳಲ್ಲಿಯೇ ಯಾರೋ ಹುಡುಗ ಮಜ್ಜಿಗೆಗಾಗಿ ಒಬ್ಬ ಶ್ರೀಮಂತರ ಮನೆಗೆ ಬಂದನಂತೆ. ಸ್ವಲ್ಪನಿಂತು ಬಾರೆಂದು ಮನೆಯವರು ಹೇಳಲು ನಿರಾಶೆಗೊಂಡ ಆ ಹುಡುಗ ಖಾಲಿ ತಂಬಿಗೆ ಹಿಡಿದು ವಾಪಸ್ಸು ಹೋಗುತ್ತಿದ್ದಾಗ ಅಲ್ಲಿಯೇ ಕುಳಿತಿದ್ದ ತಾತ ಅವನನ್ನು ನೋಡಿ ಅವನನ್ನು ಕರೆದು ಅವನ ತಂಬಿಗೆಯನ್ನು ತಮ್ಮ ಕೈಯಿಂದ ಮುಟ್ಟಿ ಅವನ ಹೆಗಲ ಮೇಲೆ ಹೊದೆದಿದ್ದ ಮಡಿ ಪಂಚೆಯಿಂದ ಮುಚ್ಚಿ ಹೋಗೆಂದು ಕಳಿಸಿದನಂತೆ. ಅದನ್ನು ಮನೆಗೆ ತಂದು ನೋಡಲಾಗಿ ಅದರ ತುಂಬಾ ಮಜ್ಜಿಗೆ ಇದ್ದವಂತೆ.

ದಿನವೂ ಇಂತಹ ಪವಾಡಗಳು ಎಷ್ಟೋ ನಡೆಯುತ್ತಿದ್ದವೊ ಎಷ್ಟೋ ಜನರು ತಮ್ಮ ಕಷ್ಟಗಳನ್ನು ತಾತನ ಮುಂದೆ ಹೇಳಿ ಆತನ ಆಶೀರ್ವಾದಿಂದ ತಮ್ಮ ತಮ್ಮ ಇಷ್ಟಾರ್ಥಗಳನ್ನು ಪಡೆದು ಹೋಗುತ್ತಿದ್ದರು. ಆತನ ದರ್ಶನ ಮಾತ್ರದಿಂದ ಪುನೀತರಾಗುವೆವೆಂದು ಅನೇಕ ಜನ ಬರುತ್ತಿದ್ದರು. ಆತನ ದರ್ಶನಾಶೀ ವಾದಗಳಿಂದ ಅನಿಷ್ಟಗಳೆಲ್ಲಾ ಅಳಿಬು ಇಷ್ಟಾರ್ಥ ಪ್ರಾಪ್ತಿಯಾಗುವುದೆಂದೂ ಬರುತ್ತಿದ್ದರು. ಹೀಗೆ ಹಲವಾರು ಪವಾಡಗಳು ಆಗುತ್ತಿರುವಲ್ಲಿ ಅವರ ಮೇಲಿದ್ದ ಹುಚ್ಚು ಭಾವನೆಗಳೆಲ್ಲಾ ಮಾಯವಾಗಿ, ಈತ ಸಾಮಾನ್ಯನಲ್ಲ ಮಹಿಮಾಪುರುಷನೆಂಬುದು ಜನಜನಿತವಾಗಿದ್ದರಿಂದ ಸುತ್ತಮುತ್ತಲಿನ ಗ್ರಾಮದವರು ಬರುವುದು ದಿನದಿಂದ ದಿನಕ್ಕೆ ಹೆಚ್ಚಾಗುತ್ತಿತ್ತು.

೩. ಮಳೆಯ ಮಹಿಮೆ

ಒಮ್ಮೆ ಮಳೆಯಿಲ್ಲದೆ ಬೆಳೆಯೆಲ್ಲದೆ ಹಾಳಾಗಿ ಹೋದಾಗ ಗ್ರಾಮದವರೆಲ್ಲರು ಬಂದು ತಾತನವರನ್ನು ಬೇಡಿಕೊಂಡರು. ಎಡೆಗಳನ್ನು ಮುಂದಿಟ್ಟು ಮಳೆಬರುವುದಾದರೆ ತಾತನು ಊಟ ಮಾಡುತ್ತಾನೆ ಇಲ್ಲವಾದರೆ ಇಲ್ಲ ಎಂದು ಹರಸಿ ಹಾರೈಸಿಕೊಂಡು ಮುಂದೆ ಕುಳಿತರು. ತಾತ ಸಾಯಂಕಾಲವಾದರೂ ಎದ್ದು ಊಟ ಮಾಡಲಿಲ್ಲ. ಕೊನೆಗೆ ತೀರಾ ಹೊತ್ತಾದ ಮೇಲೆ ಮುಂದಿಟ್ಟ ತಂಬಿಗೆಯಲ್ಲಿ ಕೈ ಅದ್ದಿ ನೀರನ್ನು ಸಿಂಪಡಿಸಿ, ಗೌಡನಿಗೆ ಎರಡು ಹಣ್ಣನ್ನು ಆಶೀರ್ವದಿಸಿದರಂತೆ. ಮೋಡಗಳೇ ಮೂಡದಿದ್ದ ಸಮಯದಲ್ಲಿ ಇದ್ದಕ್ಕಿದ್ದಂತೆ ಮೊಡಗಳು ಕವಿದು ಪುಷ್ಕಳವಾಗಿ ಮಳೆಸುರಿಯಿತಂತೆ.

ಮಳೆಯ ಬರುವಿಕೆಗಾಗಿ ಅನೇಕ ರೀತಿಯ ಆಚರಣೆಗಳನ್ನು ಮಾಡುತ್ತಾರೆ. "ಮಳೆಗಾಲವಿದ್ದಾಗಲೂ ಮಳೆ ಬಾರದೇ ಹೋದಾಗ ಮಳೆರಾಯನ ಮೆರವಣಿಗೆಯನ್ನು ಆಚರಿಸುತ್ತಾರೆ. ಜೇಡಿಮಣ್ಣಿನಿಂದ

ಮಳೆರಾಯನ ವಿಗ್ರಹ ಮಾಡಿ, ಅದನ್ನು ಹಲಗಿ ಮೇಲಿಟ್ಟು ಅರಿಶಿನ ಕುಂಕುಮವಿಟ್ಟು ಕಣಗಲೆ, ಮುತ್ತುಗ, ಮಲ್ಲಿಗೆ ಮುಂತಾದ ಹೂವುಗಳಿಂದ ಅಲಂಕರಿಸಿ ಪೂಜೆ ಮಾಡುತ್ತಾರೆ. ಬೆತ್ತಲೆಯಿರುವ ಓರ್ವ ಬಾಲಕ ಮಳೆರಾಯನ ವಿಗ್ರಹವನ್ನು ಹೊತ್ತುಕೊಳ್ಳುತ್ತಾನೆ. ಹುಡುಗರೆಲ್ಲರೂ ಸೇರಿ ವಿವಿಧ ಹಾಡುಗಳನ್ನು ಹಾಡುತ್ತಾ ಮಳೆರಾಯನ ವಿಗ್ರಹವನ್ನು ಹೊತ್ತ ಬೆತ್ತಲೆ ಬಾಲಕನ ಜೊತೆಯಲ್ಲಿ ಮನೆ ಮನೆ ಬಾಗಿಲಗೆ ಹೋಗುತ್ತಾರೆ. (ಡಾ. ಮಂಜುನಾಥ ಬೇವಿನಕಟ್ಟೆ ಜಾನಪದ ಉತ್ಖನನ ಪು. ೧೦೬). ಮಳೆಯು ಬದುಕಿನೊಂದಿಗೆ ಹಲವಾರು ಫಸಲು ಬೆಳೆಯಲು ಸಹಕಾರಿಯಾಗಿರುತ್ತದೆ. ಹಾಗೆಯೇ ಗಣೇಶ ಚತುರ್ಥಿಯಲ್ಲಿ ಗಣೇಶನ ವಿಗ್ರಹವನ್ನು ನೀರಿಗೆ ಬಿಡುವುದು, ಜೋಕುಮಾರನನ್ನು ತಿವಿದು ಸಾಯಿಸಿದಾಗ ಮಳೆಬರುತ್ತದೆಂಬ ನಂಬಿಕೆ ಜನಪದರಲ್ಲಿ ಹೆಚ್ಚು ಹೆಚ್ಚಾಗಿದೆ.

ಜೋರಾಗಿ ಮಳೆಯು ಬರುತ್ತಿರುವಾಗ ಎರ್ರಿತಾತನು ಕುಳಿತಲ್ಲಿಯೇ ಕುಳಿತಿರಲು ಮಳೆಯು ಸುತ್ತಲೂ ಬಂದರೂ ಸಹ ಆತನಿದ್ದ ಸ್ಥಳದಲ್ಲಿ ಮಾತ್ರ ಮಳೆಯಾಗಲಿಲ್ಲವಂತೆ. ಅದುವರೆಗೂ ಎರ್ರಿತಾತನು ಮಲ್ಲಪ್ಪನ ಮಟ್ಟಿಯಲ್ಲಿದ್ದಾಗ ಊರವರು ಕರೆದುಕೊಂಡು ಬಂದು "ಗಂಗೆ ಬಂದಾಳಯ್ಯ" ಎಂದು ಪದ ಹಾಡಿಕೊಂಡು ಬಂದಿದ್ದಾರೆ. ಸುಮಾರು ದಿನಗಳ ಕಾಲ ಮಳೆ ಬಂದದ್ದರಿಂದ, ಮಳೆಯಿಲ್ಲದೆ ಕಂಗಾಲಾಗಿದ್ದ ರೈತರು, ಭಕ್ತರು ಸಂತೋಷಗೊಂಡಿದ್ದಾರೆ. ತಾತನಿಗೆ ಮಳೆಯೆಂದರೆ ಪ್ರೀತಿ. ಮಳೆಬರುವಾಗ ಹೊರಗೆ ಹೋಗಬಾರದೆಂದು ಹಾಸಿಗೆ ಹಾಸಿ ಹೊದಿಸಿ ಮಲಗಿಸಿದರೆ, ಮಳೆ ಜೋರಾಗುತ್ತಲೇ ಹಾಸಿಗೆಯಿಂದ ಎದ್ದು ಬಂದ ತಾತ ಮಳೆಯಲ್ಲಿ ಮಲಗಿಬಿಡುತ್ತಿದ್ದರೆಂದೂ ತಿಳಿದು ಬರುತ್ತದೆ.

ಭಕ್ತನ ಮನಸ್ಸು ಶಿವನಲ್ಲಿ ನೆಟ್ಟಿದೆ. ಮನದಲ್ಲಿ ಶಿವನೇ ಶಿವನಲ್ಲಿ ಮನವೇ? ಇದನ್ನು ತಿಳಿದವನು ಸಂಗಿಯೋ ನಿಸ್ಸಂಗಿಯೋ ಎಂಬುದು ಬಿಡಿಸಲಾಗದ ಪ್ರಶ್ನೆ. ಬೀಜದಿಂದ ಸಸ್ಯ ಹುಟ್ಟಿದಾಗ ಅದು ಬೀಜದೊಳಗಿನ ತಿರುಳನ್ನು ಭೇದಿಸಿ ತಾನೇ ಹುಟ್ಟಬೇಕು. ಬೀಜಹಾಗೆಯೇ ಇರಲಿ ಎನ್ನುವುದಾದರೆ ಸಸ್ಯ ಉದ್ಭವಿಸುವುದು ಹೇಗೆ ಆದುದರಿಂದ ಭವದ ಬಂಧನದಲ್ಲಿ ಈಜಾಡುವವರನ್ನು ತಾತನು ಕನಿಕರಿಸಿ ಅವರ ಇಷ್ಟಾರ್ಥಗಳನ್ನು ಒಮ್ಮೆಮ್ಮೆ ಅರಿತಿದ್ದೂ ಹಲವೊಮ್ಮೆ ತನಗೆ ತಾನೇ ತಿಳಿಯದಂತೆ ಅನೇಕ ಮಹಿಮೆಗಳನ್ನು ತಿಳಿದು ವಿವಿಧ ರಾಜ್ಯ, ಪ್ರದೇಶಗಳಿಂತ ಗ್ರಾಮ ಹಳ್ಳಿಗಳಿಂದ ಭಕ್ತ ಸಂಕುಲವು ಬರತೊಡಗಿತು. ನಿರಾಧಾರಿಯಾಗಿ ಕಲ್ಮಷವಿಲ್ಲದ ಭಕ್ತರಿಗೆ ಆರಾಧ್ಯ ದೇವನಾಗಿ ತಿಳಿಮನದ ಭಕ್ತರಿಗೆ ನಿರ್ಲಿಪ್ತನಂತೆ ಕಾಣುತ್ತಿದ್ದನು. ಚೇಳಗುರಿಕೆಗೆ ತಾತನು ಬರದಿದ್ದರೆ ನಮ್ಮೂರಿನ ಗತಿ ಏನಾಗುತ್ತಿತ್ತೋ ಎಂದು ಕ್ಷೇತ್ರಕಾರ್ಯಕ್ಕೆ ಹೋದಾಗ ಮಲ್ಲೇಶಪ್ಪನೆಂಬ ವಕ್ತೃವಿನ ಮಾಹಿತಿಯನ್ನು ಗಮನಿಸಬಹುದು.

### ೪. ಕುಷ್ಠ ಮತ್ತು ಪ್ಲೇಗು ರೋಗಗಳನ್ನು ವಾಸಿಮಾಡಿದ್ದು

ಆಗಿನ ಕಾಲದಲ್ಲಿ ಕುಷ್ಠರೋಗವು ಒಂದು ಶಾಪವಾಗಿತ್ತು. ಅಂಥಹ ರೋಗ ಬಂದವರನ್ನು ಊರಹೊರಗಡೆ ಇಡುತ್ತಿದ್ದರು. ಒಬ್ಬ ಭಕ್ತೆ ಆಕೆಯ ಹೆಸರು ಯಮನಮ್ಮ ಆಕೆಯ ಕೈ-ಕಾಲುಗಳ ಬೆರಳುಗಳು ಊತುಹೋಗಿದ್ದವು. ಸಮಾಜದಲ್ಲಿ ಅಂಥವರನ್ನು ಪಾಪಿಗಳೆಂದು ಭಾವಿಸಲಾಗುತ್ತಿತ್ತು. ಆಕೆಯನ್ನು ಗುಣಪಡಿಸಿದರು.

ಪೇಳಲೆಂ ಯಮನಮ್ಮನಾಕ್ಕೆ
ಕಾಲುಗಳು ಬೋಳಾದ ಬೆರಳುಗ
ಳೋಳಿಮೇಣ್ ಹೊಸತಾಗಿ ಹುಟ್ಟಿದ ತೆರದೆ ರಮ್ಯತೆಯಾ
ತಾಳಿದುದು ಮೈ ಮೊಗಗಳೋಳ್ ಮಿಗೆ
ಕೀಲಿ ಸಿರ್ದಾ ವಿಕೃತ ರೂಪವು
ಹೇಳ ಹೆಸರಿಲ್ಲದೆ ವೊಲಾಯ್ತಿನ್ನು ಚಿರಕಾಲದೊಳೀ
(ನಾಗೇಶಶಾಸ್ತ್ರಿ ವೈ. ಲೀಲಾಮೃತ ಸಂಧಿ ೧೩ ಪು. ೧೫೫).

ಮೇಲಿನ ಪ್ರಸಂಗಕ್ಕೆ ಪೂರಕವೆಂಬಂತೆ ಬೈಬಲ್‌ನ ಹಳೇ ಒಡಂಬಡಿಕೆಯ ಒಂದು ಸನ್ನಿವೇಶವನ್ನು ವ್ಯಕ್ತಪಡಿಸುವುದು ಉಚಿತವೆಂದೆನಿಸುತ್ತದೆ. ಎಲೀಯ ಎಂಬ ಪ್ರವಾದಿ (ಪ್ರವಾದಿಯೆಂದರೆ ದೇವರಿಗೂ ಮನುಷ್ಯರಿಗೂ ಮಧ್ಯವರ್ತಿ ಎಂಬುದು ಸತ್ಯವೇದದ ಉಲ್ಲೇಖವಾಗಿದೆ). ಆತನ ಬಳಿಗೆ 'ನಾಮಾನ' ಎಂಬ ಹೆಸರಿನ ಸೇನಾಧಿಪತಿ ಬರುತ್ತಾನೆ. ಆತನ ಕುಷ್ಠರೋಗವೆಲ್ಲ ನಿವಾರಿಸಿದರೆ ತನಗೆ ಅನೇಕ ಕಾಣಿಕೆ ಬಹುಮಾನಗಳನ್ನು ಕೊಡುತ್ತೇನೆಂದು ಹೇಳುವನು. ಪ್ರವಾದಿಯಾದ ಎಲೀಯನು ಆ ನಾಮನನಿಗೆ ನೀನು ಹೋಗಿ ಯೋರ್ಧನ್ (Jordhan River) ನದಿಯಲ್ಲಿ ಏಳು ಸಾರಿ ಮುಳುಗಬೇಕು ಎಂದು ಅಪ್ಪಣೆ ಕೊಡುತ್ತಾನೆ. ಆಗ ಆತನು ತನ್ನನ್ನು ಮುಟ್ಟಿ ವಾಸ ಮಾಡುತ್ತನೆಂದು ತಿಳಿದ ನಾಮಾನನು ಮುಟ್ಟದೆಯಿದ್ದುದ್ದನ್ನು ನೋಡಿ ಕೋಪಿಷ್ಠನಾಗುತ್ತಾನೆ. ಆದರೂ ಪ್ರವಾದಿಯ ಮಾತಿಗೆ ಬೆಲೆ ಕೊಟ್ಟು ಯೋರ್ದನ್ ನದಿಯಲ್ಲಿ ಏಳುಸಾರಿ ಮುಳುಗಿ ಎದ್ದಾಗ ಆತನ ಕುಷ್ಠರೋಗವೆಲ್ಲಾ ಮಾಯವಾಯಿತು ಎಂದು ತಿಳಿಸುತ್ತದೆ. (ಸತ್ಯವೇದ ಹಳೆಯ ಒಡಂಬಡಿಕೆ ಭಾಗ).

ಯೌಗಿಕ ಮಹಿಮರೆಲ್ಲ ಅವರ ವರ್ತನೆಗಳಲ್ಲಿ ಆಚರಣೆಗಳಲ್ಲಿ ಭಿನ್ನತೆಯಿದ್ದರೂ ಭಕ್ತರ ಸಂಕಷ್ಟಗಳನ್ನು ಯಾವುದೇ ಮಾರ್ಗವನ್ನು ಅನುಸರಿಸಿಯಾದರೂ ಸಹ ಅವರ ಬಿಡುಗಡೆಗೆ ಸಹಾಯಕರಾಗುತ್ತಾರೆ. ಹಾಗಾಗಿಯೇ ಭಕ್ತ ಜನರ ಮನಸ್ಸಿನಲ್ಲಿ ಅಚ್ಚಳಿಯದೆ ದೈವಗಳಾಗಿ ನೆಲೆಗೊಂಡಿರುತ್ತಾರೆ.

ಒಮ್ಮೆ ಅಮದಾಲಿ ವೆಂಕಟಪ್ಪಯೆಂಬ ಭಕ್ತನು ಪ್ಲೇಗಿನ ಉಪದ್ರವದಿಂದ ಊರನ್ನು ಬಿಡಬೇಕಾಗಿ ಬಂತಂತೆ. ಆತ ದೊಡ್ಡ ವ್ಯವಹಾರಸ್ಥನಾದುದರಿಂದ ಎಲ್ಲಾ ಸಾಮಾನುಗಳನ್ನು ಮನೆಯಲ್ಲಿಯೇ ಬಿಟ್ಟು ಹೋಗಬೇಕಾಯಿತಂತೆ. ಆಗ ಕಳ್ಳಕಾರರ ಭಯವೂ ಹೆಚ್ಚಾಗಿ, ಬಿಟ್ಟುಹೋಗುವಂತೆಯು ಇಲ್ಲ. ಹೋಗದಿರುವಂತೆಯೂ ಇಲ್ಲ. ಇಂಥ ಪರಿಸ್ಥಿತಿಯಲ್ಲಿ ತಾತನ ಬಳಿ ಬಂದು ನಮಸ್ಕರಿಸಿ "ಎಲ್ಲವನ್ನು ತಾವೇ ಕಾಪಾಡಬೇಕು" ಎಂದು ಹೇಳಿದನಂತೆ. ಅದಕ್ಕೆ ಒಳ್ಳೆಯದೆಂದು ತಾತ ಅನುಮತಿಕೊಟ್ಟನಂತೆ. ಊರು ಬಿಟ್ಟುಹೋದ ವೆಂಕಟಪ್ಪ ಕೆಲವು ದಿನದ ಮೇಲೆ ಊರಿಗೆ ಹೋದಾಗ, ಅಕ್ಕ ಪಕ್ಕದ ಜನ "ಮನೆಯಲ್ಲಿ ಯಾರನ್ನು ಕಾವಲಿಟ್ಟಿದ್ದಿ? ರಾತ್ರಿಯಲ್ಲಿ ಯಾರೋ ಕೆಮ್ಮಿದಂತಾಗುತ್ತದೆ. ಓಡಾಡಿದಂತಾಗುತ್ತದೆ"

ಎಂದು ಕೇಳಿದರಂತೆ. "ಯಾರಿದ್ದಾರೆ? ತಾತ ನನ್ನ ಮನೆ ಕಾಯುವ ಮಹಾಸ್ವಾಮಿ" ಎಂದನಂತೆ ವೆಂಕಟಪ್ಪ. ಇದನ್ನು ಕೇಳಿ ಆ ಕಳ್ಳಕಾರರಿಗೆ ಅವರ ಮನೆಯ ಕಡೆಗೆ ಸುಳಿಯುವ ಧೈರ್ಯವಾಗಲಿಲ್ಲವಂತೆ. ಹಿಂದಕ್ಕೆ ಶಿವನು ಬಾಣನ ಬಾಗಿಲು ಕಾದನೆಂದು ಪುರಾಣಗಳು ಹೇಳುತ್ತವೆಯಲ್ಲವೇ, ಹಾಗೆಯೇ ಶಿವಯೋಗಿಯಾದ ತಾತನು ವೆಂಕಟಪ್ಪನ ಮನೆಯನ್ನು ಕಾದಿರಬಹುದು. ಇವು ಭಕ್ತನ ಭಕ್ತಿಗಿಂತಲೂ ಭಗವಂತನ ಲೀಲೆಯನ್ನೇ ಹೆಚ್ಚಾಗಿ ತೋರುತ್ತವೆ.

ತಾತನಿರುವ ಕಾಲದಲ್ಲಿ ಅನೇಕ ರೀತಿಯ ರೋಗಿಗಳು ಬಂದು ನಿವಾರಣೆಗೋಸ್ಕರ ಸೇವೆಯಲ್ಲಿ ನಿಲ್ಲುತ್ತಿದ್ದರಂತೆ. ಅವರ ಮೇಲೆ ಕೃಪೆಯಾದಾಗ ತಾತ ರೋಗಿಗಳಿಗೆ ತನ್ನ ಮನಸ್ಸಿಗೆ ಬಂದಂತೆ 'ಬೆಲ್ಲಾ ತಿನ್ನು, ಮಜ್ಜಿಗೆ ಕುಡಿ!' ಎಂದು ಒಂದಕ್ಕೊಂದು ಸಂಬಂಧವಿಲ್ಲದಂತೆ ಹೇಳುತ್ತಿದ್ದರಂತೆ. ತಾತನ ಮಾತನ್ನು ಆಲಿಸಿ ಪಾಲಿಸಿದವರ ರೋಗ ಗುಣವಾಗುತ್ತಿತ್ತಂತೆ. ತಾತನಿಗೆ ಸ್ನಾನ ಮಾಡಿಸಿದ ನೀರನ್ನು ಸಂಪ್ರೋಕ್ಷಿಸಿಕೊಂಡ ಎಷ್ಟೋ ಜನರು ಕುಷ್ಠರೋಗದಂತಹ ಭಯಂಕರ ರೋಗದಿಂದ ಮುಕ್ತರಾಗಿರುವುದಕ್ಕೆ ಯಮುನಮ್ಮಳೇ ಸಾಕ್ಷಿ.

ಅದೇ ರೀತಿ ಪ್ಲೇಗು ಕಾಲರಾ, ಕುಷ್ಠರೋಗಗಳನ್ನು ಒಬ್ಬೊಬ್ಬ ಮಹಿಮರು ಒಂದೊಂದು ರೀತಿಯಲ್ಲಿ ನಿವಾರಿಸಿದರು. ದಮ್ಮೂರು ವೆಂಕಾವಧೂತರು ಗ್ರಾಮಕ್ಕೆ ಕಾಲರಾ ಪ್ಲೇಗು ರೋಗಗಳಂತ ಸಾಂಕ್ರಾಮಿಕ ರೋಗಗಳು ಬಂದಾಗ ಮಠದಲ್ಲಿ ಸಪ್ತಾಹ ಭಜನೆ ಪೂಜಾದಿ ಕಾರ್ಯಗಳು ನಡೆಯುತ್ತಿರುತ್ತವೆ. ಸಾಂಕ್ರಾಮಿಕ ರೋಗದ ವಿಷಯ ತಿಳಿದ ಆರೋಗ್ಯಧಿಕಾರಿಗಳು ಗ್ರಾಮಕ್ಕೆ ಬರುತ್ತಾರೆ. ಆಗ ತಾತನವರು ಆರೋಗ್ಯಧಿಕಾರಿಗಳು ತಂದ ಚುಚ್ಚುಮದ್ದು ಮತ್ತು ಔಷಧಿಗಳನ್ನೆಲ್ಲಾ ತಾನೇ ಸ್ವೀಕರಿಸಿ ಅವರನ್ನು ಹಿಂದಕ್ಕೆ ಕಳಿಸಿದ್ದರಂತೆ. ಆಗ ಗ್ರಾಮದಲ್ಲಿದ್ದ ಕಾಲರಾ ಪ್ಲೇಗು ರೋಗವೆಲ್ಲ ನಿವಾರಣೆಯಾಯಿತು ಎಂದು ತಿಳಿದು ಬರುತ್ತದೆ.

೫. ಗರ್ಭವನ್ನು ಫಲವಂತಿಕೆಗೊಳಿಸಿದ್ದು.

ಬಂಜೆತನದಿಂದ ನಾನಾ ರೀತಿಯ ಕಷ್ಟ ಅವಮಾನಗಳನ್ನು ಅನುಭವಿಸುತ್ತಾ ಇದ್ದ ನಾಗಮ್ಮ ಎರ್ರಿತಾತನು ಮನೆಯ ಮುಂದೆ ಹಾದುಹೋಗುತ್ತಿದ್ದಾಗ ಮಕ್ಕಳ ಭಾಗ್ಯ ಬೇಡುತ್ತಾಳೆ. ಆಗ ತಾತನವರು ಮುಂದೆ ಬಿದ್ದಿದ್ದ ಕಲ್ಲನೊಂದನ್ನು ಕೊಟ್ಟು ಪೂಜಿಸಿ ಎಂದನಂತೆ. ನಾಗಮ್ಮಳು ಆ ಕಲ್ಲನ್ನು ಮನೆಯಲ್ಲಿಟ್ಟು ಪೂಜಿಸಲು ಮಕ್ಕಳಾಗಿವೆ. ಹಾಗೆಯೇ ಪೂಜಿಸಿದ ಕಲ್ಲು ಗಣೇಶನ ಮೂರ್ತಿಯಾಗಿದುದ್ದು, ಈಗಲೂ ಕಲ್ಲುಗಣೇಶನನ್ನು ಆ ಮನೆಯವರು ಪೂಜಿಸುತ್ತಿರುವುದಾಗಿ ಕ್ಷೇತ್ರಕಾರ್ಯಕ್ಕೆ ಹೋದಾಗ ಗಮನಿಸಲಾಯಿತು. ಎರ್ರಿತಾತನು ಚೇಳಗುರಿಕೆಗೆ ಬರುವ ಮುಂಚೆ ಒಬ್ಬ ಬಂಜೆ ತರುಣಿಯ ಎದೆಯನ್ನು ಮುಟ್ಟಿದಾಗ ಸಂತಾನ ಪ್ರಾಪ್ತಿಯಾಗಿದ್ದು ಆಗಲೇ ಚರ್ಚಿಸಲಾಗಿದೆ.

ಇದಕ್ಕೆ ಪೂರಕವಾಗಿ ಎಮ್ಮಿಗನೂರು ಜಡೆಪ್ಪತಾತನಲ್ಲಿಗೆ ಮಕ್ಕಳಿಲ್ಲದ ಯುವತಿಯೋರ್ವಳು ಬರುತ್ತಾಳೆ. ತಾತನಲ್ಲಿ ಮಕ್ಕಳಭಾಗ್ಯ ಕೇಳಿದಳು. ಹರಿಜನರ ಮನೆಯಿಂದ ಅಂಬಲಿಯ ತರಿಸಿ ಅವಳ ಸೆರಗಿಗೆ ಹಾಕುತ್ತಾರೆ. ಅವಳು ಮನದಲ್ಲಿ ಹೇಸಿಗೆ ಪಟ್ಟು ಹೋಗುವಾಗ ಮಡಿಲಲ್ಲಿದ್ದ ಅಂಬಲಿಯು

ಸೋರುತ್ತಿರಲು ಆ ಅಂಬಲಿಯನ್ನು ತೆಗೆದು ಹೊಲದಲ್ಲಿ ಹೂಳಿ ನಡೆಯುತ್ತಾಳೆ. ಅದರ ಪರಿಣಾಮವಾಗಿ ಹುಟ್ಟುವ ಮಕ್ಕಳೆಲ್ಲಾ ಸಾಯುತ್ತಿರುತ್ತವೆ. ಮತ್ತೆ ತಾತನಲ್ಲಿ ಮೊರೆಹೋದಾಗ ತಾತನು ಅವಳು ಹೂತಿಟ್ಟ ಅಂಬಲಿಯ ಜಾಗ ತೋರಿಸಲು ಅಲ್ಲಿ ಒಣಗಿದ ಕೂಸಿನಾಕೃತಿಯಂತೆ ಕಾಣುತ್ತಿರುತ್ತದೆ. ಇಂಥ ಹೇಯ ಕೃತ್ಯಮಾಡಿದ ಹೆಂಗಸನ್ನು ತಿರಸ್ಕರಿಸಿ ಗಂಡನಿಗೆ ಮತ್ತೊಂದು ಮದುವೆ ಮಾಡಿಕೊಳ್ಳಲು ಆಶೀರ್ವಾದಿಸುತ್ತಾರೆ. ಅಹಂಕಾರಿಗಳಿಗೆ ತಾತನವರ ಮಹಿಮೆ ಅರ್ಥವಾಗದೆ ತಮ್ಮ ಬಾಳನ್ನು ಎಷ್ಟೋ ಜನ ನಾಶಮಾಡಿಕೊಂಡಿದ್ದಾರೆ. ಮನಸಾರೆ ನಂಬಿದವರು ಸಂಕಷ್ಟಗಳಿಂದ ಪಾರಾಗಿರುವುದು ತಿಳಿದು ಬರುತ್ತದೆ. ಇದನ್ನು ಗಮನಿಸಿದಾಗ ಜಾತೀಯ ಜಟಿಲತೆಯಷ್ಟು ಎಂಬುದು ಚರ್ಚಿತ ವಿಷಯವಾಗಿದೆ.

"ಸನ್ಯಾಸ ಪಂಥವೊಂದು ಜನರ ಕಲ್ಪನೆಯಲ್ಲಿ ಸಂತಾನ ರಕ್ಷಕವಾಗುತ್ತದೆ. ಜನಪದರಲ್ಲಿ ಜೋಗಿ ಅಥವಾ ಭೈರವನು ಹುಟ್ಟು ಬಂಜರಿಗೆಲ್ಲ ಶಿಶುಫಲವ ಕೊಡುವಂಥ" ದೈವ. ಉತ್ತರ ಭಾರತದಲ್ಲಿ ಕನ್ಯೆಯರು ಭೈರವನಿಗೆ ಸಾಂಕೇತಿಕವಾಗಿ ಮದುವೆಯಾಗುವ ಆಚರಣೆಗಳಿವೆ. ಮಕ್ಕಳಾಗದ ಹೆಂಗಸರು ಅವನಿಗೆ ಸಂತಾನ ಕೊಡಲು ಬೇಡುವ ಹಾಡುಗಳ ಚುಂಚನಗಿರಿ ಹಾಗೂ ಲುಂಕೆಮಲೆ ಎರಡೂ ಪ್ರದೇಶಗಳಲ್ಲಿ ಇವೆ. (ರಹಮತ್ ತರೀಕೆರೆ: ಕರ್ನಾಟಕದ ನಾಥಪಂಥ ಪು. ೨೬೩).

**೬. ಬಂಗಾರದ ಕಡಗಗಳ ಕಳುವಿನ ಮಹಿಮೆ**

ಎರ್ರಿತಾತನ ಮಹಿಮೆ ಕಂಡ ಜನರಲ್ಲಿ ಭಕ್ತಿಗೌರವಗಳು ಮೂಡಿ ದೇವರಂತೆ ಪೂಜಿಸತೊಡಗುತ್ತಾರೆ. ದರ್ಶನಕ್ಕಾಗಿ ಎಲ್ಲಿಂದಲೋ ಭಕ್ತ ಜನತೆ ಬರುವುದು ವಾಡಿಕೆಯಂತಿದೆ. ಒಮ್ಮೆ ಶ್ರೀಮಂತ ಭಕ್ತರೊಬ್ಬರು ತಮ್ಮ ಬಯಕೆಯು ಈಡೇರಿದ್ದರಿಂದ ತಾನಂದು ಕೊಂಡಂತೆ ಬಂಗಾರದ ಕಡಗಗಳನ್ನು ತಾತನ ಕೈಗಳಿಗೆ ತೊಡಿಸಿ ಹೋದರು (ಇವರು ಹೊಳಗುಂದ ಪಂಪನಗೌಡರೆಂದು ಕೆಲವರು, ಚಿಂತಕುಂಟೇ ಹಳೇಗೌಡರೆಂದು ಇನ್ನು ಕೆಲವರು ಹೇಳುತ್ತಿದ್ದಾರೆ). ಮರುದಿನ ಮುಂಜಾನೆ ನೋಡಿದಾಗ ಕೈಯಲ್ಲಿ ಕಡಗಗಳು ಇರಲಿಲ್ಲ. ರಾತ್ರಿಯಾರೋ ಅವುಗಳನ್ನು ತಾತನ ಕೈಗಳಿಂದ ಕಿತ್ತುಕೊಂಡು ಹೋಗಿದ್ದರು. ಸಿದ್ಧಲಿಂಗಪ್ಪನವರು ಮರುಗಿ, ತಾತನನ್ನು ಕರಿಸಿ ಕೇಳಿದಾಗ ತಾತ ಬೇಸತ್ತು "ಹೋಗಯ್ಯಾ ಇದ್ದವ ಕೊಟ್ಟ ಇಲ್ಲದವ ನೊಯ್ದ" ಎಂದು ಸುಮ್ಮನಾದ. ಅದೇ ದಿವಸ ಸಂಜೆ ನಾಲ್ಕು ಗಂಟೆಗೊಂದು ಘಟನೆ ಮಠದ ಆವರಣದಲ್ಲಿಯೇ ಎಲ್ಲರ ಸಮಕ್ಷಮ ನಡೆಯಿತು. ಎಲ್ಲಿಯದೋ ಘಟಸರ್ಪವು ಜನರ ಮಧ್ಯದಲ್ಲಿಯೇ ಎದೆ ಎತ್ತಿ ಬುಸುಗುಟ್ಟುತ್ತಾ ಬಂದು ಆ ಜನರಲ್ಲಿಯ ಒಬ್ಬಾತನ ಮೇಲೆರಗಿತು. ಆತ ಓಡಿದ ಹಾವು ಆತನ ಬೆನ್ನುಹತ್ತಿತು. ಸ್ವಲ್ಪ ದೂರದಲ್ಲಿಯೇ ಆತನನ್ನು ಕಚ್ಚಿ ಕಾಣದಂತಾಯಿತು. ತಾತನಲ್ಲಿಗೆ ಬರುತ್ತಿರುವಾಗ ಹಾವು ಕಚ್ಚಿದಾತನನ್ನು ಎತ್ತಿಕೊಂಡು ಅವರ ಕೈಯಲ್ಲಿಯೇ ಪ್ರಾಣವು ಹೋಯಿತು. ಸತ್ತವನು ಅದೇ ಗ್ರಾಮದವನೆಂದು ತಿಳಿಯಿತು. ಕಣ್ಣೆದುರಿಗೆ ನಡೆದ ಈ ವಿಷಯದಿಂದ ಸತ್ತವನೇ ಬಂಗಾರದ ಕಡಗ ಕದ್ದಿರಬೇಕೆಂಬ ಊಹೆಗೆ ಆಧಾರ ಸಿಕ್ಕಂತಾಯಿತು. ಅಂದಿನ ಆ ಹಾವು ಶ್ರೀಮಠದಲ್ಲಿ ಇಂದಿಗೂ ಇದೆ ಎಂದು, ಯಾವಾಗಲಾದರೊಮ್ಮೆ ಇಲ್ಲಿ ಕೆಲಸ ಮಾಡುವವರಿಗೆ ಕಾಣುತ್ತದೆಂದು ಹೇಳುತ್ತಾರೆ.

"ಭಾವಿಸುವೊಡಾ ಚೇಳ್ಳಗುರಿಕೆಯು
ಪಾವನ ಕ್ಷೇತ್ರ ಮದೆನಿಸಲಾ

ಭಾವ ಜಾಹಿತ ತಾತನನುಪಮ ದರ್ಶನಕ್ಕಾಗಿ
ತೀವಿದರು ಮುದದಿಂದೆ ಭಕ್ತ ಜ
ನಾವಳಿಯು ಬರತೊಡಗಿದುದು ಮಿಗೆ
ಭೂವಲಯದೆಲ್ಲೆಡೆಗಳಿಂದಂ ಪ್ರತಿದಿವಸದಲ್ಲಿ
(ನಾಗೇಶಶಾಸ್ತ್ರಿ ವೈ. ಲೀಲಾಮೃತ ಸಂ. ೧೦ ಪು. ೧೧೮).

ತಾತನವರ ಮೇಲೆ ನಂಬಿಕೆ, ಗೌರವಗಳು ಅಧಿಕವಾದಾಗ, ಅಂಥ ಭಕ್ತರ ಸಹಾಯದಿಂದ ಗ್ರಾಮದ ಮಠದ ಆವರಣದಲ್ಲಿ ಭಕ್ತಿ ಭಜನೆಗಳು ನಡೆಯುತ್ತಿದ್ದವು. ಧನ ಧಾನ್ಯ ಮುಂತಾದ ವಸ್ತುಗಳನ್ನು ಸಂಗ್ರಹಿಸುತ್ತಾರೆ. ಇಂತಹ ಸಪ್ತಾಹ ಕಾರ್ಯಗಳು ತಾತನವರ ಹೆಸರು ಪ್ರಚಾರವಾಗಿ ಅವರ ವೈರಾಗ್ಯ ಮಹಿಮೆಗಳು ಭಕ್ತರನ್ನು ಚೇಳಗುರಿಕೆಯೆಡೆಗೆ ಸೆಳೆಯುತ್ತಿದ್ದವು.

**೭. ಲಿಂಗದ ಮಹಿಮೆ**

ಕುಡತಿನಿ ಕಾರೇ ಸಿದ್ಧರಾಮಪ್ಪನವರು ಹಂಗ ಪೂಜಾನಿಷ್ಠರು ಹಾಗೂ ಲಿಂಗಧಾರಿಯಾಗಿದ್ದು, ಒಮ್ಮೆ ತಾತನ ದರ್ಶನಕ್ಕ ಬಂದಾಗ ತಾತ ಲಿಂಗಧರಿಸದೇ ಇರುವುದನ್ನು ಗಮನಿಸಿ ತಾತನನ್ನು ವಂದಿಸದೇ ಹೋದನು. ಆದರೆ ಲಿಂಗಪೂಜೆನಿಷ್ಠ ಹಾಗೂ ಲಿಂಗಧಾರಿಯಾಗಿದ್ದ ಸಿದ್ಧರಾಮಪ್ಪನವರ ಲಿಂಗ ಅದು ಹೇಗೋ ಕಳೆದುಹೋಯಿತು. ಕಳವಳಗೊಂಡು ತಮ್ಮ ತಪ್ಪಿನ ಅರಿವಾಗಿ ಮತ್ತೆ ತಾತನಲ್ಲಿಗೆ ಬಂದು ಕ್ಷಮೆ ಯಾಚಿಸಿ ವಿನಂತಿಸಿಕೊಂಡರು. ಮಠದ ಆವರಣದಲ್ಲಿಯೇ ಅವರಿಗೆ ಕಳೆದು ಹೋದ ಲಿಂಗ ಕೊನೆಗೆ ದೊರೆಯಿತು.

**೮. ಕೋರ್ಟ್‌ಸಮಸ್ಯೆಗೆ ಪರಿಹಾರದ ಮುನ್ಸೂಚನೆ**

ಧಾರವಾಡದಲ್ಲಿ ವಕೀಲರಾಗಿದ್ದ ಕರಿವೀರಪ್ಪ ಎಂಬುವರು ಕೋರ್ಟಿನ ಕೇಸಿನ ವಿಷಯವಾಗಿ ಅಪರಾಧ ಮಾಡಿದ್ದಾನೆಂಬ ಆರೋಪದ ಮೇಲೆ ಸರ್ಕಾರದವರು ಸನ್ನದ್ದನ್ನು ರದ್ದುಮಾಡಿ ಜುಲ್ಮಾನೆಯನ್ನು ವಿಧಿಸಿದ್ದರಂತೆ. ಇದರಿಂದ ವ್ಯಾಕುಲಚಿತ್ತನಾದ ಕರಿವೀರಪ್ಪ ತಾತನ ಮೊರೆಹೊಕ್ಕ. ಒಂದು ದಿನ ತಾತ ಒಳ್ಳೆಯದಾಗುವುದೆಂದು ಮಾತ್ರ ಹೇಳಿದರಂತೆ. ಇದಾದ ಕೆಲವು ದಿನಗಳಲ್ಲಿಯೇ ವಿಧಿಸಲ್ಪಟ್ಟ ಜಲ್ಮಾನೆಯನ್ನು ತೆಗೆದು ಹಾಕಲಾಯಿತೆಂದು ಹಿಗ್ಗಿನಿಂದ ವಕೀಲ ಮಠಕ್ಕೆ ಬಂದು ತಾತನಿಗೆ ನಮಸ್ಕರಿಸಿದನಂತೆ. ಆಗ ತಾತ ಕೆಳಗೆ ಬಿದ್ದಿದ್ದ ಮಿಠಾಯಿ ಪೊಟ್ಟಣದ ಕಾಗದವನ್ನು ವಕೀಲನಿಗೆ ಕೊಟ್ಟ ವಕಾಲ್ತು ನಡೆದು! ಎಂದರಂತೆ. ಅದರಂತೆ. ರದ್ದುಗೊಳಿಸಲ್ಪಟ್ಟಿದ್ದ ಸನದು ಪುನಃ ಸಿಕ್ಕು ವಕಾಲತ್ತು ನಡೆಯಲು ಸರ್ಕಾರದಿಂದ ಅನುಮತಿ ಸಿಕ್ಕಿತಂತೆ. ಒಮ್ಮೆ ಮೌನ ಒಮ್ಮೆ ಮಾತು ಆಗಾಗ ಸೇವಿಸುತ್ತಿದ್ದ ಆಹಾರ ನಿಂತಲ್ಲೆ ನಿಲ್ಲದೆ ಅವಸರ ಪಡುತ್ತಾ ಯೋಗಮಾರ್ಗ, ಜ್ಞಾನಮಾರ್ಗ ಹಾಗೂ ಕರ್ಮಮಾರ್ಗದಿಂದ ಜ್ಞಾನದ ಸಿದ್ಧಿಯಡೆಗೆ ಸಾಗಿದ ತಾತನದು ವಿಶಿಷ್ಟ ವ್ಯಕ್ತಿತ್ವ. ನಂಬಿದವರಿಗೆ ಬಂಧುವಾಗಿ ಬಾಳಿದ ಅವಧೂತರು ಚೇಳಗುರಿಕೆ ಎರ್ರಿತಾತ.

**೯. ಕರಿಬಸಯ್ಯನವರಿಗೆ ಶಾಪದ ಬಾಣ**

ಚಾಕು ಬಂಡೆಯ ಕರಿಬಸಯ್ಯನವರು (ಇವರನ್ನೇ ತಾತ ದಫೇದಾರ ಎಂದು ಕರೆಯುತ್ತಿದ್ದರಂತೆ)

ಎಲ್ಲಿಗೋ ಹೋಗಿಬರುತ್ತಿದ್ದಾಗ ದಾರಿಯಲ್ಲಿದ್ದ ಚೇಳಗುರಿಕೆಗೆ ಬಂದು ತಾತನ ದರ್ಶನ ಮಾಡಿಕೊಂಡು ಹೋಗೋಣವೆಂದು ಕಾಯಿ ಕರ್ಪೂರ ತೆಗೆದುಕೊಂಡು ಮಠದೊಳಗೆ ಹೋದರಂತೆ. ಆಗ ತಾತ ಮಲಗಿದ್ದ ತನ್ನ ಯೋಗನಿದ್ರೆಯಲ್ಲಿ ಪರವಶನಾಗಿ ಕಾದೂ ಕಾದೂ ಬೇಸತ್ತು ಕರಿಬಸಯ್ಯ ಮಲಗಿದ್ದ ತಾತನ ಮುಂದೆ ಕಾಯಿ ಒಡೆದು ಕರ್ಪೂರ ಹಚ್ಚಿಟ್ಟು ನಮಸ್ಕರಿಸಲು ಪಾದ ಮುಟ್ಟಿದ ಕೂಡಲೇ ತಾತನು ಬಾಲ ತುಳಿದ ಸರ್ಪದಂತೆ ವ್ಯಗ್ರವಾಗಿ ಮೇಲೆದ್ದು ಕುಳಿತು "ನಿನ್ನ ಮನೆ ಹಾಳಾಗ" ಎಂದು ಶಪಿಸಿದರಂತೆ. ಅಲ್ಲಿಯೇ ಇದ್ದ ಸಿದ್ದಲಿಂಗಪ್ಪ ಎಂಬ ಊರಿನ ಪ್ರಮುಖರು ಇತ್ಯಾದಿಗಳು "ಏನು ತಾತ ನಿನ್ನ ದಫೇದಾರನನ್ನು ಹೀಗೆ ಬಯ್ಯುವುದೇ? ಎಂದರೆ" ಬಾಣ ಬಿಟ್ಟಾಯಿತಯ್ಯಾ! ಅಂದನಂತೆ. ತಾತ ಮುಂದೆ ತಾತನ ಶಾಪದಂತೆ ಕರಿಬಯ್ಯನವರ ವಂಶ ನಿರ್ನಾಮವಾಯಿತಂತೆ. ಇದನ್ನು ಚಾಕುಬಂಡಿಯ ಕರಿಬಸಯ್ಯನವರು ತಿಳಿಸಿದ್ದೆಂದು ಚಂದ್ರಯ್ಯನವರು ಸಂಗ್ರಹಿಸಿದ ಮಾಹಿತಿ. ಅಂದಿನ ಸುಪ್ರಸಿದ್ಧ ನಟ ತಿಪ್ಪಯ್ಯನವರ ತಂದೆ ಈ ಕರಿಬಸಯ್ಯ. ಜೋಳದರಾಶಿ ದೊಡ್ಡನಗೌಡ, ಬಳ್ಳಾರಿ ರಾಘವ ಇವರ ಸಮ ಜೋಡಿಯಾದ ಸಹನಟ ತಿಪ್ಪಯ್ಯ.

ಅವಧೂತರ ಸಂತರ ಪವಾಡಗಳ ಇನ್ನೊಂದು ಭಾಗವೆಂದರೆ ಅವರ ವಿಚಿತ್ರ ವರ್ತನೆಗಳದ್ದೂ, ತಮ್ಮ ಹುಚ್ಚಿನ ಮೂಲಕ ಅವರು ಮಾಡಿದ ಚಟುವಟಿಕೆಗಳು ಅವರ ಜನಪ್ರಿಯತೆಯನ್ನು ಹೆಚ್ಚಿಸಿವೆ. ವಾಸ್ತವವಾಗಿ ಹುಚ್ಚಿನ ಅಂಶವು ಅನುಭಾವಿ ಪಂಥದಲ್ಲಿ ಸಾಮಾನ್ಯ. ಯೋಗದ ಮೂಲತ ಪರಾ (Trans) ಸ್ಥಿತಿಗೆ ಹೋಗುವುದು. ಇದಕ್ಕೆ ಉತ್ತೇಜನ ಪಡೆಯಲು ಭಂಗಿಯಂತಹ ಮಾದಕಗಳನ್ನು ಅವರು ಧಾರ್ಮಿಕ ಸಾಮಾಜಿಕ ಶಿಷ್ಟಾಚಾರಗಳನ್ನು ಮೀರಿ ನಿರಂಕುಶಮತಿಗಳಾಗಿ ದಾರ್ಶನಿಕ ಸ್ಥಿತಿ ಪಡೆಯುತ್ತಿದ್ದರು (ರಹಮತ್ ತರೀಕೆರೆ ಕರ್ನಾಟಕದ ಸೂಫಿಗಳು. ಪು. ೧೫೫ ಪರಿಷ್ಕೃತ ಮುದ್ರಣ).

ಆದರೆ ಎರ್ರಿತಾತನವರಿಗೆ ಯಾವುದೇ ಭಂಗಿಯಂತಹ ಮಾದಕ ಪದಾರ್ಥಗಳನ್ನು ಬಳಸುತ್ತಿದ್ದರೆಂಬುದು ಯಾವ ಐತಿಹ್ಯಗಳಿಂದಲೂ ಕ್ಷೇತ್ರಕಾರ್ಯದಿಂದಾಗಲೀ ತಿಳಿದು ಬಂದಿಲ್ಲ. ಹಾಗೆಯೆ ಅವರು ಅದನ್ನು ಸೇವಿಸುತ್ತಿದ್ದಿಲ್ಲವೆಂಬುದು ಸಹ ವ್ಯಕ್ತಪಡಿಸಲು ಸಾಧ್ಯವಿಲ್ಲ. ಏಕೆಂದರೆ ಬಹುತೇಕ ಯೌಗಿಕ ಪುರುಷರೆಲ್ಲರು ಒಂದಲ್ಲ ಒಂದು ರೀತಿಯ ಮಾದಕ ಚಟಗಳಿಗೆ ಒಳಗಾಗಿರುವುದನ್ನು ನಾವು ಗಮನಿಸಬಹುದಾಗಿದೆ. ಏನೇ ಆಗಲಿ ಒಮ್ಮೆ ಆಡಿದ ಮಾತು ಬಿಟ್ಟ ಬಾಣಕ್ಕೆ ಸಮಾನ. ಅದನ್ನು ಮತ್ತೇ ತೊಡಡುವುಲಾಗಲಿ ಹಿಂದಿರುಗಿ ಮರಳಿ ಪಡೆಯುವುದಾಗಲೀ ಅವರಿಗೆ ಗೊತ್ತಿಲ್ಲವಂತೆ. ಅದಕ್ಕಾಗಿಯೇ ಕರಿಬಸಯ್ಯ ತಾತನಿಗೆ ಪ್ರಿಯನಾಗಿದ್ದರೂ ಸಹ ಅದು ಸಂಭವಿಸಿತ್ತು.

೧೦. ನಿರಂಜನ ಸ್ವಾಮಿಯನ್ನು ವಿಕಾರತೆ ಆವರಿಸುವಂತೆ ಮಾಡಿದ್ದು.

ಒಂದು ದಿನ ಭಕ್ತಾದಿಗಳು ಒಂದು ಒಳ್ಳೆಯ ರೇಷ್ಮೆ ಉಡಿಯನ್ನು ತಾತನಿಗೆ ತಂದು ಉಡಿಸಿದರಂತೆ ಅಲ್ಲಿಯೇ ಸೇವೆ ಮಾಡುತ್ತಾ ಇದ್ದ ನಿರಂಜನ ಸ್ವಾಮಿಗಳಿಗೆ ಅದರ ಮೇಲೆ ಮೋಹವುಂಟಾಗಿ ನನಗೆ ಕೊಡಿರೆಂದು ಕೇಳಿದರಂತೆ. ಅದಕ್ಕೆ ತಾತ "ಬೆತ್ತಲೆ ಇರು!" ಎಂದು ಅಂದರಂತೆ. ಅಂದ ಕೂಡಲೇ ನಿರಂಜನ ಸ್ವಾಮಿಗಳ ಮನಸ್ಸು ವಿಕಾರಕ್ಕೊಳಗಾಗಿ ಮೈಮೇಲಿದ್ದ ಬಟ್ಟೆಗಳನ್ನೆಲ್ಲಾ ಕಿತ್ತಿಹಾಕಿ ಹುಚ್ಚನಂತೆ

ವರ್ತಿಸಿ ದಿಗಂಬರವಾಗಿಯೇ ಇದ್ದರಂತೆ. ಕೆಲವು ದಿನ ಯಾರು ಏನು ಮಾಡಿ ಬಟ್ಟೆ ಉಡಿಸಿದರೂ ಕಿತ್ತೆಸೆದು ನಗ್ನವಾಗಿಯೇ ಇರುತ್ತಿರಲು ಮಠದ ಮುಖ್ಯಾಧಿಕಾರಿ ಸಿದ್ಧಲಿಂಗಪ್ಪ ಸ್ವಾಮಿಗಳ ಸ್ಥಿತಿಯನ್ನು ಕುರಿತು ಮೊರೆಯಿಡಲು ತಾತನು 'ಒಳ್ಳೆಯದಯ್ಯಾ!' ಎಂದರಂತೆ. ಆಗ ನಿರಂಜನ ಸ್ವಾಮಿ ಸ್ಥಿಮಿತಕ್ಕೆ ಬಂದು ಬಟ್ಟೆಯುಟ್ಟರಂತೆ. ಬಟ್ಟೆಯ ಮೇಲೆ ಆಸೆ ಏಕೆ? ಈ ಆಸೆಯು ಬಟಟೆಯನ್ನು ಬಿಟ್ಟು ನಿರಾಶೆಯ ಬಟ್ಟೆಯನ್ನೆ ಹಿಡಿ, ನಿರಾಶೆಯ ಬಟ್ಟೆಯನ್ನೆ ತೊಡಿ. ನಿರಂಜನನೆಂದು ಹೆಸರಿಟ್ಟುಕೊಂಡ ನಿನಗೆ ಹೊರಗಿನ ರಂಜನೆಯ ಕಡೆ ದೃಷ್ಟಿಯೇಕೆ? ಒಳಗೆ ಚಿದಂಬರನಾಗಿದ್ದವನೇ ಹೊರಗೆ ದಿಗಂಬರನಾಗಿಯಾಗಲಿ ಪೀತಾಂಬರಧಾರಿಯಾಗಿ ಯಾಗಲಿ ಇರಬಲ್ಲ ಬೇಕೆಂಬುದೂ ವಿಕಾರವೇ, ಬೇಡವೆಂಬುದೂ ವಿಕಾರವೇ ಬೇಕು ಬೇಡಗಳೆಂಬ ದ್ವೈತ ವಿಕಾರವನ್ನು ಅಳಿಯುವುದೇ ನಿರ್ವಿಕಾರ ನಿರ್ವಿಕಾರಿಯಾದವನು ನಿರಂಜನ ಇದು ತಾತನ ದೃಷ್ಟಿಯಾಗಿತ್ತು.

ಒಬ್ಬ ಪೋಲೀಸ್ ಇನ್ಸ್‌ಪೆಕ್ಟರ್ ಮಠಕ್ಕೆ ಬಂದು ತಾತನ ಪಾದಗಳಿಗೆ ನಮಸ್ಕರಿಸಲು ಹೋದಾಗ "ಹೋಯಿತು ಹೋಯಿತು" ಎಂದ ತಾತ. ಏನು ಹೋಯಿತು, ಏಕೆ ಹೋಯಿತು, ಎಲ್ಲಿ ಹೋಯಿತು, ಹೋಯಿತು ಎಂದರೆ ಏನು? ಎಂದು ಎಲ್ಲರೂ ಆಶ್ಚರ್ಯಪಡುತ್ತಿದ್ದ ಜನರೂ ಇನ್ನಷ್ಟು ಆಶ್ಚರ್ಯ ಪಡುವಂತೆ ಆಯಿತು. ಪೋಲಿಸರೇ ಬಂದು ಪೋಲೀಸ್ ಇನ್ಸ್‌ಪೆಕ್ಟರನನ್ನು ಬಂಧಿಸಿದರು. ಅದೂ ಮಠದ ಆವರಣದಲ್ಲಿಯೇ ತಿಮ್ಮರೆಡ್ಡಿ ವಕೀಲರ ನೋಟಿನ ಕೇಸಿನಲ್ಲಿ ಆ ಇನ್ಸ್‌ಪೆಕ್ಟರ್ ಸಾಬ್ ಸುಳ್ಳು ಸ್ಟೇಟ್‌ಮೆಂಟ್ ಕೊಟ್ಟು ಸಿಕ್ಕಿಹಾಕಿಕೊಂಡಿದ್ದನಂತೆ. ಪೋಲೀಸ್ ಅಧಿಕಾರಿಯೇ ಅಪರಾಧ ಮಾಡಿದ ನೇರಸ್ಥನೆಂದು ತಿಳಿದಾಗ ಸರ್ಕಾರವು ಅವನನ್ನು ಎಲ್ಲಿದ್ದರೆ ಅಲ್ಲಿ ಬಂಧಿಸಲು ಆಜ್ಞೆಯಿತ್ತಿತ್ತು. ಯಾರದೊ ಹೋದರೆ ಸುಮ್ಮನೇ ನನ್ನದೆ ಹೋಯಿತು ಎಂದು ಸುಳ್ಳ ಸ್ಟೇಟ್‌ಮೆಂಟ್ ಕೊಟ್ಟದ್ದಿ. ಹೋಯಿತು ಎಂದದ್ದಕ್ಕೆ ಹೋಗಿಯೇ ಹೋಯಿತು. ನಿನ್ನ ಕೆಲಸ ಎಂಬುದರ ಅರ್ಥ. ಇಂಥದ್ದ ಕಥೆಯೊಂದನ್ನು ಎಮ್ಮಿಗನೂರು ಜಡೆಪ್ಪ ತಾತನವರನ್ನು ಕುರಿತು ಹೇಳುತ್ತಾರೆ. ಇದು ಇದ್ದ ಕೆಲಸ ಹೋದದ್ದರ ಕಥೆ (ಈ ಮೇಲಿನ ನಾಲ್ಕು ಪವಾಡಗಳ ಚನ್ನಬಸವೇಶ್ವರ ಸಿ.ವ. ಅವರ ಚೇಳಗುರಿಕೆ ಎರ್ರಿಸ್ವಾಮಿಗಳ ಲೀಲಾವಿಲಾಸದಿಂದ ಸಂಗ್ರಹಿಸಲಾಗಿದೆ. ಪು. ೬೮೬೯).

ಪವಾಡಗಳ ಲೋಕವೇ ಒಂದು ವಿಚಿತ್ರವಾದದ್ದು. ಶಿವನು ತ್ರಿಪುರದಹನ ಸಂಹಾರ ಮಾಡಿದ್ದು, ಸಿರಿಯಾಳ ಚಂಗಳೆಯರ ಮಗನನ್ನು ಅವರಿಂದಲೇ ವಧೆಗೈಯಿಸಿ ಊಟಮಾಡಿ ಮತ್ತೆ ಬದುಕಿಸಿದುದು. ಚೋಳರಾಜನಿಗೆ ಹೊನ್ನಿನ ಮಳೆ ಕರೆಸಿದ್ದು, ಅರ್ಜುನನ್ನು ತನ್ನ ಪ್ರತಿಜ್ಞೆಯನ್ನು ಪೂರೈಸಿ ಕೊಳ್ಳಲೆಂದು ಶ್ರೀಕೃಷ್ಣನು ಸೂರ್ಯನನ್ನು ತನ್ನ ಚಕ್ರದಿಂದ ಮರೆಮಾಡಿದ್ದು, ದ್ರೌಪದಿಯ ವಸ್ತ್ರಾಪಹರಣ ಪ್ರಸಂಗದಲ್ಲಿ ಶ್ರೀಕೃಷ್ಣನು ಆಕೆಯ ಸೀರೆ ಅಕ್ಷಯವಾಗುವಂತೆ ಮಾಡಿದ್ದು ಮತ್ತು ಏಕಕಾಲಕ್ಕೆ ಹದಿನಾರು ಸಾವಿರ ರಾಣಿಯರೊಡನಿದ್ದುದು ಇವೇ ಮುಂತಾದವುಗಳನ್ನು ಲೀಲೆಗಳೆಂದು ಕರೆಯಬಹುದು. ಇವು ದೇವಾನುದೇವತೆಗಳಿಂದ ನಡೆದಂಥವು ಎಂಬ ನಂಬಿಕೆಯಿದೆ. ಪೌರಾಣಿಕ ಛಾಯೆಯನ್ನು ಪಡೆದು ಬಣ್ಣದುಂಬಿ ವರ್ಣಿತವಾದಂಥವು. ಆದರೆ ಪವಾಡಗಳು ದೈವೀ ಸಂಭೂತರೆನಿಸಿದ, ದೇವರ ಪ್ರೀತಿಗೆ ಪಾತ್ರನಾದ

ಮಾನವನಿಂದಲೇ ನಡೆಯುವಂಥವು. ಬಸವಣ್ಣನು ಬರಡು ಗಿಡವನ್ನು ಚಿಗುರಿಸಿದು, ತೋಂಟದ ಸಿದ್ಧಲಿಂಗರು ಮಾಡಿದ ತುರುಕ ರಾಜನಿಗೆ ಪ್ರಾಣದಾನ ಮಾಡಿರುವುದು ಮುಂತಾದವು. ಇವೇ ದೇವರಿಂದ ಜರುಗಿದರೆ ಲೀಲೆಗಳಾಗುತ್ತವೆ, ಮಾನವನಿಂದ ನಡೆದರೆ ಪವಾಡಗಳಾಗುತ್ತವೆ.

ಎಲ್ರಿತಾತನು ಮಾಡಿದ ಹತ್ತಾರು ಪವಾಡಗಳು ಇವೆ. ಪವಾಡಕ್ಕಿಂತಲೂ ಸತ್ಯಕ್ಕೆ ಹತ್ತಿರವಾದ ನೂರಾರು ಲೀಲೆಗಳಿವೆ. ಒಬ್ಬಬ್ಬರ ಜೀವನದಲ್ಲಿ ವೈಯಕ್ತಿಕವಾಗಿ ನಡೆದ ಘಟನೆಗಳು ಅದೆಷ್ಟೋ ಇವೆ. ಕೆಲವರ ಸ್ವಪ್ನದಲ್ಲಿ ಕಾಣಿಸಿಕೊಂಡಿದ್ದಾನಂತೆ. ಶಾಮಣ್ಣನವರ ಜಾತಕದಂತೆ ಅವನಿಗೆ ಮೂವತ್ತೊಂಬತ್ತನೆಯ ವಯಸ್ಸಿನಲ್ಲಿ ದೊಡ್ಡ ಗಂಡಾಂತರವಿತ್ತಂತೆ. ಉಳಿಯುವುದು ಕಷ್ಟವೆಂದೂ ಜ್ಯೋತಿಷ್ಯಜ್ಞರು ಹೇಳುತ್ತಿದ್ದರಂತೆ. ಮೂವತ್ತು ಮೂರನೆಯ ವಯಸ್ಸಿನಲ್ಲಿ ಅಂದರೆ ೧೯೩೬ರಲ್ಲಿ ತಾತ ಸ್ವಪ್ನದಲ್ಲಿ ಕಂಡು "ಒಬ್ಬ ಬರುತ್ತಾನಯ್ಯಾ ಅವನು ನಿನ್ನನ್ನು ಕಾಪಾಡುತ್ತಾನೆ" ಎಂದು ಹೇಳಿದರಂತೆ. ಆಗ ಶಾಮಣ್ಣ "ನೀವು ಏನಪ್ಪಾ" ಅಂದಾಗ, "ನಾನು ಯಾವಾಗಲೂ ಇದ್ದೇನಯ್ಯಾ" ಎಂದರಂತೆ ತಾತ. ಆಗ ಶಾಮಣ್ಣನವರಿಗೆ ಮೂವತ್ತೊಂಬತ್ತನೆಯ ವರ್ಷದಲ್ಲಿ ಬರಲಿದ್ದ ಗಂಡಾಂತರದ ನೆನಪಿರಲಿಲ್ಲವಂತೆ. ತಾತ ಸ್ವಪ್ನದಲ್ಲಿ ಕಂಡ ಮೇಲೆ ಒಂದು ವಾರದೊಳಗಾಗಿ ಶ್ರೀರಾಮಲಿಂಗಸ್ವಾಮಿಗಳು ಶಾಮಣ್ಣನವರ ಮನೆಗೆ ಬಂದರಂತೆ ೧೯೪೨ರಲ್ಲಿ ಅವರಿಗೆ ವಿಪತ್ತು ಸಂಭವಿಸಿದಾಗ ರಾಮಲಿಂಗಸ್ವಾಮಿಗಳಿದ್ದು ಶಾಮಣ್ಣನವರನ್ನು ಪಾರು ಮಾಡಿದರೆಂಬುದು ಕ್ಷೇತ್ರಕಾರ್ಯಕ್ಕೆಂದು ಮಠಕ್ಕೆ ಹೋದಾಗ ಧರ್ಮಾಧಿಕಾರಿಗಳು ತಿಳಿಸಿದ್ದಾರೆ. ಮಹಾಮಹಿಮರು ಯಾವಾಗ? ಎಲ್ಲಿ? ಯಾರಿಗೆ ದರ್ಶನ ನೀಡುತ್ತಾರೋ ಆಶೀರ್ವಾದ ಮಾಡುತ್ತಾರೋ ತಿಳಿಯದು. ಎಲ್ರಿತಾತನು ಸತ್ತನಂತರ ಶಾಮಣ್ಣನಿಗೆ ದರ್ಶನ ವಿತ್ತಂತೆ ಶ್ರೀ ಜೋಳದರಾಶಿ ದೊಡ್ಡನಗೌಡ ಅವರಿಗೂ ಸ್ವಪ್ನದರ್ಶನವಿತ್ತು. ಪಂಚಾಕ್ಷರೀ ಮಂತ್ರವನ್ನು ಉಪದೇಶಮಾಡಿದರಂತೆ. ಕನಸಿನಲ್ಲಿ ಬಂದು ದರ್ಶನ ಕೊಟ್ಟ ತಾತನನ್ನು ಮನಸ್ಸಿನಲ್ಲಿಯೂ ಬಂದು ನೆಲೆಗೆಂದು ಗೌಡರುಹಾಕಿದ ಹೃದಯಯಂಗಮವಾಗಿ ಹಾಡಿದ್ದಾರೆ. ಆತನ ಕರುಣೆಯನ್ನು ಕಂಬನಿದುಂಬಿ ಕೊಂಡಾಡಿದ್ದಾರೆ. 'ಬಾಗುರುವೇ' ಎಂದು ಆತನನ್ನು ಆಹ್ವಾನಿಸಿ ತಮ್ಮ ಎದೆಯ ಗದ್ದುಗೆಯ ಮೇಲೆ ಕೂಡಿಸಿಕೊಂಡು ಆ ದಿವ್ಯಾನುಭೂತಿಯನ್ನು ತಮ್ಮ ಕವನಯೊಂದರಲ್ಲಿ ಮೂಡಿಸಿದ್ದಾರೆ.

"ಬಂದೆಯಾ ಬಾ ಗುರುವೆ ಎನ್ನ ಮನ ಮಂದಿರಕ್ಕೆ
ಎಂದಿನದೂ ಸುಕೃತಸಿರಿ ಇಂದು ಮೈದಳದಂತೆ"

ಮತ್ತೆ ಕೆಲವು ದಿನಗಳ ಮೇಲೆ ಸ್ವಾಮಿಯ ಸ್ವಪ್ನದರ್ಶನ ನೆನಸದೇ ಬಂದಾತ ನೆನದರೂ ಬರಲಿಲ್ಲ ಬಹಳ ದಿನಗಳವರೆಗೆ ಬಹಳ ದಿನಗಳ ಮೇಲೆ ಇನ್ನೊಮ್ಮೆ ಕನಸಿನಲ್ಲಿ ಕಂಡ ಅದನ್ನು ತಮ್ಮ ಸಹಜ ಕಾವ್ಯವಾಣಿಯಲ್ಲಿ ಹಾಡಿದ್ದಾರೆ.

ಇಂದಿಗೆ ದಯ ಬಂದಿತೇನು
ಬಂದ ಭಾಗ್ಯವ ನೋಡಿ ನಿನಗೆ

ಅಂದು ತಾಯಿಯ ಮರಣ ಕಂಜಿ
ಬಂದು ಬೇಡಿದ ರಕ್ಷಿಸೆಂದು
ಕಂದೆರೆದು ನೀನೋಡಿ ಭರದಿ
ಇಂದೆ ಮರಣವು ತಪ್ಪದೆಂದು
ಕಂದನನು ನಡೆಯೆಂದು ಮುನಿವರ

ಒಂದು ದಿನ ಕನಸಿನಲಿ ಕಂಡು
ಸುಂದರರದ ಮೃದು ಹೂಗಳಿತ್ತು
ಆದರಿಸಿ ಜ್ಞಾನವನ್ನು ಬೋಧಿಸಿ
ಅಂದಿನಿಂ ದರ್ಶನವನೀಯದೆ
ಕಂದನನು ಮರುಗಿಸಿದ ಮಹಿಮೆ

ಎಂತು ನಿನ್ನನ್ನು ನಿಂದಿಸಿದರೂ
ಎಂತು ಅಪರಾಧಗಳ ಗೈದರೂ
ತಂದೆ ಮಗನನ್ನು ಮರೆಯಲುಂಟೆ
ಇಂದು ದರ್ಶನವಿತ್ತು ಸಲಹಿದೆ
ಮುದದ ಚೇಳ್ಗುಕೀಶ ಎರಿಗುರು.

ಎಷ್ಟೋ ದಿನಗಳು ಕಳೆದ ಮೇಲೆ ಮತ್ತೆ ಎರ್ರಿತಾತನು ಅನಿರೀಕ್ಷಿತವಾಗಿ ಅನಪೇಕ್ಷಿತವಾಗಿ ಅನಾಹ್ವಾನಿತವಾಗಿ ತಾತ ಗೌಡರಿಗೆ ಸ್ವಪ್ನ ದರ್ಶನವಿತ್ತನಂತೆ. (ಚನ್ನಬಸವೇಶವರ ಶ್ರೀ ಎರ್ರಿತಾತ ವಿಲಾಸ ಪು. ೨೪). ತಾತನವರ ಮಠದಲ್ಲಿ ವಿದ್ಯುತ್ ದ್ವೀಪದ ಬೋರ್ಡು ಬರೆಯುತ್ತಿರಲಾಗಿ, 'ಜೀವಸಮಾಧಿ' ಎಂದು ಬರೆಯಬೇಕೋ ಬೇಡವೊ ಎಂದು ಶ್ರೀ ಶ್ಯಾಮಣ್ಣನವರು ಯೋಚನಾಪರರಾಗಿರಲು, ಸದ್ಗುರು ತಾತನವರು ಅವರ ಸ್ವಪ್ನದಲ್ಲಿ ಕಾಣಿಸಿಕೊಂಡು 'ಜೀವಸಮಾಧಿ' ಎಂದು ಬರೆಸಯ್ಯಾ ಎಂದು ಅಪ್ಪಣೆ ಕೊಡಿಸಿದರಂತೆ "ನಾನು ಯೋಗ ಸಮಾಧಿಯಲ್ಲಿರಲು ಮೂರ್ಖರು ನನ್ನನ್ನು ಸಮಾಧಿ ಮಾಡಿದರು" ಎಂದು ತಾತನೇ ಖುದ್ದು ಸ್ವಪ್ನದಲ್ಲಿ ತಿಳಿಸಿ 'ಕಾಲ ಬರುತ್ತದಯ್ಯಾ' ಆಗ ಬರುತ್ತೇನೆ. ಈ ಗೇನು ಸಮಾಧಿ ತೊಡಿಸಬೇಡ ಅಂದರಂತೆ (ಅದೇ ಪು. ೭೬).

ಇಲ್ಲಿ ಚನ್ನಬಸವೇಶ್ವರ ಸಿ.ವ. ಅವರ ಒಂದು ಸನ್ನಿವೇಶವನ್ನು ಉಲ್ಲೇಖಿಸುವುದು ಸೂಕ್ತವಾಗಿದೆ.

"ನಮ್ಮ ತಾಯಿಯು ಒಂದು ಘಟನೆಯನ್ನು ಹೇಳುತ್ತಿದ್ದರು. ನಮ್ಮ ಅಕ್ಕನ ತರುವಾಯ ಬಹಳ ದಿನಗಳವರೆಗೆ ಮಕ್ಕಳಾಗದಿದ್ದರಿಂದ ಪುತ್ರ ಸಂತಾನಾಪೇಕ್ಷೆಯಲ್ಲಿದ್ದ ನಮ್ಮ ತಾಯಿಯನ್ನು ನಮ್ಮ ತಂದೆಯ ಸ್ನೇಹಿತರಾದ ಬೇವಿನಹಾಳ ಗೌಡನ ಹೆಂಡತಿಯು ಚೆಳಗುರ್ಕಿಗೆ ಕರೆದೊಯ್ದರಂತೆ. ಏನೊಂದು ಹೇಳದ ಮುಂಚೆಯೇ ನಮ್ಮ ತಾಯಿಯನ್ನು ಕಂಡು ತಾತನು" ದೇವರು ಕೊಡ್ತಾನೆ ದೇವರು ಕೊಡ್ತಾನೆ" ಎಂದರಂತೆ.

ಬೇಳಗುರ್ಕಿಗೆ ಹೋಗಿಬಂದ ಮೇಲೆ ನಾನು ಹುಟ್ಟಿದನೆಂದು ಎರ್ರಿತಾತನ ಸುದ್ದಿ ಬಂದಾಗಲೆಲ್ಲ ನಮ್ಮ ತಾಯಿ ಹೇಳುತ್ತಿದ್ದರು. ದೇವರು ಕೊಡ್ತಾನೆ ದೇವರು ಕೊಡ್ತಾನೆ ಎಂದು ಎರಡು ಸಲ ಅಂದದ್ದರಿಂದ ನಾನೂ ನಾನಾದಮೇಲೆ ನಮ್ಮ ತಮ್ಮ ಹುಟ್ಟಿದವೆಂದು ಹೇಳುತ್ತಿದ್ದರು (ಈ ಸಂಗತಿಯನ್ನು ಸ್ವತಃ ಚನಬಸವೇಶ್ವರ ಸಿ.ವ. ಅವರ ಕುಟುಂಬದಲ್ಲಿ ನಡೆದ ಘಟನೆಯೆಂದು ಬರೆಯುತ್ತಾರೆ). ಮಹನೀಯರ ಮಾತೇಬೇರೆ. ಅವರ ಮಾತಿನ ರೀತಿ ಬೇರೆ ರೀತಿಗೆಟ್ಟ ಜಗತ್ತಿಗೆ ಅದೂ ತಿಳಿಯುವುದೂ ಕಷ್ಟ. ತಿಳಿದರೂ ಅಷ್ಟಷ್ಟೆ. ಒಮ್ಮೆ ಹಿಡಿದ ಮೇಲೆ ಆತನು ಬಿಡುವುದು ಕಷ್ಟ ಬಿಟ್ಟಮೇಲೆ ಹಿಡಿಯುವುದೂ ಕಷ್ಟ. ಬಿಟ್ಟರೆ ಅದು ತುಂಬಲಾರದು ನಷ್ಟ ಅನುಗ್ರಹವೆಂದರೆ ಬಿಡದಂತೆ ಎಡಬಿಡದಂತೆ ಹಿಡಿಯುವಿಕೆ ಎಂದರ್ಥ. ಆತನು ಅನುಗ್ರಹಿಸಬೇಕೆಂದರೆ ಸಾವಿರ ರೀತಿ ಆರೀತಿಗಳೂ ಚಿತ್ರ ವಿಚಿತ್ರ.

ಎರ್ರಿತಾತನ ಪವಾಡಗಳಲ್ಲಿ ದೊರತ ಉಲ್ಲೇಖಗಳಿಂದ ಕೆಲವು ಕ್ಷೇತ್ರಕಾರ್ಯಗಳಿಂದ ಪಡೆದ ಮಾಹಿತಿಯಾಗಿದ್ದು, ಇದೇ ಮೊದಲು ಇದೇ ನಂತರ ಎಂದು ಹೇಳುವುದು ಸಮಂಜಸವಲ್ಲ. ಹಾಗೆಯೇ ಪವಾಡಗಳು ಸತ್ಯವೋ ಅಸತ್ಯವೋ ಎಂಬುದು ನಿರ್ಧರಿಸುವುದು ಸುಲಭವಲ್ಲ.

**೬.೩. ಪವಾಡಗಳ ತಾತ್ವಿಕ ಅನುಸಂಧಾನ**

ಪವಾಡಗಳು ಅಂತರಂಗದ ವಿವೇಚನೆಗೆ ನಮ್ಮನ್ನು ಒಡ್ಡುತ್ತವೆ ನಿಜ. ಆದರೂ ಪ್ರತಿ ಸಂದಿಗ್ಧ ಪರಿಸ್ಥಿತಿಯಲ್ಲಿ ಪವಾಡಗಳ ಸಾರ್ವತ್ರೀಕರಣ ಮಾನವನನ್ನು ಬಂಧಿಸಿಬಿಡುತ್ತದೆ. ಎಂತಹ ವೈಚಾರಿಕ ನೆಲೆಯಲ್ಲಿ ನಿಂತು ಬಾಳುತ್ತೇನೆ. ಆ ಮೂಲಕ ಸಮಾಜದ ದಿಕ್ಕನ್ನೆ ತಿರುಚು ಮುರುಚುಗೊಳಿಸುತ್ತೇನೆ. ಎನ್ನುವ ಮನುಷ್ಯ ಜೀವಿಯು ಒಂದಲ್ಲ ಒಂದು ಪವಾಡ ತಿರುವಿನೊಳಗೆ ಅರಿವಿದ್ದೋ ಅರಿವಿಲ್ಲದೆಯೋ ಒದ್ದಾಡುವುದು ಸಹಜ. ಪವಾಡಗಳು ಮೂಢನಂಬಿಕೆಯ ಮನೆಯೊಳಗೆ ತಳ್ಳಲು ಯತ್ನಿಸಿದಾಗ ಮಾತ್ರ ಸೂಕ್ಷ್ಮವಾಗಿ ಅದರ ಅಂತರವನ್ನು ಗ್ರಹಿಸುವುದು ಅವಶ್ಯಕ. ಇಲ್ಲಿ ಪವಾಡಗಳು ಸತ್ಯವೋ ಅಸತ್ಯವೋ ಎಂಬುದು ನನ್ನ ಅಧ್ಯಾಯನದ ಮುಖ್ಯ ಆಶಯವಲ್ಲ ಹಾಗೂ ಅವುಗಳ ವಿವೇಚನೆಯ ಗೋಜಿಗೆ ಹೋಗುವುದು ನನ್ನ ಉದ್ದೇಶವಲ್ಲ. ಅವುಗಳ ಅಂತರಾ ವಿವೇಚನೆಯು ನಾಸ್ತಿಕರಿಗೆ ಬಿಟ್ಟಿದ್ದು.

ಧಾರ್ಮಿಕ ಮಹಾಪುರುಷರೆಲ್ಲರೂ ಸಾಮಾನ್ಯರಂತಯೇ ಜನಿಸಿದರು ಸಮಾಜದಲ್ಲಿ ಎಲ್ಲಾರೊಂದಿಗೆ ಬದುಕಿ ಉನ್ನತ ಧ್ಯೇಯೋದ್ದೇಶಗಳಿಂದೊಡಗೂಡಿದ ಬಾಳನ್ನು ಬಾಳಿದರೆಂಬುದನ್ನು ಮರೆಯಕೂಡದು. ಜಗತ್ತಿನ ಪ್ರಮುಖ ಧರ್ಮಗಳೆಲ್ಲಾ ಇವರ ಚಿಂತನೆಯ ಫಲಗಳೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಇವರು ತಮ್ಮ ದಿವ್ಯಾ ಶಕ್ತಿ ಹಾಗೂ ಸಮಾಜ ಸಂಘಟನಾ ಶಕ್ತಿಯಿಂದ ಜನತೆಯನ್ನು ತಮ್ಮತ್ತ ಆಕರ್ಷಿಸಿಕೊಂಡು ಅವರಿಗೆ ತಮ್ಮ ಅನುಭಾವಗಳನ್ನು, ಧರ್ಮದ ತತ್ವಗಳನ್ನೂ, ಜೀವನ ಮೌಲ್ಯಗಳನ್ನು ಅರುಹಿದರು. ತಾವು ನಡೆದ ಮಾರ್ಗದಲ್ಲಿಯೇ ಜನತೆಯೂ ಮುನ್ನಡೆಯುವಂತೆ ಯತ್ನಿಸಿದರು.

ಮಹಾಪುರುಷರು ಕಾಲವಾದನಂತರ ಹಾಗೂ ಕೆಲವೊಬ್ಬರು ಜೀವಿತ ಅವಧಿಯಲ್ಲಿಯೇ ಅವರ ಜೀವಿತದ ಹಲವಾರು ಸಂಗತಿಗಳು, ಸಂದೇಶಗಳು ದೇಶವಿದೇಶಗಳಲ್ಲಿ ಹಬ್ಬಿ ಹರಡಿ, ಗ್ರಾಮಗಳಲ್ಲಿ

ವ್ಯಾಪಿಸಿ, ವ್ಯಕ್ತಿ ವ್ಯಕ್ತಿಗಳ ಬಾಯಲ್ಲಿ ನಲಿದು ಹಲವಾರು ರೂಪಾಂತರಗಳನ್ನು ಪಡೆದವು. ಆಯಾ ಧರ್ಮದ ಅನುಯಾಯಿಗಳು ಭಕ್ತರು ಅವರನ್ನು ಸ್ತುತಿಗೈದರು. "ಭಾರತೀಯ ಚಾರಿತ್ರಿಕ ಸಾಹಿತ್ಯದಲ್ಲಿ ಪವಾಡಕ್ಕೆ ಪ್ರಧಾನ ಸ್ಥಾನ, ಚರಿತ್ರೆಗೆ ಗೌಣ ಸ್ಥಾನ ಕನ್ನಡವೂ ಇದಕ್ಕೆ ಅಪವಾದವೇನಲ್ಲ. ಶರಣರು ನಡೆದುದು ನುಡಿದುದು ಸೂರ್ಯ ಪ್ರಕಾಶದಷ್ಟೇ ಸತ್ಯವಾದರೂ ಅವರ ಚರಿತ್ರೆ ಬೆಳಕು ಕಾಣದಿರುವುದು ನಮ್ಮ ಐತಿಹಾಸಿಕ ಪ್ರಜ್ಞೆಯ ಅಭಾವದ್ಯೋತಕ (ಹಿರೇಮಠ ಆರ್.ಸಿ. ಷಟಾಸ್ಥಲ ಚಕ್ರವರ್ತಿ ಚನ್ನಬಸವಣ್ಣನವರು ಪು. ೨೯) ಎಂಬ ಅವರ ಅಭಿಪ್ರಾಯ ಇಲ್ಲಿ ಗಮನಿಸತಕ್ಕದ್ದು.

ಹಳ್ಳಯ್ಯ ಬಸಮಗೆ ನೇಮಿಸಿದ ಪಾರುಕೆಯ
ಖುಲ್ಲತನದಿಂದ ಮಧುನರಸ ಮೆಟ್ಟಲು ದೇಹ
ವೆಲ್ಲ ತೊನ್ನಾಗಿ ಪುಳುತುಂ ಕೊಳೆತು ಬಸಿಯುತಿರಲೊಂದು ದಿನಹಳ್ಳಯನ
ಮೆಲ್ಲದಿಗಳುಂ ತೊಳೆದು ಜಲವು ಮಾಡುವುಗಳಿಟ್ಟಿರಲು
ಸಲ್ಲೀಲೆ ಯಿಂದಾನು ಮೊಗೆ ಕರಲು ಮೈದೊಳಯೆ
ಅಲ್ಲಿ ತನು ಶುದ್ಧವಾಗಲು ಮಧುವಯ್ಯನವರ ತನಯಂಗಿತ್ತು ಭಕ್ತನಾದಂ"

(ರಾಘವಾಂಕ ಚರಿತ್ರೆ ಸಂಧಿ ೧೧ ಪದ್ಯ ೧೩) ಇಲ್ಲಿ ಮಧುವಯ್ಯ ಹರಳಯ್ಯನವರ ವೃತ್ತಾಂತ ಶುದ್ಧಿತವಾಗಿದೆ. ಹರಳಯ್ಯನು ಮಿಂದ ಜಲದಿಂದ ಮಧುವರಸನ ಕುಷ್ಠರೋಗವು ಮಾಯವಾಯಿತು, ಎಂದು ವರ್ಣಿಸಿದೆ. ಆ ಶರಣನ ಮಹಿಮೆಯನ್ನು ಸಾರುವುದೇ ಆತನಿಗೆ ಪ್ರಧಾನವೆನಿಸಿದೆ. ಚೇಳಗುರಿಕೆ ಎರ್ರಿತಾತನ ಐತಿಹಾಸಿಕ ಹಿನ್ನೆಲೆ ಅದು ಗೌಣವಾಗಿದ್ದು, ಸಂಪೂರ್ಣವಾಗಿ ಅಲ್ಲ. ಆತನ ಮಹಿಮೆಯ ಲೀಲೆಗಳ ಚರಿತ್ರೆಯು ಸ್ವಲ್ಪಮಟ್ಟಿಗಾದರೂ ಉಲ್ಲೇಖಿತಗೊಂಡಿದೆ. ಮೇಲಿನ ಸಂಗತಿಗೆ ಹೋಲಿಸಿದಾಗ ಚರಿತ್ರೆಗಿಂತ ಪವಾಡಕ್ಕೆ ಆದ್ಯತೆ ನೀಡಿರುವುದು ಸ್ಪಷ್ಟವಾಗುತ್ತದೆ.

ಪವಾಡಗಳನ್ನು ಮಾಡಿದರೆನ್ನಲಾದ ಮಹಾನುಭಾವಿಗಳಲ್ಲಿ ಅವಧೂತರು ಮುಖ್ಯರು. "ಸೂಫಿಗಳು ತಮ್ಮ ಪವಾಡ ಶಕ್ತಿಗಳಿಂದ ಮುಖ್ಯವಾಗಿ ಎರಡು ಕಾರ್ಯ ಮಾಡುತ್ತಾರೆ. ಒಂದು ಪ್ರತಿಷ್ಠಿತ ಶಕ್ತಿಗಳನ್ನು (ಉದಾ. ರಾಜಕೀಯ ಪ್ರಭುತ್ವ ಅಥವಾ ಸನಾತನವಾದವನ್ನು) ಎದುರಿಸಿ ಸೋಲಿಸುವುದು. ಎರಡು ರೋಗ ಬರಗಾಲ ಸಾವು ಬಂಜೆತನ ಮುಂತಾದ ಜನತೆಯ ಕಷ್ಟಗಳಲ್ಲಿ ಬಂದು ಪರಿಹಾರ ನೀಡುವುದು". (ರಹಮತ್ ತರೀಕೆರೆ ಕರ್ನಾಟಕದ ಸೂಫಿಗಳು ಪು. ೧೫೧). ಸಹಜವಾಗಿ ಅವಧೂತರು ಅರೂಢರು, ಸೂಫಿಗಳು, ಸಾಧುಸಂತರು, ಅವತಾರ ಪುರುಷರು ಮಾಡಿದರನ್ನೆಲಾದ ಪವಾಡಗಳು ಇಂತಿವೆ.

೧. ಮಳೆ ತರಿಸುವುದು
೨. ಮಕ್ಕಳಿಲ್ಲದವರಿಗೆ ಸಂತಾನ ಭಾಗ್ಯ ನೀಡುವುದು
೩. ಬರಡು ಆಕಳು, ಎಮ್ಮೆಗಳಲ್ಲಿ ಹಾಲು ತರಿಸುವುದು
೪. ಬಡತನ ಹೋಗಲಾಡಿಸಿ, ನಂಬಿದವರನ್ನು ಉದ್ಧಾರಗೊಳಿಸುವುದು.

೫. ಊರಿನ ಸಾಂಕ್ರಾಮಿಕ ರೋಗಗಳನ್ನು ಪರಿಹರಿಸುವುದು

೬. ಅವಮಾನಗೊಳಿಸಿದವರಿಗೆ ಕೋಪಿಷ್ಠರಾಗಿ ಶಾಪಹಾಕುವುದು.

೬. ಸತ್ತ ದೇಹಕ್ಕೆ ಮರುಜೀವ ಕೊಟ್ಟಿರುವುದು.

(ಕರಿಯಪ್ಪ ಜೆ. ಬಳ್ಳಾರಿ ಜಿಲ್ಲೆಯ ಅವಧೂತರು ಪು. ೨೪೯).

ಈ ಪವಾಡಗಳು ಮಾನವಕುಲವನ್ನು ಅಲುಗಾಡಿಸಿ ನಿರ್ಲಿಪ್ತತೆಯಲ್ಲಿ ಬದುಕನ್ನು ಬಿಗಡಾಯಿಸಿ ಬಿಡುತ್ತವೆ. ಒಮ್ಮೆಮ್ಮೆ ಹಿಮ್ಮುಖ ಮುಮ್ಮುಖವಾಗಿ ಸಾಮಾಜಿಕ ಪರಿಚಲನೆಯನ್ನು ಪ್ರಶ್ನಿಸುವಂತೆ ಮಾಡಿ ಹಮ್ಮುಬಿಮ್ಮುಗಳ ಸೋಂಕಿನಿಂದ ಮೇಲೇಳಲು ಸಹಾಯಕವಾಗುತ್ತವೆ. ಆ ನಿಟ್ಟಿನಲ್ಲಿ ಕ್ರೌರ್ಯತ್ವದ ಗುಣವನ್ನು ಮಾಯಮಾಡಿ ನಿರ್ಮಲತ್ವವನ್ನು ಸಮಾಜದಲ್ಲಿ ಬಿತ್ತರಿಸಲು, ಎತ್ತರಿಸಲು ಪವಾಡಗಳು ಸಹಕಾರಿಯಾಗಿವೆ. ಧಾರ್ಮಿಕ ಮಹಾತ್ಮರು ಸ್ಪರ್ಶಿಸಿದರೆ ಸಾಕು. ಅಸಾಧ್ಯ ಅಥವಾ ಅಸಹಜವೆನ್ನಬಹುದಾದ ಘಟನೆಗಳು ಘಟಿಸುತ್ತವೆ ಎಂಬ ನಂಬಿಕೆಯಿಂದ ಹಲವಾರು ಪವಾಡಗಳು ಸೃಷ್ಟಿಯಾಗಿವೆ. ಈ ತತ್ವಗಳ ಸೃಷ್ಟಿಗೆ ಇಂಥ ವಚನಗಳು ಪುಷ್ಠಿ ನೀಡಿರಬಹುದು.

"ನೀ ನೊಲಿದಡೆ ಕೊರಡು ಕೊನರುವುದಯ್ಯಾ
ನೀ ನೋಲಿದಡೆ ಬರಡು ಹಯನಹುದಯ್ಯಾ
ನೀ ನೋಲಿದಡೆ ವಿಷವೆಲ್ಲಾ ಅಮೃತಹುದಯ್ಯಾ
ನೀ ನೋಲಿದಡೆ ಸಕಲ ಪಡಿ ಪದಾರ್ತ
ಇದಿರ ಲರ್ಪವು ಕೂಡಲ ಸಂಗಮದೇವಾ"

(ಕಲಬುರ್ಗಿ ಎಂ.ಎಂ. ಸಂ. ಬಸವಣ್ಣನವರ ವಚನ ಸಂಪುಟ. ಪು. ೧೯). ಬಸವಣ್ಣನವರ ವಚನ ತಿಳಿಸುವಂತೆ ಆ ಪರಮಾತ್ಮ ಒಲಿದಡೆ ಅಸಾಧ್ಯವಾದುದು ಯಾವುದು ಇಲ್ಲ.

ಸಧ್ಯದ ಪರಿಸ್ಥಿತಿಯೊಳಗೆ ಪವಾಡಗಳು ಹಲವೊಮ್ಮೆ ದಿಢೀರನೆ ಹುಟ್ಟುತ್ತವೆ. ಬೈಬಲ್‌ನ ಹೊಸ ಒಡಂಬಡಿಕೆ ಭಾಗದಲ್ಲಿ ಈ ಪ್ರಸಂಗವನ್ನು ಗಮನಿಸಬಹುದು. 'ಕಾನಾ' ಎಂಬ ಊರಿಗೆ ತನ್ನ ತಾಯಿಯಾದ ಮರಿಯಮ್ಮಳೊಂದಿಗೆ ಮದುವೆಗೆ ಹೋಗುತ್ತಾನೆ. ದ್ರಾಕ್ಷರಸವು ಮುಗಿದುಹೋಯಿತು. ದ್ರಾಕ್ಷರಸವೆಂಬುದು ಆ ಕಾಲದಲ್ಲಿ ಮದುವೆಯ ಸಂದರ್ಭದಲ್ಲಿ ನೀಡುತ್ತಿದ್ದ ಉಪಚಾರ. ತಾಯಿ ಮರಿಯಾಳು ಬಂದು ದ್ರಾಕ್ಷರಸ ಖಾಲಿಯಾಗಿದೆ ಏನಾದರೂ ಮಾಡು ಎಂದು ಹೇಳಿದಳು. ಯೇಸು ಅಲ್ಲಿದ್ದವರಿಗೆ ಬಾನೆಗಳಲ್ಲಿ (ಪೊಡುಗ) ನೀರನ್ನು ತುಂಬಿರಿ ಎಂದು ಹೇಳುತ್ತಾರೆ. ಕೂಡಲೇ ಆ ಬಾನೆಗಳಲ್ಲಿದ್ದ ನೀರು ದ್ರಾಕ್ಷರಸವಾಗಿ ಮಾರ್ಪಟ್ಟು ಮದುವೆ ಮನೆಯವರ ಗೌರವ ಉಳಿಯಲು ಕಾರಣವಾಯಿತು. (ಸತ್ಯವೇದ ಹೊಸ ಒಡಂಬಡಿಕೆ ಭಾಗ ಯೋಹಾನ ಸುವಾರ್ತೆ ಅಧ್ಯಾಯ ೨. ಪು. ೧೮೯) ಅದು ಯೇಸುವಿನ ಮೊದಲನೆಯ ಅದ್ಭುತ ಕಾರ್ಯ ಎಂದು ಬೈಬಲ್ ತಿಳಿಸುತ್ತದೆ.

ಮನುಷ್ಯರ ಬದುಕಿಗೆ ಹತ್ತಿರವಾದ ಇಂಥ ಪವಾಡಗಳನ್ನು ನಾವು ವೈಚಾರಿಕ ಹಿನ್ನಲೆಯಲ್ಲಿ ತಿರಸ್ಕರಿಸಿದರು. ಅವುಗಳು ಸಮಾಜದಲ್ಲಿ ಅವಮಾನದಿಂದ ತಪ್ಪಿಸಿಕೊಂಡು ತಮಗೆ ಸಹಾಯ ಮಾಡಿದ ದೈವಗಳನ್ನು ಆರಾಧ್ಯ ಪುರುಷರಿಗೆ ಕೊನೆಯವರೆಗೂ ಋಣಿಯಾಗಿರುವುದು ಕಂಡುಬರುತ್ತದೆ.

ಸತ್ತು ಮೂರು ದಿವಸ ಸಮಾಧಿಯಲ್ಲಿದ್ದ ಲಾಜರ್‌ನನ್ನು ಯೇಸುವು ಬದುಕಿಸಿದ್ದು (ಬೈಬಲ್ ಹೊಸ ಒಡಂಬಡಿಕೆ ಭಾಗ ಯೊಹಾನನ ಸುವಾರ್ತೆ ಅಧ್ಯಾಯನ ೧೧ ಪು. ೧೨೨ರಲ್ಲಿ ನೋಡಬಹುದು). ಐದು ರೊಟ್ಟಿ ಎರಡು ಮೀನು ಐದು ಸಾವಿರ ಜನಕ್ಕೆ ಊಟಮಾಡಿಸಿದ್ದು (ಅದೇ ಮತ್ತಾಯನ ಸುವಾರ್ತೆ ಅಧ್ಯಾಯ ೧೪ ಪು. ೧೮). ಕುರುಡರಿಗೆ ಕಣ್ಣುಕೊಟ್ಟಿದ್ದು, ಮೂರ್ಛಾರೋಗಿಯನ್ನು ಸ್ವಷ್ಟಮಾಡಿದ್ದು (ಅದೇ ಪುಟ ೨೨) ರಕ್ತ ಕುಸುಮ ರೋಗದಿಂದ ನರಳುತ್ತಿದ್ದ ಹೆಂಗಸನ್ನು ಗುಣಪಡಿಸಿದ್ದು. ಇವೆಲ್ಲಾ ಸಮಾಜದಲ್ಲಿ ಹೊಸ ನಿಲುವುಗಳನ್ನು ಕಾಣಲು ಸಾಧ್ಯವಾಗಿಸಿವೆ. ಎಂದು ಧರ್ಮಗ್ರಂಥಗಳು ಸಾರುತ್ತಿವೆ. ಪವಾಡಗಳೇ ನಡೆದಿಲ್ಲದಿದ್ದರೆ ಇಂದು ಬೃಹತ್ ಮಹತ್ತಾಗಿ ಸೃಷ್ಟಿಯಾಗಿಸುವ ಮಹಾಕಾವ್ಯಗಳೇ ಹುಟ್ಟುತ್ತಿರಲಿಲ್ಲ. ಮಹಾಕಾವ್ಯಗಳಲ್ಲಿ ವರ್ಣಿತವಾಗಿರುವ ಪವಾಡ ಪ್ರಸಂಗಗಳೇ ಇದಕ್ಕೆ ಕಾರಣ. ಅವುಗಳನ್ನೆಲ್ಲಾ ಬರೆದವರು ಬುದ್ಧಜೀವಿಗಳು. ವೈಚಾರಿಕತೆ ಕುರಿತು ಮಾತಾಡುವವರೆ ಎಂಬುದು ಮುಖ್ಯ ಸಂಗತಿ.

ಪ್ರವಾಹದಿಂದ ಬದುಕುಳಿಯುವುದು. ನದೀ ತೀರದ ಸಂತರೆಲ್ಲ ಕಂಬಳಿಹಾಸಿ ನದಿಯನ್ನು ದಾಟುವ ಪವಾಡ ಮಾಡುತ್ತಾರೆ. ಡೋಂಗ್ರಿ ಸಾಬನು ಕೃಷ್ಣೆಯನ್ನು ಹೀಗೆ ದಾಟುತ್ತಾನೆ. ಮೋನಪ್ಪ ಅಬ್ಬರಿಸುವ ಕೃಷ್ಣಯನ್ನು ನಿಶ್ಶಬ್ಧಳಾಗಿಸುತ್ತಾನೆ. ಕಡಲಬದಿ ಇರುವ ಸಂತರು ನೀರಲ್ಲಿ ಮುಳುಗದಂತೆ ಜನರನ್ನು ಉಳಿಸುವರು. ಮುಳುಗದ ದೋಣಿಯನ್ನು ಇಟ್ಟುಕೊಂಡಿದ್ದ ಚಿತಾಕುಲದ (ಕಾರವಾರ) ಶಮ್ಸುದ್ದೀನನು, ಸಹಜವಾಗಿ ಬೆಸ್ತಾರ ದೈವವಾಗಿದ್ದಾನೆ (ರಹಮತ್ ತರೀಕೆರೆ ಕರ್ನಾಟಕದ ಸೂಫಿಗಳು ಪು. ೧೫೨). ಪವಾಡಗಳ ತಾತ್ವಿಕ ನೆಲೆಯಲ್ಲಿ ಧಾರ್ಮಿಕ ಔನತ್ಯ ಪಡೆದ ಬಹುತೇಕರು ಸಮಾಜದೊಳಗೆ ಎದುರಾದ ಸಮಸ್ಯೆಗಳಿಂದ ಹೆದರದೆ ತಮ್ಮದೆ ಆದ ಲೀಲೆಗಳಿಂದ ಪಾಠಕಲಿಸುತ್ತಾರೆ. ಬಸವಣ್ಣನು ತನ್ನ ಪವಾಡ ಶಕ್ತಿ ಅರಮನೆಯನ್ನು ಕಿಚ್ಚೆದ್ದು ಉರಿಯುವಂತೆ ಮಾಡಿದಾಗ ಇಡೀ ಅರಮನೆಯ ಭಂಡಾರ ನಾಶವಾಗಿ ಹೋಗುತ್ತದೆ. ಆಗ ಭಂಡಾರದ ಲೆಕ್ಕವ ಕೊಡುವುದು "ಲೆಕ್ಕವ ಕೊಡುವುದೇಕೆ ಮುಕ್ಕಾಲು ಮೂರು ಜಾವ" ಎಂದು ಹೇಳಿದರೆ ಕೊಂಡಿಯರು ಅಪಹಾಸ್ಯಗೈದಿದ್ದನ್ನು ನೊಂದು ಬಸವಣ್ಣ ಲೆಕ್ಕ ಕೊಡಲು ಕರಣಿಕರನ್ನು ಕರೆಸುತ್ತಾನೆ.

"ಪಟ್ಟು ಪಬ್ಬಿವಳಿ ಕಟ್ಟು ಬಣ್ಣದ ನಾಣ್ಯ
ಪೆಟ್ಟಿ ಪೆಟ್ಟಿಗೀಲಿ ತೆರಸಿರ ಬಸವಣ್ಣ
ಮುಟ್ಟಿ ಲೆಕ್ಕಗಳ ಕೊಡುತಾನೆ"

ಹೀಗೆ ಲೆಕ್ಕ ಕೊಡುವಾಗ 'ಬರೆವ ಕರಣಿಕರ ಹರಣ ನಡುಗಿದವು' ಬಸವಣ್ಣನು ಪರಿಸ್ಥಿತಿಯನ್ನು ಗಮನಿಸಿ ಮೂರು ಮಧ್ಯಾಹ್ನದಲ್ಲಿ ಸೂರ್ಯನನ್ನು ನಿಲ್ಲಿಸುತ್ತಾನೆ. ನಿಸರ್ಗದಲ್ಲಿ ಉಂಟಾದ ತಲ್ಲಣಗಳಿಂದ ಭಯಭೀತವಾದ ಪರಿಸ್ಥಿತಿಗೆ ಲೆಕ್ಕವು ಮುಗಿದು ಬಸವಣ್ಣ ತನ್ನ ಆಣೆಯನ್ನು ಹಿಂದಕ್ಕೆ ಪಡೆಯುತ್ತಾನೆ.

ಶ್ರದ್ಧೆ ಹಾಗೂ ಮೂಢನಂಬಿಕೆ ಇವುಗಳಲ್ಲಿರುವ ಸೂಕ್ಷ್ಮ ಅಂಶವನ್ನು ಗ್ರಹಿಸುವುದು ಅವಶ್ಯಕ. ನಂಬಿಕೆ ದೃಢವಾಗಿದ್ದು ಸಂದಿದೆ. ಸಂದೇಹವಿಲ್ಲದಂತಹ ಶ್ರದ್ಧೆಯನ್ನು ಕುದುರಿಸುವಂತಿದ್ದರೆ ಸಾಧಕನ

ಆಚಾರ ವಿಚಾರಗಳಲ್ಲಿ ಸಂಕುಚಿತತೆ, ದೌರ್ಬಲ್ಯ ತಲೆಯಿಕ್ಕದಂತೆ ಶುದ್ಧವಾಗಿ ಇರುವಂತಿದ್ದರೆ ವ್ಯರ್ಥ ತಾರ್ಕಿಕತೆಯಿಂದಾಗುವ ಪ್ರಯೋಜನವಾದರೂ ಏನು? ಎಲ್ಲ ಸಾಧನೆಗಳ ಗುರಿಯೂ ಅಂತರಂಗದ ಶುದ್ಧಿತಾನೆ? ಇದಿಲ್ಲದೆ ಪವಾಡಗಳನ್ನು ನಮ್ಮ ಜನತೆ ಮೂಲತಃ ಸಾಂಕೇತಿಕ ಸ್ವರೂಪದಲ್ಲಿ ಗ್ರಹಿಸಿದ್ದರೆ ಹೊರತು ಶಬ್ದಶಃ ಅಲ್ಲ. ಪ್ರತಿಯೊಂದು ಪವಾಡಗಳ ಹಿಂದೆ ಇರುವ ಮಹಿಮಾನ್ವಿತ ಆಚಾರ ವಿಚಾರಗಳನ್ನೇ ಅವರು ಮೆಚ್ಚಿಕೊಂಡಿದ್ದಂತೆ ತೋರುತ್ತದೆ. ಹೀಗಾಗಿ ಪವಾಡಗಳು ನಮ್ಮ ಜನತೆಯಲ್ಲಿ ಧಾರ್ಮಿಕ ಮಹಾಪುರುಷರ ಹಾಗೂ ತತ್ವಗಳ ಬಗೆಗೆ ಶ್ರದ್ಧೆಯನ್ನು ಮೂಡಿಸಿ ಅವರನ್ನು ಸಾಧನೆಗೆ ಅಣಿಗೊಳಿಸಬೇಕೇ ವಿನಾ ಅವರಲ್ಲಿ ಅಂಥ ಶ್ರದ್ಧೆಯನ್ನಾಗಲೀ ಮೂಢನಂಬಿಕೆಯನ್ನಾಗಲೀ ಹುಟ್ಟಿಸತಕ್ಕದ್ದಲ್ಲ.

> "ಯದಾ ಯದಾ ಹಿ ಧರ್ಮಸ್ಯೆ ಗ್ಲಾನಿ ಭವತಿ ಭರತ
> ಅಭ್ಯುತ್ಥಾನಮ ಧರ್ಮಸ್ಯ ತದಾತ್ಮಾನಂ ಸೃಜಾತ್ಯುಹಂ
> ಪರಿತ್ರಾಣಾಯ ಸಾಧೂನಾಂ ವಿನಾಶಾಯ ದುಷ್ಕೃತಾಮಾ
> ಧರ್ಮ ಸಂಸ್ಥಾನಾರ್ಥಾಯ ಸಂಭವಾಮಿ ಯುಗೇ ಯುಗೇ"

(ಚಿದಂಬರಯ್ಯ ಹೊಸಕೆರೆ ಗೀತಾರ್ಥ ಚಂದ್ರಿಕೆ ಅಧ್ಯಾಯ ೪ ಶ್ಲೋಕ ೭-೮) ಧರ್ಮಕ್ಕೆ ಗ್ಲಾನಿಬಂದ ಅಧಮರು ಹೆಚ್ಚಾದಾಗ, ಸಜ್ಜನರ, ರಕ್ಷಣೆ, ದುರ್ಜನರ ನಾಶನ, ಧರ್ಮದ ಪುನರುಸ್ಥಾನಗಳಿಗಾಗಿ ಯುಗ ಯುಗಗಳಿಲ್ಲಿಯೂ ನಾನು ಅವತರಿಸುತ್ತೇನೆ ಎಂಬುದು ಗೀತವಚನದ ಸಾರ. ಅವತಾರ ಎಂಬುದು ಸಾದೃಶ್ಯ ಅಸಾದೃಶ್ಯಗಳ ನಡುವಿನ ಬಂಧವಾಗಿದೆ.

ಇಲ್ಲಿ ಪವಾಡಗಳನ್ನು ಹೇಗೆ ಪರಿಗಣಿಸುವುದು? ಯಾವುದೋ ವೈಚಾರಿಕ ನೆಲೆಯಿಂದ ಪವಾಡಗಳನ್ನು ನೋಡಬೇಕೇ? ಪವಾಡವೆಂದರೆ ವಾಸ್ತವವನ್ನು ಮೀರುವ ಹಂಬಲ. ಎಲ್ಲ ಮನಸ್ಸುಗಳಲ್ಲೂ ಈ ಹಂಬಲವಿದೆ. ಕಲ್ಪನೆಯೇ ಪವಾಡವಲ್ಲವೇ? ಪವಾಡಗಳು ಸರಿಯೋ ತಪ್ಪೇ ಎಂದು ವಿಚಾರ ಮಾಡುವುದೇ? ಪವಾಡಗಳನ್ನು ಅಲ್ಲಗಳೆವುದೆಂದರೆ ಡಾಂಟೆ, ಹೋಮರ್, ವರ್ಜಿಲ್ ಮಿಲ್ಟನ್, ಎಲ್ಲರನ್ನು ಅಲ್ಲಗಳೆದಂತೆ. ಮೇನಕೆ ಶಕುಂತಲೆಯನ್ನೆತ್ತಿಕೊಂಡು ಹೋದರೆ ಕಾಳಿದಾಸನ ನಾಟಕದ ಸ್ವರೂಪವೇನು? ನಾವೇಕೆ ಪವಾಡಗಳ ಬಗೆಗೆ ಆತಂಕಿತರಾಗಿದ್ದೇವೆ? ಟಿ.ವಿ. ಸ್ವಿಚ್ ಹಾಕಿದೊಡನೆ ಕುಣಿಸುವುದು ಪವಾಡವೇ (ವೆಂಕಟೇಶ ಇಂದ್ವಾಡಿ ಮಂಟೇಸ್ವಾಮಿ ಕಾವ್ಯ ಪು. ೨೩೧).

ಮೇಲಿನ ಪವಾಡಗಳ ನೆಲೆಗಳು ಮೂಲತಃ ಆಧುನಿಕೋತ್ತರ ಸಮಾಜದ ನಿಲುವಿಗೆ ತರ್ಕಬದ್ಧವಾಗಿದ್ದರೂ ಅವುಗಳನ್ನು ಒಪ್ಪಲೇಬೇಕಾದ ಪರಿಣಾಮಗಳು ಜನತೆಯ ಮೇಲೆ ಆಗಿರುವುದನ್ನು ನಾವು ಕಾಣುತ್ತೇವೆ. ಈ ಉದ್ದೇಶದಿಂದಲೇ ಅವತರಿಸಿದ ಧಾರ್ಮಿಕ ಮಹಾಪುರುಷರನ್ನು ಜಗತ್ತಿನ ಎಲ್ಲಾ ಪ್ರಮುಖ ಧರ್ಮಗಳಲ್ಲೂ ಕಾಣಬಹುದು. ಯೇಸುವು ದೇವರ ಪುತ್ರ, ದೇವರ ಅಂಶವೆಂದು ಬಗೆದರೆ ಬುದ್ಧನನ್ನು ವಿಷ್ಣುವಿನ ಅವತಾರವೆನ್ನಲಾಗಿದೆ. ಇಲ್ಲಿ ಮುಖ್ಯವಾಗಿರುವುದು ಅವರ ಅವತಾರಕ್ಕಿಂತ ಜನಸಾಮಾನ್ಯರ ಬಾಧೆಗಳನ್ನು ಬಗೆಹರಿಸಿ. ಭಕ್ತರ ಬಯಕೆಗಳನ್ನು ಈಡೇರಿಸುವುದು ಪವಾಡಗಳೇ ಕೇಂದ್ರತ್ವ

ಪಡೆಯುತ್ತೇವೆ. ಎಲ್ಲ ಅಂಶಗಳೂ ಇಲ್ಲಿ ಒಂದರೊಳಗೊಂದು ವಿಚಿತ್ರವೆಂಬಂತೆ ತಳುಕು ಹಾಕಿಕೊಂಡಿದೆ. ಶುದ್ಧ ಶಾಸ್ತ್ರೀಯ ಮಾರ್ಗದಲ್ಲಿ ಹೊರಟರೆ ನಮಗೇನೂ ದಕ್ಕದು. ಹಾಗಾಗಿ ಪವಾಡಗಳನ್ನು ಜನತೆಯ ಬದುಕಿನ ಭಾಗಗಳಾಗಿ ಬೆಂಬಿಡದೆ ಹಾಸುಹೊಕ್ಕಾಗಿವೆ.

**ಅಡಿ ಟಿಪ್ಪಣಿಗಳು**

೧. ಎನ್‌ಸೈಕ್ಲೋಪಿಡಿಯಾ ಬ್ರಿನಿಕಾ ವ್ಯಾಲೂಮ್ ೧೬

೨. ಕನ್ನಡ ಸಾಹಿತ್ಯ ಪರಿಷತ್ತು ನಿಘಂಟು ಪು. ೭೬೨.

೩. ವೆಂಕಟೇಶ್ ಇಂದ್ವಾಡಿ ಮಂಟೇಸ್ವಾಮಿ ಸಾಂಸ್ಕೃತಿಕ ಮುಖಾಮುಖಿ ಪು. ೧೬೨.

೪. ರಹಮತ್ ತರೀಕೆರೆ ಕರ್ನಾಟಕದ ನಾಥಪಂಥ ಪು. ೧೬೪.

೫. ರಹಮತ್ ತರೀಕೆರೆ ಸಂ ಧರ್ಮವಿಶ್ವಕೋಶ ಪು. ೨೦೩.

೬. ಬೈಬಲ್ ಹೊಸ ಒಡಂಬಡಿಕೆ ಮತ್ತಾಯನು ಬರೆದ ಸುವಾರ್ತೆ ಪು.

೭. ಚನ್ನಬಸವೇಶ್ವರ ಸಿ.ವ. ಶ್ರೀ ಎಠ್ರಿಸ್ವಾಮಿಗಳ ಲೀಲಾ ವಿಲಾಸ ಪು. ೧೫.

೮. ನಾಗೇಶಶಾಸ್ತ್ರಿ ವೈ. ಲೀಲಾಮೃತ ಸಂಧಿ ೭, ಪು. ೭೭.

೯. ಅದೇ ಸಂಧಿ ೭ ಪು. ೮೦

೧೦. ಅದೇ ಸಂಧಿ ೭ ಪು. ೮೧

೧೧. ಅದೇ ಸಂಧಿ ೭ ಪು. ೮೬.

೧೨. ಅದೇ ಸಂಧಿ ೭ ಪು. ೯೩.

೧೩. ಚಂದ್ರಯ್ಯನವರ ಸಂಗ್ರಹ. ಪು.

೧೪. ವ್ಹಿ.ಜಿ. ಪೂಜಾರ ವೀರಶೈವ ಸಾಹಿತ್ಯದಲ್ಲಿ ಪವಾಡ ಕಥೆಗಳು ಪು. ೫೫.

೧೫. ಚನ್ನಬಸವೇಶ್ವರ ಸಿ.ವ. ಶ್ರೀ ಎಠ್ರಿಸ್ವಾಮಿಗಳ ಲೀಲಾವಿಲಾಸ ಪು. ೨೬.

೧೬. ನಾಗೇಶಶಾಸ್ತ್ರಿ ವೈ. ಲೀಲಾಮೃತ ಸಂಧಿ ೧೦ ಪು. ೧೧೩.

೧೭. ಅದೇ ಸಂಧಿ ೧೦ ಪು. ೧೧೬.

೧೮. ದೊಡ್ಡನಗೌಡ ಜೋಳದರಾಶಿ ಶಿವಮಯ ಜೀವನ ಚರಿತ್ರೆ ಪು. ೧೮.

೧೯. ಮಂಜುನಾಥ ಬೇವಿನಕಟ್ಟಿ ಜಾನಪದ ಉತ್ಪನನ ಪು. ೧೦೬.

೨೦. ನಾಗೇಶ ಶಾಸ್ತ್ರಿ ವೈ. ಲೀಲಾಮೃತ ಸಂದಿ ೧೩ ಪು. ೧೫೫.

೨೧. ಬೈಬಲ್ ಹಳೆ ಒಡಂಬಡಿಕೆ ಭಾಗ, ಪು.

೨೨. ರಹಮತ್ ತರೀಕೆರೆ ಕರ್ನಾಟಕದ ನಾಥಪಂಥ ಪು. ೨೬೩.

೨೩. ನಾಗೇಶ ಶಾಸ್ತ್ರಿ ವೈ. ಲೀಲಾಮೃತ ಸಂಧಿ ೧೦ ಪು. ೧೧೮.

೨೪. ರಹಮತ್ ತರೀಕರೆ ಕರ್ನಾಟಕದ ಸೂಫಿಗಳು ಪು. ೧೫೫, ಪರಿಷ್ಕೃತ ಮುದ್ರಣ.

೨೫. ಚನ್ನಬಸವೇಶ್ವರ ಸಿ.ವ. ಶ್ರೀ ಚೇಳಗುರಿಕೆ ಎರ್ರಿಸ್ವಾಮಿಗಳ ಲೀಲಾವಿಲಾಸ ಪುಟ. ೯೮ ೯೮.

೨೬. ಅದೇ ಪು. ೭೪

೨೭. ಅದೇ ಪು. ೭೯.

೨೮. ಹಿರೇಮಠ ಆರ್.ಸಿ. : ಷಟ್‌ಸ್ಥಲ ಚಕ್ರವರ್ತಿ ಚನ್ನಬಸವಣ್ಣನವರು ಪು. ೨೯.

೨೯. ರಾಘವಾಂಕ ಚರಿತ್ರೆ, ಸಂಧಿ ೧೦ ಪದ್ಯ ೧೩.

೩೦. ರಹಮತ್ ತರೀಕೆರೆ : ಕರ್ನಾಟಕದ ಸೂಫಿಗಳು ಪು. ೧೫೧.

೩೧. ಕರಿಯಪ್ಪ ಜೆ. : ಬಳ್ಳಾರಿ ಜಿಲ್ಲೆಯ ಅವಧೂತರು ಅಪ್ರಕಟಿತ ಮಹಾಪ್ರಬಂಧ ಪು. ೨೪೯.

೩೨. ಕಲಬುರ್ಗಿ ಎಂ.ಎಂ. ಸಂ. ಬಸವಣ್ಣನವರ ವಚನ ಸಂಪುಟ ಪು. ೧೯.

೩೩. ಸತ್ಯವೇದ : ಹೊಸ ಒಡಂಬಡಿಕೆ ಭಾಗ, ಯೋಹಾನನ ಸುವಾರ್ತೆ ಅಧ್ಯಾಯ ೨ ಪು. ೧೦೯.

೩೪. ಅದೇ ಅಧ್ಯಾಯ ೧೧ ಪು. ೧೨೨.

೩೫. ಸತ್ಯವೇದ ಮತ್ತಾಯನ ಸುವಾರ್ತೆ ಅಧ್ಯಾಯ ೧೪. ಪು. ೧೮.

೩೬. ಅದೇ ಪು. ೨೨.

೩೭. ರಹಮತ್ ತರೀಕೆರೆ : ಕರ್ನಾಟಕದ ಸೂಫಿಗಳು ಪು. ೧೫೨.

೩೮. ಚಿದಂಬರಯ್ಯ ಹೊಸಕೆರೆ ಗೀತಾರ್ಥ ಚಂದ್ರಿಕೆ ಅಧ್ಯಾಯ ೪ ಶ್ಲೋಕ ೭-೮.

೩೯. ವೆಂಕಟೇಶ ಇಂದ್ವಾಡಿ : ಮಂಟೇಸ್ವಾಮಿ ಕಾವ್ಯ ಸಾಂಸ್ಕೃತಿಕ ಮುಖಾಮುಖಿ ಪು. ೨೩೧

# ಅಧ್ಯಾಯ - ೭

## ಚೇಳಗುರಿಕೆ ಎರ್ರಿತಾತ: ಸಾಮಾಜಿಕ ಕೊಡುಗೆಗಳು

೭.೧. ದಾಸೋಹ ಕಾರ್ಯಕ್ರಮಗಳು

೭.೨. ಶಿಕ್ಷಣ ಮತ್ತು ಆರೋಗ್ಯ

೭.೩. ಸೇವಾ ಸೌಲಭ್ಯಗಳು

೭.೪. ವಿಶ್ರಾಂತಿ ಗೃಹಗಳು, ಕಲ್ಯಾಣ ಮಂಟಪ

## ಚೀಳಗುರಿಕೆ ಎರ್ರಿತಾತ: ಸಾಮಾಜಿಕ ಕೊಡುಗೆಗಳು

ಸಾಮಾಜಿಕ ಬದ್ಧತೆಯಿರುವ ವ್ಯಕ್ತಿಯಾಗಲಿ, ಯಾವುದೇ ಸಂಘ ಸಂಸ್ಥೆಗಳಾಗಲಿ ಉದಾತ್ತವಾದ ಹಾಗೂ ಉನ್ನತವಾದ ಬದುಕಿನ ಅರ್ಥವನ್ನು ಕಂಡುಕೊಂಡಿರುವುದು ತಿಳಿದ ವಿಷಯ. ಮನುಷ್ಯನ ಅಂತರಂಗ ಬಹಿರಂಗ ಪರಿಕಲ್ಪನೆಗಳು ಸಾಕಾರಗೊಳ್ಳಲು ಆ ಮೂಲಕ, ವಾಸ್ತವದ ಪರಿಧಿಯೊಳಗೆ ನಿರ್ಭಿತಿಯನ್ನುಂಟು ಮಾಡುವ ದೈವತ್ವದ ನೆಲೆಯೊಳಗೆ ಕೇಂದ್ರೀಕೃತಗೊಂಡಿರುತ್ತದೆ. ನಮ್ಮ ನೆಲದಲ್ಲಿ, ಭಕ್ತಿಯ ಬೆಳೆಯಲು ಹಸನು ಮಾಡಿದ ಹೊಲವಿದ್ದಂತೆ. ಏಕೆಂದರೆ ಧರ್ಮ, ದೇವರು, ದೈವ, ಮಂದಿರ, ಮಠಗಳ ಮೇಲೆ ನಮ್ಮ ಪೂರ್ವಜರಿಂದ ಅಪಾರವಾದ ಮತ್ತು ಗಾಢವಾದ ಭಯ, ಭಕ್ತಿ, ನಂಬಿಕೆ, ನಿಷ್ಠೆ ಕಲಿತು ಸಮಾಜಮುಖಿಯಾದ ಚಿಂತನೆಯನ್ನು ಪರಿಪಾಲಿಸಿಕೊಂಡು ಬಂದಿರುವುದು ಹೆಮ್ಮೆಯ ಸಂಗತಿ.

ಕರ್ನಾಟಕದ ನೆಲದಲ್ಲಿ ಮಠ ಮಾನ್ಯಗಳು ಯಾವುದೇ ಜಾತಿಬೇಧವಿಲ್ಲದೆ ಅನ್ನದಾಸೋಹದ ಜೊತೆಗೆ ಅಕ್ಷರ ದಾಸೋಹಗಳೆರಡನ್ನು ಒಟ್ಟೊಟ್ಟಿಗೆ ನೀಡುವ ಸಂಸ್ಥೆಗಳಾಗಿವೆ. ಧಾರ್ಮಿಕತೆಯ ಬಗೆಗಿನ ಮೌಲ್ಯಗಳ ಜೊತೆ ಜೊತೆಗೆ ಮನುಷ್ಯನನ್ನು ಬುದ್ಧಿಜೀವಿಯಾಗಿ ಮತ್ತು ಸಂಘಜೀವಿಯಾಗಿ ಸಹಕರಿಸಲು ನೆರವಾಗುತ್ತವೆ. ಭಕ್ತ ಸಮೂಹದಿಂದ ಬಂದ ಕಾಣಿಕೆಗಳಾಗಲಿ, ಮುಡುಪುಗಳಾಗಲಿ, ಧವಸ-ಧಾನ್ಯಗಳಾಗಲಿ ಸ್ವಾರ್ಥದ ಮಡಿಲಿಗೆ ವಿನಿಯೋಗಿಸದೆ ಸಾಮಾಜದ ಆರೋಗ್ಯಕರ ಬದಲಾವಣೆಗೆ ನಾಂದಿಯಾಗಿರುವುದು ಸಂತೋಷದ ಸಂಗತಿ. ಹಾಗೆಂದ ಮಾತ್ರಕ್ಕೆ ಮಠಗಳೆಲ್ಲ ಕೇವಲ ಸಮಾಜೋದ್ಧಾರವೊಂದೇ ಅವುಗಳ ಕರ್ತವ್ಯವೆಂದು ಹೇಳುವುದು ಸಹ ಸಮಂಜಸವಲ್ಲ. ನಾಡಿನಲ್ಲಿ ಅನೇಕ ದೊಡ್ಡ ದೊಡ್ಡ ಮಠಗಳು ದಾಸೋಹ, ಶಿಕ್ಷಣ, ಆರೋಗ್ಯ ಮುಂತಾದ ಸಾಮಾಜಿಕವಾದ ಚಟುವಟಿಕೆಗಳು ನಡೆಸುತ್ತಿವೆ. ಅದೇ ರೀತಿಯಲ್ಲಿ ಇನ್ನೂ ಬೆಳೆಯುತ್ತಿರುವ ಚಿಕ್ಕ ಪುಟ್ಟ ಮಠಗಳಲ್ಲಿಯು ಸ್ವಯಂ ಪ್ರೇರಿತವಾಗಿ ಆಯಾ ಗ್ರಾಮದ ಸುತ್ತಮುತ್ತಲಿನ ಪ್ರದೇಶಗಳ ವ್ಯಾಪ್ತಿಯೊಳಗೆ ಶಿಕ್ಷಣ, ಆರೋಗ್ಯ, ವಸತಿಗಳ ಜೊತೆಗೆ ಶಿಕ್ಷಣವನ್ನು ನೀಡುತ್ತಾ ಬಂದಿವೆ.

ಜಿಲ್ಲೆಯಲ್ಲಿ ಅನೇಕ ಮಠಗಳು ತಲೆ ಎತ್ತಿ ನಿಂತಿವೆ. ಧಾರ್ಮಿಕ ಆಂದೋಲನ ಎಂಬ ಮಂತ್ರದೊಂದಿಗೆ ಪ್ರಾರಂಭಗೊಂಡು ಇಂದು ಬದಲಾಗುತ್ತಿರುವ ಪರಿಸ್ಥಿತಿಗೆ ತಕ್ಕಂತೆ ಸಮಾಜದ ಧ್ಯೇಯೋದ್ದೇಶಗಳನ್ನು ದಾಸೋಹ, ವಸತಿ, ಶಿಕ್ಷಣ, ಆರೋಗ್ಯಗಳ ಮೂಲಕ ಈಡೇರಿಸುತ್ತಾ ಬಂದಿರುವುದರಲ್ಲಿ ಬಳ್ಳಾರಿ ತಾಲೂಕಿನ ಎರ್ರಿತಾತನ ಮಠವು ಒಂದಾಗಿದೆ.

ಬರಗಾಲದ ಈ ಗ್ರಾಮಕ್ಕೆ ಎಲ್ಲಿಂದಲೋ ಬಂದು ಇಲ್ಲಿಯೇ ನೆಲೆಸಿದ ಎರ್ರಿತಾತ ಎಂಬ ಅವಧೂತನ ಪ್ರಭಾವ ಹಾಗೂ ದೈವತ್ವದಲ್ಲಿ ಮಠವನ್ನು ನಡೆಸಿಕೊಂಡು ಬಂದಿರುವುದು ತಿಳಿದುಬಂದಿದೆ. ಬಡತನವನ್ನು ಉಂಡು ಜೀವನ ಸಾಗಿಸುತ್ತಿರುವ ಜನರು ಸ್ವಲ್ಪ ಮಟ್ಟಿಗಾದರೂ ಸುಧಾರಿಸಿಕೊಂಡ ರೀತಿಯನ್ನು ನಮ್ಮೂರಿಗೆ ಬೆಳಕು ಬಂದದ್ದು ಹಾಗೂ ಸುತ್ತಮುತ್ತಲಿನ ಗ್ರಾಮಗಳಿಂದ ಗುರುತಿಸಿಕೊಂಡಿದ್ದು ಎರ್ರಿತಾತನಿಂದ ಮತ್ತು ಆತನ ಹೆಸರಿನ ಮೇಲೆ ನಿಂತಿರುವ ಮಠದಿಂದ ಎಂಬುದು ಕ್ಷೇತ್ರಕಾರ್ಯಕ್ಕೆ ಹೋದಾಗ ವಕ್ತೃವಿನಿಂದ ಪಡೆದ ಮಾಹಿತಿಯಿಂದ ತಿಳಿದು ಬಂದಿದೆ. ಯಾವುದೋ ಸಮುದಾಯ ಅಥವಾ ಪಂಗಡಕ್ಕಾಗಲೀ ಸೀಮಿತವಾಗದೆ. ಹಲವು ಸಮುದಾಯಗಳ ವಿದ್ಯಾರ್ಥಿಗಳಿಗೆ ಶಿಕ್ಷಣ, ವಸತಿ, ಆರೋಗ್ಯ ಸೌಲಭ್ಯಗಳ ಜೊತೆಗೆ ಸುತ್ತ ಮುತ್ತಲಿನ ಗ್ರಾಮಗಳಿಗೆ ವ್ಯವಹಾರ ದೃಷ್ಠಿಯಿಂದ ನೋಡಿದರೆ ಮಠದ ಹಣವೇ ಇಲ್ಲಿನ ಗ್ರಾಮೀಣಾಭಿವೃದ್ಧಿ ಬ್ಯಾಂಕ್‌ನಲ್ಲಿ ಕೇಂದ್ರಸ್ಥಾನ ಪಡೆದಿರುವುದು ಕಂಡುಬರುತ್ತದೆ. ಮಠವು ನಡೆಸುತ್ತಿರುವ ಹಲವಾರು ಸಮಾಜಮುಖಿ ಚಟುವಟಿಕೆಗಳನ್ನು ಗಮನಿಸಬಹುದು.

### ೭.೧. ದಾಸೋಹ ಕಾರ್ಯಕ್ರಮಗಳು

ಪ್ರತಿದಿನವು ದಾಸೋಹದ ವ್ಯವಸ್ಥೆಯಿರುವುದು ನಿಜಕ್ಕೂ ಆಶ್ಚರ್ಯಕರ. ಚಿಕ್ಕದಾದ ಮಠದಲ್ಲಿ ಭಕ್ತರು ನೀಡುವ ಧವಸ ಧಾನ್ಯಗಳ, ಕಾಣಿಕೆಗಳಿಂದ ಇದು ನಡೆಯುತ್ತದೆ. ಎರ್ರಿತಾತನ ಪಟ್ಟ ಶಿಷ್ಯನಾಗಿದ್ದ ಆಶುಕವಿ ತಿಕ್ಕಯ್ಯನಿಂದ ಸ್ಥಾಪಿತ ಮಠ ಪ್ರಾರಂಭದಿಂದಲೂ ಪ್ರಸಾದದ ರೂಪದಲ್ಲಿ ನಡೆಯುತ್ತಿದ್ದ ದಾಸೋಹ ಇಂದು ದಿನಂಪ್ರತಿ ಸು.೨೫೦ ರಿಂದ ೩೦೦ ಜನರು ಈ ದಾಸೋಹದ ಪ್ರಯೋಜನ ಪಡೆಯುತ್ತಾರೆ. ಜ್ಞಾನ ಎಲ್ಲದಕ್ಕಿಂತಲೂ ಶ್ರೇಷ್ಠವಾಗಿರಬಹುದು, ಅದೇ ಬದುಕಿನ ಪರಮಗುರಿಯೂ ಆಗಿರಬಹುದು. ಆದರೆ ಲೋಕಾನುಕಂಪೆ ಅದಕ್ಕಿಂತ ಕಡಿಮೆಯಾದದ್ದಲ್ಲ ಎಂದು ತೋರುತ್ತದೆ. ಪಕ್ಕದಲ್ಲಿ ಸಾವಿರಾರು ಜೀವಿಗಳು ದುಃಖದಲ್ಲಿರುವಾಗ ನಾನು ಮಾತ್ರ ಆತ್ಮಾನಂದದಲ್ಲಿ ಮಗ್ನನಾಗಿರುತ್ತೇನೆ ಎನ್ನುವುದು ಜಗತ್ತಿನ ಅತ್ಯುನ್ನತ ಆದರ್ಶ ಎಂಬುದನ್ನು ಒಪ್ಪುವುದು ಕಷ್ಟವಾಗುತ್ತದೆ. ಶ್ರೀರಾಮಕೃಷ್ಣ ಪರಮಹಂಸರು ಸೇವೆಯ ಆದರ್ಶವನ್ನು ಎತ್ತಿಹಿಡಿದು ತಮ್ಮ ಶಿಷ್ಯರು ಅದನ್ನು ಅನುಸರಿಸುವಂತೆ ಹೇಳಿದರು. ಒಮ್ಮೆ ಕಾಶಿಗೆಂದು ಹೊರಟವರು ದೇವಪುರದ ಬಳಿ ಹಸಿವಿನಿಂದ ಬೆನ್ನಿಗೆ ಹತ್ತಿದ ಹೊಟ್ಟೆಯ, ಜಡಗಟ್ಟಿದ ಕೂದಲಿನ, ಚಿಂದಿಬಟ್ಟೆಯ ಧರಿಸಿದ ಜನರನ್ನು ಕಂಡು ತಾವೂ ಅವರ ಮಧ್ಯ ಕುಳಿತುಬಿಟ್ಟರು.

ತಮ್ಮ ಶ್ರೀಮಂತ ಶಿಷ್ಯನಾದ ಮಧುರ ಬಾಬುವಿಗೆ ಹೇಳಿದರು. "ಇವರಿಗೆಲ್ಲ ಊಟ ಹಾಕಿಸು, ತಲೆಗೆ ಹಚ್ಚಿಕೊಳ್ಳಲು ಎಣ್ಣೆಕೊಡು, ಬಟ್ಟೆಕೊಂಡುಕೊಡು" ಅದಕ್ಕೆ ಆತ ಹೇಳಿದ. ಅಷ್ಟೆಲ್ಲ ಮಾಡಿದರೆ ಮುಂದೆ ತೀರ್ಥಯಾತ್ರೆ ಮುಂದುವರೆಸಲು ಸಾಧ್ಯವಿಲ್ಲವೆಂದು" ಪರಮಹಂಸರು ಹೇಳಿದರು. "ಇವರಿಗೆ ಸೇವೆ ಸಲ್ಲಿಸುವುದಕ್ಕಿಂತ ದೊಡ್ಡ ತೀರ್ಥಯಾತ್ರೆ ಯಾವುದಿದೆ? ಮರುಮಾತಿಲ್ಲದ ಮಧುರಬಾಬು ಆ ಬಡವರಿಗೆ ಅನ್ನ, ಎಣ್ಣೆ, ಬಟ್ಟೆ ಒದಗಿಸಿದ. ಈ ಹಿನ್ನೆಲೆಯಲ್ಲಿ "ಅನ್ನವನಿಕ್ಕಿ, ನನ್ನಿಯ ನುಡಿದು ಅರವಟಿಗೆಯನಿಕ್ಕಿ ಕೆರೆಯ ಕಟ್ಟಿಸಿದೊಡೆ ಮರಣದಿಂ ಮೇಲೆ ಸ್ವರ್ಗವುಂಟಲ್ಲದೆ" ಎಂಬ ಮಾತು ಸತ್ಯವೆನಿಸುತ್ತದೆ. ಇದಕ್ಕೆ

ಪೂರಕವೆಂಬಂತೆ ಹೊಟ್ಟೆಹಸಿದಾಗ ಅನ್ನ ನೀಡಲಿಲ್ಲ, ಬಟ್ಟೆಯನ್ನು ಹೊದಿಸಲಿಲ್ಲ ಬಾಯಾರಿಕೆಯಾದಾಗ ನೀರು ಕೊಡಲಿಲ್ಲ ಎಂದು ಶಿಷ್ಯರನ್ನು ಕೇಳಿದಾಗ ಅವರು ಎಲ್ಲಿ ನೀವು ಹಸಿದಿದ್ದೀರಿ, ಬಾಯಾರಿಸಿದ್ದೀರಿ ಹಾಗೂ ವಸ್ತ್ರವಿಲ್ಲದೆ ಕಂಡಿರಿ ಎಂದು ಕೇಳಿದಾಗ ಸ್ವಾಮಿಯು ಬಡವನನ್ನು ಕಂಡು ನೀನು ದಯೆ, ಕರುಣೆ ತೋರಿಸಿದೆ ಹೋಗಿದ್ದು ನನಗೂ ಮಾಡಿದಂತೆ ಎನ್ನುವ ಬೈಬಲ್‌ನ ಮಾತು ದಾಸೋಹದ ಮಾನವತೆಗೆ ಸಾಕ್ಷಿ ಪ್ರಜ್ಞೆಯಂತೆ ತೋರುತ್ತದೆ. ಕಾಯಕ ದಾಸೋಹ ಮೌಲ್ಯಗಳು ಬೇರು ಹೂವಿದ್ದಂತೆ, ಒಂದನ್ನು ಬಿಟ್ಟು ಮತ್ತೊಂದಿಲ್ಲ. ಗಳಿಕೆ ಬಳಕೆಗಳು ಅಭಿನ್ನನಾಣ್ಯವೆಂಬಂತೆ ಚಲಾವಣೆಗೆ ಬಂದ ಮೌಲ್ಯ ವಿಶೇಷಗಳು. ಒಂದು ಸ್ವಾವಲಂಬನೆ, ಸ್ವಾಭಿಮಾನದ ಪ್ರತಿನಿಧಿಯಾದರೆ ಮತ್ತೊಂದು ನಿರಂಹಕಾರ, ಸೇವೆಗಳ ಉತ್ತರಾಧಿಕಾರಿಯಾಗಿದ್ದು, ಮಾನವೀಯತೆಯನ್ನು ಸದಾ ಸಂರಕ್ಷಿಸಿಕೊಂಡ ಮಠದ ದಾಸೋಹ ಭಕ್ತಜನರ ಬದುಕಿನ ಚೇತನಕ್ಕೆ ಸಹಕಾರಿಯಾಗಿದೆ.

ನಮ್ಮ ಸಂಸ್ಕೃತಿ, ಸಂಪ್ರದಾಯದಲ್ಲಿ ಅನ್ನದಾನಕ್ಕೆ ವಿಶೇಷವಾದ ಸ್ಥಾನವಿದೆ. ಹಸಿದು ಬಂದವರಿಗೆ ಅನ್ನವೀಯಲು ಬೇಕು ಎಂಬ ಮಾತು ಈ ಕ್ಷೇತ್ರದಲ್ಲಿ ಅರ್ಥಪೂರ್ಣವಾಗಿದೆ. ಮನೆ ಮನೆಯಲ್ಲೂ ಹಿಂದೆ ಗೃಹಸ್ಥರು ಊಟ ಮಾಡುವುದಕ್ಕೆ ಮೊದಲು ಯಾರಾದರೂ ಅತಿಥಿಗಳು ಊಟಕ್ಕೆ ಬಂದರೇನೋ ಎಂದು ನೋಡುವ, ಬಂದರೆ ಕರೆದು ಆತಿಥ್ಯ ನೀಡುವ ಕಾಲವಿತ್ತೆಂದು ಹಿರಿಯರು ಹೇಳುತ್ತಾರೆ. ಅದು ಈಗ ಬದಲಾಗಿದೆ. ಇಲ್ಲಿ ನಡೆಯುವ ದಾಸೋಹದ ರುಚಿಯನ್ನು ಹಿಂದೆ ಮಠಕ್ಕಾಗಿ ದುಡಿದ ಶ್ಯಾಮಣ್ಣನವರು ಮಠದಲ್ಲಿದ್ದಾಗ ಒಬ್ಬ ಶ್ರೀಮಂತ ಮನೆತನದ ಮಹಿಮರು ಬಂದಾಗ ಒಂದು ಲಡ್ಡನ್ನು ಪ್ರಸಾದವಾಗಿ ಕೊಡುತ್ತಾರೆ. ಅದನ್ನು ಸ್ವೀಕರಿಸಿದ ಅವರು ನಾನು ರಾಜನ ಮತ್ತು ಅತೀ ಶ್ರೀಮಂತರ ಮನೆಯಲ್ಲಿ ಬಂಗಾರದ ತಟ್ಟೆಯಲ್ಲಿ ಊಟ ಮಾಡಿದ್ದೇನೆ. ಆದರೆ ಈ ಮಠದ ಪ್ರಸಾದದ ರುಚಿಯನ್ನು ಎಲ್ಲಿಯೂ ಅನುಭವಿಸಿಲ್ಲ ಎನ್ನುವ ಮಾತು ಗಮನಿಸಿದರೆ ಈ ಮಠದ ದಾಸೋಹದ ಮಹತ್ವ ಅರಿಯಲು ಸಹಾಯವಾಗುತ್ತದೆ.

ಅನ್ನದಾನಕ್ಕಿಂತ ಬೇರೆ ದಾನವಿಲ್ಲ ಎಂಬುದು ಪ್ರಾಚೀನ ಕಾಲದಿಂದಲೂ ಪ್ರಚಲಿತದಲ್ಲಿದೆ. ಸಿರಿಬಂದ ಕಾಲಕ್ಕೆ ಕರೆದು ಅಶನವನಿಕ್ಕು ಎಂದು ಹೇಳಿದ್ದು ಅಕ್ಷರಶಃ ಇಲ್ಲಿ ನೆರವೇರುತ್ತದೆ. 'ಆಹಾರದಂತೆ ಮನಸ್ಸು' ಎಂಬ ಮಾತಿದೆ. ಊಟವನ್ನು ಋಷಿಗಳು 'ಭೂಸುರ ಯಜ್ಞ'ವೆಂದಿದ್ದಾರೆ. 'ಊಟ ಬರೀ ತಿಂಡಿ ತಿನಿಸುಗಳ ಸೇವನೆಯಲ್ಲ-ಊಟದ ಕ್ರಮವೇ ಒಂದು ಯಜ್ಞ. ಆದ್ದರಿಂದಲೇ ಭಾರತೀಯ ಸಂಪ್ರದಾಯಗಳಲ್ಲಿ ಎಲ್ಲಾ ಸಂಪ್ರದಾಯಗಳಿಗೂ ನೀತಿ ನಿಯಮಗಳಿರುವಂತೆ ಭೋಜನಕ್ಕೂ ಇದೆ. ಒಟ್ಟಾರೆಯಾಗಿ ಈ ಎರ್ರಿತಾತನ ಮಠವು ಅಭಿವೃದ್ಧಿ ಹೊಂದುತ್ತಿರುವ ಎಲ್ಲಾ ಲಕ್ಷಣಗಳನ್ನು ದಾಸೋಹದ ಮೂಲಕವು ಸಹ ತಿಳಿಯಬಹುದಾಗಿದೆ.

**೬.೨. ಶಿಕ್ಷಣ ಮತ್ತು ಆರೋಗ್ಯ**

ಮನುಷ್ಯನು ಸಾಕ್ಷಾತ್ಕಾರಗೊಂಡು ಬದುಕಲು ಧಾರ್ಮಿಕತೆಯ ಮನೋಭೂಮಿಕೆಯಂತೆ ಸ್ವಾವಲಂಬಿ

ಮತ್ತು ತನ್ನ ತನದ ಮೂಲಭೂತಹಕ್ಕುಗಳನ್ನು ಹೋರಾಟದ ಮೂಲಕ ಪಡೆಯಲು ಸಾಕ್ಷಿಯಾಗಿರುವುದೇ ಶಿಕ್ಷಣ. ನಿರ್ಲಿಪ್ತ ಸ್ಥಿತಿಯಲ್ಲಿದ್ದ ಜೀವಿಯನ್ನು ಸಚೇತನ ರೂಪವನ್ನು ಪಡೆದು ಎಲ್ಲರೊಂದಿಗೆ ಸೌಹಾರ್ದತೆ ಹಾಗೂ ಸಮಾನತೆಯಿಂದ ಬಾಳಲು ಪ್ರೇರೇಪಿಸುತ್ತದೆ. ಹಾಗಾಗಿಯೇ ಬಾಬಾ ಸಾಹೇಬರು ತಮ್ಮ ಮೂರು ಅಮೂಲ್ಯ ಮಂತ್ರಗಳಲ್ಲಿ ಶಿಕ್ಷಣಕ್ಕೆ ಮೊದಲ ಆದ್ಯತೆ ನೀಡಿರುವುದು. ಎಲ್ಲಿ ಶಿಕ್ಷಣವಿರುತ್ತದೆಯೋ ಅಲ್ಲಿ ಕತ್ತಲನ್ನು ಬೇಧಿಸಿ ಬೆಳಕು ಪ್ರಜ್ವಲಿಸುವಂತೆ ಮಾಡುತ್ತದೆ. ಅಕ್ಷರ ಬದುಕು ಬದಲಾಯಿಸುವ ತತ್ವವನ್ನು ಬಹುಬೇಗನೆ ಅರಿಯುವಂತೆ ಮಾಡುತ್ತದೆ.

"ವಿದ್ಯಾಲಯಗಳು ಆಧುನಿಕ ದೇವಾಲಯಗಳು" ಎಂಬ ಮಾತೊಂದಿದೆ. ಅದು ಒಪ್ಪಿದರೂ ಒಪ್ಪದಿದ್ದರೂ ಮೌಢ್ಯತೆ ಅಂಧಕಾರವನ್ನು ಎದುರಿಸಿ ನಿಲ್ಲಲು ಸಹಕಾರಿಯಾಗುವುದಂತೂ ನಿಜ. ಅದಕ್ಕಾಗಿಯೇ ಕಡುಬಡತನವಿದ್ದರೂ ಅಕ್ಷರದ ದರ್ಶನ ಮಾಡಿಸಲು ಇಂದು ಪರಿತಪಿಸುವುದು ಕಂಡುಬರುತ್ತದೆ. ಮಠದ ಸಮಿತಿಯವರು ಮಠದ ಒಟ್ಟು ಖರ್ಚಿನ ಒಂದು ಭಾಗವನ್ನು ಶಿಕ್ಷಣಕ್ಕೆ ಮೀಸಲಿಟ್ಟಿರುವುದು ಆ ಮೂಲಕ ವಸತಿ ಶಾಲೆಯನ್ನು ನಡೆಸುತ್ತಿರುವುದು ಕಂಡುಬರುತ್ತದೆ. ಸರಕಾರದಿಂದಾಗಲಿ, ದೇಶ ವಿದೇಶಗಳಿಂದಾಗಲಿ ಯಾವುದೇ ನೆರವನ್ನು ಪಡೆಯದೇ ಕೇವಲ ಭಕ್ತಾದಿಗಳಿಂದ ಸಂಗ್ರಹಿಸಿಲ್ಪಟ್ಟ ಹಣದಿಂದ ಈ ವಸತಿಶಾಲೆ ನಡೆಯುತ್ತದೆ.

ಶಾಲೆಗೆ ಸ್ವಂತ ಕಟ್ಟವಿದ್ದು, ಮಠದ ಆವರಣದಲ್ಲಿ ಶಾಲೆಯ ಮಕ್ಕಳಿಗೆ ಶಿಕ್ಷಣದ ಜೊತೆಗೆ ಯೋಗ, ಧ್ಯಾನ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ಹೇಳಿಕೊಡಲಾಗುತ್ತಿದೆ. ಶಿಕ್ಷಣ ಶಿಕ್ಷಣಕ್ಕಾಗಿ ಅಲ್ಲ, ವ್ಯಕ್ತಿ ಪರಿವರ್ತನೆಗಾಗಿ, ಸಮಾಜ ಪರಿವರ್ತನೆಗಾಗಿ ಎಂಬ ನಂಬಿಕೆಯೊಂದಿಗೆ ಸಮಾಜಾಂದೋಲನವಾಗಿ ಚಿಕ್ಕದಾಗಿ ಪ್ರಾರಂಭವಾಗಿದೆ. ವರ್ಗಭೇದ, ವರ್ಣಭೇದ, ಲಿಂಗಭೇದವಿಲ್ಲದೆ ತಾರತಮ್ಯಗಳ ಕಿಂಚಿತ್ ಸೋಂಕಿಲ್ಲದೆ ಹೊಸ ಸಮಾಜದ ನೆಲಗಟ್ಟನ್ನು ಸರ್ವ ಸಮಾನತೆಯ ತತ್ವದಡಿ ಮೂಡಿಸಿ ಹೊಸ ಬೆಳಕು ತೋರಿಸಿ ಮಾರ್ಗದರ್ಶಿಸಿ ನವನಿರ್ಮಾಣದ ಅಡಿಪಾಯಕ್ಕೆ ಇಂಬುಕೊಟ್ಟಂತಿದೆ.

ಅಧ್ಯಯನವೇ ಅರ್ಚನೆ-ಆರಾಧನೆ,
ಅಧ್ಯಾಪನವೇ ಅರ್ಪಣ-ಸ್ತವನ
ಅಭ್ಯಾಸದಿಂದಾಧನುಭವ ಕ್ರಮಬದ್ಧ
ಅನುಭವದಭ್ಯಾಸವೇ ಸುಖದ್ಧ

ಎನ್ನುವ ವಿವೇಚನೆಗಳಿಂದ ಪ್ರಾಥಮಿಕ ಶಿಕ್ಷಣಕ್ಕೆ ಒತ್ತುಕೊಟ್ಟಿದೆ. ಮುಂದೆ ಪ್ರೌಢ ಹಾಗೂ ಕಾಲೇಜು ಶಿಕ್ಷಣಗಳಿಗೆ ಅವಕಾಶ ಕಲ್ಪಿಸಿಕೊಡುವ ಹತ್ತು ಹಲವು ಕನಸುಗಳಿಗೂ ಮಠವು ಯೋಜನೆ ಹಾಕಲಾಗಿದೆ ಎಂದು ಮಠದ ಸಮಿತಿಯೊಬ್ಬರು ತಿಳಿಸಿದ್ದಾರೆ.

ಕೇವಲ ಭೌತಿಕವಾಗಿಯಲ್ಲ. ನೈತಿಕ ಶಕ್ತಿಯ ಸ್ಫೂರ್ತಿ ಇಲ್ಲಿ ಸಚೇತನಗೊಂಡಿದೆ. ಮನುಷ್ಯ ಒಳ್ಳೆಯವನಾಗುವುದು ಮುಖ್ಯ. ಆದರೆ ಒಳ್ಳೆಯವನಾಗುವುದು ಹೇಗೆ? ಒಂದು ಶಿಕ್ಷಣದಿಂದ ಅಥವಾ

ತರಬೇತಿಯಿಂದ, ಇನ್ನೊಂದು ಸಂಸ್ಕಾರದಿಂದ. ಸರ್ಕಾರಿ ಶಾಲೆಗಳು ಶಿಕ್ಷಣವನ್ನು ನೀಡುತ್ತವೆ. ಆದರೆ ಧಾರ್ಮಿಕ ಭಯ ಭಕ್ತಿಯ ಜೊತೆಗೆ ಸಂಸ್ಕಾರ ಶಿಕ್ಷಣವನ್ನು ಈ ಮಠವು ನೀಡುತ್ತಿರುವುದು ಅವುಗಳ ಸಾಂಸ್ಕೃತಿಕ ಚಟುವಟಿಕೆಗಳಿಗೆ ಸಾಕ್ಷಿಯಾಗಿದೆ. ಶಾಲೆ ಹಾಗೂ ಕಾಲೇಜು ಬಿಟ್ಟ ನಂತರ ಎಂಥಹ ಜೀವನ ಪಡೆಯಬೇಕು. ಸಮಾಜದಲ್ಲಿ ಬರುವ ಎಡರು ತೊಡರುಗಳಿಗೆ ಎದುರಾಗಿ ನಿಲ್ಲುವ ಶಕ್ತಿಯನ್ನು ಧಾರ್ಮಿಕ ವಸತಿಶಾಲೆಗಳು ಆಧ್ಯಾತ್ಮದ ಕಲ್ಪನೆಯೊಡನೆ ತುಂಬುತ್ತವೆ.

ಆರೋಗ್ಯವೇ ಮಹಾಭಾಗ್ಯ ಎಂಬುದು ಅರ್ಥಪೂರ್ಣ ಮತ್ತು ಅತ್ಯಂತ ಜಾಗರೂಕತೆಯನ್ನು ನೀಡಲು ಪ್ರಚಲಿತದಲ್ಲಿರುವ ಮಾತಾಗಿದೆ. ಆರೋಗ್ಯವೇ ಶಕ್ತಿ ಅನಾರೋಗ್ಯವೇ ಬಲಹೀನತೆ ಹಾಗಾಗಿಯೇ ಆರೋಗ್ಯದ ಅರಿವನ್ನು ಜನಸಾಮಾನ್ಯರಲ್ಲಿ ತುಂಬಲು ಸರಕಾರ ಅಷ್ಟೇ ಅಲ್ಲ. ಅನೇಕ ಸಂಘ ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿರುವುದು ಕಂಡುಬರುತ್ತಿದೆ. ಕೆಲವೊಮ್ಮೆ ಯಾವುದೇ ಫಲಾಪೇಕ್ಷೆಗಳಿಲ್ಲದೆ ಸಾಮಾಜಿಕ ಆರೋಗ್ಯದ ಪಥ ಸಂಚಲನಕ್ಕೆ ಸಹಕಾರಿಯಾಗಿ ನಿಲ್ಲುತ್ತವೆ.

ಮಠದ ಆವರಣದ ಕಟ್ಟಡದಲ್ಲಿ ಒಂದು ಆಯುರ್ವೇದ ಚಿಕಿತ್ಸಾಲಯವು ನಡೆಯುತ್ತಿದ್ದು, ಇಲ್ಲಿನ ಜನರಿಗೆ ಹೋಮಿಯೋಪಥಿ ಚಿಕಿತ್ಸೆಯ ಜೊತೆಗೆ ಅಲೋಪಥಿಕ್ ಚಿಕಿತ್ಸೆಯು ಲಭ್ಯವಿದೆ. ಸರಕಾರವೇ ಇದರ ಖರ್ಚನ್ನು ಭರಿಸುತ್ತಿದ್ದರೂ, ಆದರೆ ಔಷಧಿಗೆ ಬೇಕಾಗಿರುವ ಪದಾರ್ಥಗಳನ್ನು ಇಲ್ಲಿನ ವೈದ್ಯರಿಗೆ ಮಠವು ಒದಗಿಸಿಕೊಡುವುದರಲ್ಲಿ ಅದರ ಪಾತ್ರ ಹಿರಿಯದಾಗಿದೆ.

ಗ್ರಾಮಾಂತರ ಪ್ರದೇಶಗಳಿಗಾಗಿ ಸರ್ಕಾರ ನಿಗದಿಪಡಿಸಿರುವ ಸರ್ಕಾರೀ ಆರೋಗ್ಯ ಸೇವಾ ಸೌಲಭ್ಯಗಳ ಪ್ರಕಾರ ಪ್ರತೀ ಒಂದು ಲಕ್ಷ ಜನರ ಸಮುದಾಯಕ್ಕೆ ಒಂದು ಸಮುದಾಯ ಆರೋಗ್ಯ ಕೇಂದ್ರವಿರಬೇಕು. ಇದರ ನಂತರ ಪ್ರತಿ ಮೂವತ್ತು ಸಾವಿರ ಗ್ರಾಮಾಂತರ ಜನಸಂಖ್ಯೆಗೆ ಒಂದರಂತೆ ಪ್ರಾಥಮಿಕ ಆರೋಗ್ಯ ಕೇಂದ್ರವಿರಬೇಕು ಎನ್ನುವ ನಿಯಮವಿದೆ. ಆದರೆ ಅವುಗಳು ಹೇಗೆ ಕಾರ್ಯ ನಿರ್ವಹಿಸುತ್ತಿವೆ? ಸರಿಯಾಗಿ ವೈದ್ಯರು ಹಾಜರಿರುತ್ತಾರೆಯೇ? ಮುಂತಾದ ಪ್ರಶ್ನೆಗಳಿಗೆ ಉತ್ತರ ಸಿಗುವುದು ಕಷ್ಟ. ಆದರೆ ಮಠಮಾನ್ಯಗಳ ಯಾವುದೇ ರೀತಿಯ ಒತ್ತಡಗಳಿಲ್ಲದೆ ಸ್ವಯಂಪೂರ್ಣವಾಗಿ ಈ ಕಾರ್ಯವನ್ನು ಮಾಡುತ್ತವೆ.

ಜಾತ್ರೆ ಮಹೋತ್ಸವ, ಅವಮಾಸ್ಯೆ ಹಾಗೂ ವಿಶೇಷ ಪೂಜಾ ದಿನಗಳಲ್ಲಿ ಇಲ್ಲಿ ಸೇರುವ ಭಕ್ತರಿಗೆ ಹಾಗೂ ಪ್ರವಾಸಿಗರಿಗೆ ಯಾವುದೇ ರೀತಿಯ ಅನಾರೋಗ್ಯದ ತೊಂದರೆಗಳು ತಲೆದೋರದಂತೆ ಮಠದ ಹುಂಡಿಯಿಂದ ಸ್ವಲ್ಪ ಹಣವನ್ನು ರಸ್ತೆಯ ಬದಿಯಲ್ಲಿ Bleaching Powder ಹಾಕುವುದು. ರಸ್ತೆಯ ಎರಡು ಕಡೆ ಗಿಡಗಳನ್ನು ಸ್ವಚ್ಛಗೊಳಿಸುವುದು ಮುಂತಾದ ಆರೋಗ್ಯಕರ ಸೇವೆಯನ್ನು ಈ ಮಠವು ಒದಗಿಸಿಕೊಡುತ್ತದೆ.

**೭.೩. ಸೇವಾ ಸೌಲಭ್ಯ**

ಈ ಭಾಗದ ಜನರಿಗೆ, ರೈತರಿಗೆ, ವ್ಯಾಪಾರಿಗಳಿಗೆ ಅನುಕೂಲವಾಗಲೆಂದು ಮಠದ ಆವರಣದಲ್ಲಿ ಪ್ರಗತಿ ಗ್ರಾಮೀಣ ಬ್ಯಾಂಕ್ ಇದ್ದು, ಈ ಬ್ಯಾಂಕಿನ ವ್ಯವಹಾರದ ಕೇಂದ್ರಬಿಂದು ಮಠದ ಹಣವೇ

ಆಗಿರುವುದು ಕಂಡುಬರುತ್ತದೆ. ಪ್ರತಿ ಬುಧವಾರ ಹೊರತುಪಡಿಸಿ ಇನ್ನುಳಿದ ದಿನಗಳಲ್ಲಿ ವ್ಯವಹಾರವು ನಡೆಯುತ್ತದೆ. ಮಠದಿಂದ ಬಂದ ಹಣದಿಂದಲೇ ಜನ ಸಾಮಾನ್ಯರಿಗೆ ಸಾಲ ಮತ್ತು ಕೃಷಿ ಸಾಲಗಳನ್ನು ಒದಗಿಸಲಾಗುತ್ತಿದೆ. ಭಕ್ತಾದಿಗಳಿಂದ ಸಂಗ್ರಹಿಸಿದ ಹಣವನ್ನು ಬ್ಯಾಂಕಿನಲ್ಲಿಡುವುದರಿಂದ ಈ ಭಾಗದ ಜನರ ವ್ಯವಹಾರಕ್ಕೆ ಅನುಕೂಲವಾಗುತ್ತದೆ.

ಪ್ರತಿದಿನ, ಅಮಾವಾಸ್ಯೆ ವಿಶೇಷ ಪೂಜಾ ದಿನಗಳು ಹಾಗೂ ಜಾತ್ರಾ ಮಹೋತ್ಸವ ದಿನಗಳಲ್ಲಿ ಹೆಚ್ಚಿನ ರೀತಿಯ ವ್ಯವಹಾರ ನಡೆಯುತ್ತದೆ. ಅಲ್ಲದೆ ಮಠದ ಆವರಣದಲ್ಲಿಯೇ ಅಂಚೆ ಕಛೇರಿ ವ್ಯವಸ್ಥೆಯು ಇದ್ದು ಸರಕಾರದ ಅಧೀನದಲ್ಲಿದ್ದರೂ ಸಹ ಮಠದ ಹಣದ ವ್ಯವಹಾರವೇ ಕೇಂದ್ರವಾಗಿದೆ.

**೭.೪. ವಿಶ್ರಾಂತಿ ಗೃಹಗಳು ಕಲ್ಯಾಣ ಮಂಟಪ**

ಕ್ಷೇತ್ರದಲ್ಲಿ ಸುಮಾರು ವಿಶ್ರಾಂತಿ ಗೃಹಗಳಿದ್ದು, ಅವುಗಳನ್ನು ಭಕ್ತರ, ಪ್ರವಾಸಿಗರ ಅನುಕೂಲಕ್ಕಾಗಿ ಬಳಸಲಾಗುತ್ತದೆ. ಉಚಿತವಾಗಿ ನೀರಿನ ಸೌಲಭ್ಯ ವಿದ್ಯುತ್ ಸೌಲಭ್ಯವಿರುವ ಗೃಹಗಳು ಭಕ್ತರಿಗೆ ಯಾವುದೇ ರೀತಿಯ ತೊಂದರೆಗಳಾಗದಂತೆ ಮುನ್ನೆಚ್ಚರಿಕೆ ಕ್ರಮಗಳನ್ನು ಅನುಸರಿಸಲಾಗಿದೆ. ಮುಂದಿನ ದಿನಗಳಲ್ಲಿ ಅಪಾರ್ಟ್‌ಮೆಂಟ್‌ನ್ನು ಕಟ್ಟಿಸಲಾಗುವ ಯೋಜನೆಯನ್ನು ಸಿದ್ಧಮಾಡಲಾಗಿದೆ. ವಿಶೇಷವಾಗಿ ಕ್ಷೇತ್ರಕ್ಕೆ ಒಳಪಡುವ ಕಲ್ಯಾಣ ಮಂಟಪವಿದ್ದು, ಮದುವೆಯ ಸಮಾರಂಭಗಳಿಗೆ, ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಹಾಗೂ ದಿನಿತ್ಯದ ದಾಸೋಹಕ್ಕೆ ಇದನ್ನು ಬಳಸಲಾಗುತ್ತದೆ. ಅಲ್ಲದೆ ಮಠದ ಬಲಭಾಗದಲ್ಲಿ Out post police station ಇದ್ದು ಯಾವುದೇ ಅಹಿತಕರ ಘಟನೆಗಳು ನಡೆಯದಂತೆ ಮಠದ ಸಮಿತಿಯು ಎಚ್ಚರಿಕೆ ವಹಿಸುವಂತೆ ಸೂಚಿಸಿದೆ. ಚಿಕ್ಕದಾದ ಮಠ ಅಷ್ಟೊಂದು ಅನುಕೂಲ ಮಾಡಿರುವುದು ನಿಜಕ್ಕೂ ಶ್ಲಾಘನೀಯ ವಾದುದ್ದಾಗಿದೆ.

## ಸಮರೋಪ

ಇಂದು ವೈಚಾರಿಕತೆಯ ಆಂದೋಲನಗಳು, ತಾತ್ವಿಕ ಚಿಂತನ ಮಂಥನಗಳು ಜಾಗತಿಕ ಮಟ್ಟದಲ್ಲಿ ನಡೆದರೂ ಮೂಲಭೂತವಾದ ಧಾರ್ಮಿಕ ಧಾರೆಗಳು ಮನುಷ್ಯನ ಭಾವನೆಗಳನ್ನು ಸೆರೆ ಹಿಡಿದು ಅಲುಗಾಡಿಸುತ್ತಿರುವುದು ಹೊಸದೇನಲ್ಲ. ಪ್ರಾಚೀನ ಕಾಲದಿಂದಲೂ ಅರ್ವಾಚೀನ ಬದುಕಿನ ಜೀವಂತ ಪಳೆಯುಳಿಕೆಗಳಾಗಿವೆ. ಹುಟ್ಟು ಸಾವುಗಳವರೆಗೂ ಒಂದಲ್ಲ ಒಂದು ದೈವತ್ವದ ಕಟ್ಟುಪಾಡಾಗಲಿ, ಭಕ್ತಿಯ ಹಂದರಗಳಾಗಲಿ ಅವನ ಬದುಕಿನ ಭಾಗಗಳಾಗಿ 'ಬಿಡು ಎಂದರೆ ಬಿಡದೀ ಮಾಯೆ' ಎನ್ನುವ ತೊಳಲಾಟ ಮತ್ತು ತಾಕಲಾಟಗಳಿಗೆ ಸಿಲುಕಿ, ಲೌಕಿಕತೆಯೊಳಗೆ ಪಾರಮಾರ್ಥಿಕ ಸಾರವನ್ನು ಸವಿಯುವಂತೆ ಮಾಡುತ್ತದೆಯೋ, ಸಾಯುವಂತೆ ಮಾಡುತ್ತದೆಯೋ ಎಂಬುದು ಪರಿಗ್ರಹಿಸಲು ಕಷ್ಟವಾಗುತ್ತದೆ. ಬಲಿದಾನಗಳು, ಹರಕೆ ಸಲ್ಲಿಸುವುದು, ಬೆಂಕಿ ಹಾಯುವುದು, ಮುಳ್ಳಿನ ಮೇಲೆ ಹಸುಗೂಸನ್ನೆಸೆಯುವುದು ಮುಂತಾದ ಕಠಿಣ ಧಾರ್ಮಿಕ ವಿಧಿ ವಿಧಾನಗಳು ಮನುಷ್ಯನನ್ನು ಹಿಮ್ಮುಖ ಮುಮ್ಮುಖ ಮಾಡಿ, ತಲೆಕೆಳಗೆ ಮೇಲಾಗುವಂತೆ ಮಾಡುತ್ತಿವೆ ಎಂದು ಬೇರೆ ಹೇಳಬೇಕಾಗಿಲ್ಲ.

ಹಲವು ಸಂಸ್ಕೃತಿ, ದೈವತ್ವದ ಪರಿಕಲ್ಪನೆಗಳಿಗೆ ಭಾರತದಷ್ಟು ಬೇರೆ ಯಾವ ದೇಶಗಳಲ್ಲಿಯೂ ಅದರ ಪರವಾಗಲೀ, ವಿರೋಧವಾಗಲೀ, ವಿರೋಧದ ಭಾವವಾಗಲೀ ಕಡಿಮೆ ಎಂದೇ ಹೇಳಬಹುದು. ಏಕೆಂದರೆ ಬಹುತೇಕ ವ್ಯಕ್ತಿಯ ಹೆಸರಿನಲ್ಲಿ ದೇವರು ದೈವತ್ವದ ಪರಿಮೂಸೆ ಆವರಿಸಿರುವುದು ಸಾಮಾನ್ಯವಾಗಿದೆ. ಅದಕ್ಕೆ ಪೂರಕವಾಗಿ ಧಾರ್ಮಿಕ ಮಹಾಪುರುಷರ ಮಹಿಮಾಪೂರ್ಣ ಕಥೆಗಳನ್ನಾಲಿಸುವುದರಿಂದ ಅದರ ಆದರ್ಶಮಯ ಜೀವನ ಎತ್ತಿಹಿಡಿದ ಮೌಲ್ಯಗಳು, ಧ್ಯೇಯ ಧೋರಣೆಗಳು ಜನತೆಯ ಹೃದಯ ಮಂದಿರದಲ್ಲಿ ಕಡೆದಿರಿಸಿ, ದೈವಿಕಭಾವನೆಯನ್ನು ಹುಟ್ಟಿಸುವವು. ಆ ಮಹಿಮಾಪುರುಷರ ದಿವ್ಯಾನುಭವ ಕಥನದಿಂದ ಅವರ ಅದ್ಭುತ ಶಕ್ತಿಯ ಪರಿಚಯದಿಂದ ಜನರು ರೋಮಾಂಚನಗೊಂಡು ಭಾವನಾಮಯರಾಗುವುದು ಉಂಟು. ಈ ರೀತಿಯ ಭಾವುಕತೆ, ಧಾರ್ಮಿಕ ಪ್ರಪಂಚದಲ್ಲಿ ಅವಶ್ಯವಾದುದು. ಇದು ಜನತೆಯನ್ನು ಸನ್ಮಾರ್ಗದತ್ತ ಕೊಂಡೊಯ್ಯುವುದು.

ಭೋಗ ಪ್ರಧಾನವಾದ ಪ್ರಭುತ್ವ ಶಕ್ತಿಗಳ ಮುಂದೆ ವಿರಕ್ತತನವು ದೊಡ್ಡ ಪ್ರತಿರೋಧವೊಡ್ಡಿ ಪ್ರತಿಭಟನೆಯನ್ನು ನೇರವಾಗಿ ಇಲ್ಲವೇ ಮೌನವಾಗಿ ಎದುರಿಸುತ್ತವೆ. ಮೋಹ ದಾಹ ಪ್ರಧಾನ ಬದುಕಿನ

ವಿಷಯ ಲೋಲುಪತೆ, ಕ್ಷಾಮ, ಸಾಂಕ್ರಾಮಿಕ ರೋಗ, ಅರಾಜಕತೆಗಳಿಂದ ಬೇಸತ್ತ ಜನರನ್ನು ಈ ನಿಲುವಿಗೆ ಪರಿವರ್ತಿಸಲು ಆಧ್ಯಾತ್ಮಿಕ ಜೀವಿಗಳಿಂದ ಸಾಧ್ಯವಾಯಿತು. ದಿಗ್ಭ್ರಮೆಗೊಂಡ ಹೃದಯಗಳಿಗೆ ತಮ್ಮ ಬದುಕಿನ ಸಿದ್ಧಿಗಳ ಮೂಲಕ ಸ್ಥೈರ್ಯ ನೀಡಿದರು. ಉದ್ದೇಶಪೂರ್ವಕವಾಗಿ ಅಲ್ಲದಿದ್ದರೂ ಸಂಪ್ರದಾಯಬದ್ಧ ವಿಧಿಗಳನ್ನು ಎದುರಿಸಲು ಹೊಸ ಆಯಾಮಗಳನ್ನು ತಮಗೆ ಅರಿವಿದ್ದೋ ಕೆಲವೊಮ್ಮೆ ಅರಿವಿಲ್ಲದೆ ಭಕ್ತಜನರಿಗೆ ತಲುಪುವ ಪ್ರಯತ್ನಗಳನ್ನು ಪ್ರಸ್ತುತ ಅಧ್ಯಯನದ ಒತ್ತಾಸೆಯೆಂಬಂತೆ ಚರ್ಚಿಸಲಾಗಿದೆ.

ಸಿದ್ಧರಾಗಲಿ, ಆರೂಢ ಅವಧೂತರಾಗಲಿ, ನಾಥ ಸೂಫಿಗಳಾಗಲಿ, ವಿರಕ್ತ ತತ್ವಪದಕಾರರಾಗಲಿ ಒಂದು ನಿರ್ದಿಷ್ಟ ಮತ ಪಂಥಗಳ ನೆಲೆಯೊಳಗೆ ನಡೆಯದೆ ಮನಸ್ಸಿನೆಡೆಗೆ ಎಲ್ಲವನ್ನೂ ಮೀರಿದ, ತ್ಯಜಿಸಿದ, ಔನತ್ಯವನ್ನು ಪಡೆದವರಾಗಿದ್ದರು. ಇಹದ ಮೋಹದ ಬಲೆಯಿಂದ ನವೀರಾಗಿ ತಮ್ಮನ್ನು ಬಿಡಿಸಿಕೊಂಡು ಇತರರ ವಿಮೋಚನೆಗೆ ಶುಭಹಾಡಿದರು. ಗುರಿ ಮುಟ್ಟುವ ಮಾರ್ಗಗಳನೇಕವಿದ್ದರೂ ಸಾಧನೆ, ಯೋಗಸಾಧನೆ, ಮೋಕ್ಷಸಾಧನೆಯ ಗುರಿ ಒಂದೇಯಾಗಿರುತ್ತಿತ್ತೆಂಬುದನ್ನು ಸೈದ್ಧಾಂತಿಕ ನೆಲೆಗಟ್ಟಿನಲ್ಲಿ ಒಂದು ಚೌಕಟ್ಟಿನೊಳಗೆ ವಿಶ್ಲೇಷಿಸಲಾಗಿದೆ.

ಅನುಭವ ಮತ್ತು ಅನುಭಾವ ಆಧ್ಯಾತ್ಮಿಕ ವಿಕಾಸದ ಎರಡು ಮಹನ್ನತಿ ಹಂತಗಳು. ಇಹದ ಜೀವನದಲ್ಲಿ ಅನುಭವಿಸಿದ ಸುಖ ದುಃಖಗಳು, ನೋವು ಹತಾಶೆಗಳನ್ನು ಅನುಭವಿಸಿದ ವ್ಯಕ್ತಿಯನ್ನು ಸಂಸಾರದ ಅನುಭವಿ ಎಂದು ಹೇಳುತ್ತೇವೆ. ಈ ಲೌಕಿಕ ತತ್ವವು ಗಟ್ಟಿಗೊಂಡು ಪಾರಮಾರ್ಥಿಕತೆಯ ಮಾರ್ಗದಲ್ಲಿ ಆತ್ಮ ನಿವೇದನೆಯೊಂದಿಗೆ ಅರಿವಾಗುವ ಹಂತವೇ ಅನುಭಾವ. ಮಹಾತ್ಮರ ಗುಡಿಗಳಲ್ಲಿ ಅದನ್ನು "ಅಯ್ಯಾ ನಿಮ್ಮ ಅನುಭಾವದಿಂದ ಎನ್ನ ಕರ್ಮ ಭೇದನವಾಯಿತಯ್ಯ" ಭವದ ಬಂಧನದಿಂದ ಜಾರಿ ಭವ್ಯತೆಯನ್ನು ಕಂಡುಕೊಳ್ಳುವ ಪರಿಯನ್ನು ಔನತ್ಯಪುರುಷರ ಜೀವನ ಸಿದ್ಧಿಗಳಿಂದ ಪರಿಗ್ರಹಿಸಲಾಗಿದೆ.

ಸಹಜವಾಗಿಯೇ ಅನುಭಾವಿಗಳು ಸಮಾಜವನ್ನೇ ಪ್ರೋತ್ಸಾಹಿಸಿದವರು, ಸಾಂಪ್ರದಾಯಿಕ ಮಡಿವಂತರ ವ್ಯವಸ್ಥೆಯನ್ನು ಸಮೀಪದಿಂದ ಕಂಡವರು. ಅಂಥ ವ್ಯವಸ್ಥೆಯನ್ನು ಸ್ವಾರ್ಥಪರವಾದ ಮನೋಧರ್ಮವನ್ನು ಮೌನವಾಗಿಯೇ ಎದುರಿಸಿದವರು. ಪರೋಪಕಾರದ ಹಾಗೂ ಸಮ ಸಂಸ್ಕೃತಿಯ ನೆಲೆಗಳನ್ನು ಹುರಿಗೊಳಿಸಲೆತ್ನಿಸಿದವರು. ಬೇರು ಸಮೇತವಾಗಿ ಒಣಗಿದ ವ್ಯವಸ್ಥೆಗೆ ಹಸಿರ ಉಡಿಸಿದರು, ಬಸಿರ ತುಂಬಿಸಿದವರು, ಮೈಮನಸ್ಸನ್ನು ನಡೆ-ನುಡಿಗಳನ್ನು ಜಾಗೃತವಾಗಿಸಿದರು.

ಅಧ್ಯಯನದ ಉದ್ದೇಶಗಳನ್ನು ಕೈಗೊಳ್ಳುವ ವಿಧಾನಗಳನ್ನು ಕುರಿತು ಪ್ರಾರಂಭದಲ್ಲಿ ತಿಳಿಸಲಾಗಿದ್ದು, ಕ್ಷೇತ್ರಕಾರ್ಯಾಧಾರಿತ ಅನೇಕ ಮೌಖಿಕ ಸಾಹಿತ್ಯದ ಪರಂಪರೆಯ ಹಿನ್ನೆಲೆಯಲ್ಲಿ ಹಾಗೂ ದೊರೆತ ಲಿಖಿತ ಕೃತಿಗಳನ್ನು ಪರಾಮರ್ಶನಗೊಳಪಡಿಸಲಾಗಿದೆ. ಅಧ್ಯಯನದ ಕೇಂದ್ರವಾದ ಚೇಳಗುರಿಕೆ ಎರ್ರಿತಾತನ ಕುರಿತ ಪೂರ್ವ ಇತಿಹಾಸವಾಗಲೀ, ಐತಿಹ್ಯವಾಗಲೀ ಪರಿಪೂರ್ಣವಾಗಿ ತಿಳಿದು ಬಂದಿಲ್ಲ. ಆದರೂ ಹಲವು ವಿದ್ವಾಂಸರು, ಮಠಾಧೀಶರ, ಹಿರಿಯರ, ಬುದ್ಧಿ ಜೀವಿಗಳ ಕೆಲವು ಆಕರ ಗ್ರಂಥಗಳ ಸಹಾಯದಿಂದ ಮೈಸೂರು ಸೀಮೆಯಿಂದ ವಲಸೆ ಬಂದವರೆಂದು ವಿವರಿಸಲಾಗಿದೆ. ನದಿಯ ಮೂಲವಾಗಲೀ ಋಷಿಯ

ಮೂಲವಾಗಲೀ ಸ್ಪಷ್ಟವಾಗಿ ತಿಳಿಯಲು ಕಷ್ಟ. ಕೆಲವು ದಾಖಲೆಗಳ ಪ್ರಕಾರ ಹಳೇ ಮೈಸೂರು ಪ್ರಾಂತ್ಯದ ದೊಡ್ಡ ಬಳ್ಳಾಪುರದ ಸಮೀಪ ಲಿಂಗದಹಳ್ಳಿ ತಾತನವರ ಜನನ ಸ್ಥಳ. ನೀಲಕಂಠರಾಧ್ಯ ಮತ್ತು ನಿರ್ಮಲಾಂಬಿಕೆ ಎಂಬ ದಂಪತಿಗಳೆ ಈತನ ತಂದೆ ತಾಯಿಗಳೆಂದು, ಸಂಸಾರದಲ್ಲಿ ಬೇಸತ್ತು ಮಡದಿ ಒಬ್ಬ ಮಗನನ್ನು ಬಿಟ್ಟು, ವೈರಾಗ್ಯ ಮೂರ್ತಿಯಾಗಿ ಸಕಲವನ್ನು ತ್ಯಜಿಸಿದವರು ಎಂಬುದು ವೇದ್ಯವಾಗುತ್ತದೆ.

ಗುರು ಗಗನಾರ್ಯರನ್ನು ಮೀರಿಸುವ ಸಿದ್ಧಿಯ ಮಾರ್ಗವನ್ನು ಅರಿತವನಂತೆ ಸಂಚಾರಶೀಲನಾಗಿ ಬೆಳಗುಪ್ಪೆ, ಕಲ್ಯಾಣ ದುರ್ಗ, ಚೀಕಲಗುರಿಕೆ, ಮಸ್ಕೂರು ಮಾರ್ಗವಾಗಿ ಚೇಳಗುರಿಕೆಗೆ ಬಂದನು. ಯೋಗ ಸಾಧನೆಯಿಂದ ಮನುಷ್ಯ ಅತೀ ಮಾನವನಾಗಬಲ್ಲ ಎನ್ನುವ ಧೋರಣೆಯನ್ನು ಸಾರುವವನಂತೆ ಧ್ಯಾನಮಗ್ನನಾಗಿ ಚೇಳಗುರಿಕೆ ಗ್ರಾಮದ ಸಮೀಪ ಮಲ್ಲಪ್ಪನ ಮಟ್ಟಿ ಎಂಬ ಸ್ಥಳದಲ್ಲಿ ಬಂದು ಕುಳಿತಾಗ ಕೃತಿಯೊಂದು ಆತನ ಸ್ಥಿತಿಯನ್ನು ಈ ರೀತಿ ತಿಳಿಸುವುದು. "ಪರವಶ ಸ್ಥಿತಿಯ ಎರ್ರಿತಾತನ ಗತಿಮತಿಗಳು ವಿಚಿತ್ರವೂ ಲೌಕಿಕಾನುಭವಕ್ಕೆ ನಿಲುಕಲಾರದವುಗಳು ಆಗಿದ್ದವು".

ಪ್ರಸ್ತುತ ಅಧ್ಯಯನದಲ್ಲಿ ಚೇಳಗುರಿಕೆ ಎರ್ರಿತಾತನ ಪೂರ್ವ ಚರಿತ್ರೆಯನ್ನು ಕಟ್ಟುವುದು ಕಷ್ಟದ ಕೆಲಸವಾದರೂ ಆತನ ಸ್ಥಳ, ತಂದೆ, ತಾಯಿ, ಮಡದಿ ಮಕ್ಕಳ ಆತನು ಕಂದಾಯ ಇಲಾಖೆಯಲ್ಲಿ ನೌಕರಿಯಲ್ಲಿದ್ದನೆಂಬ ಹಲವಾರು ವಿಷಯಗಳನ್ನು ನೇರವಾಗಿ ಒಪ್ಪದೇ ಒಂದು ಸೈದ್ಧಾಂತಿಕ ಚರ್ಚೆಯ ನಿಲುವುಗಳೊಳಗೆ ಅವಲೋಕಿಸುವ ಪ್ರಯತ್ನ ಮಾಡಲಾಗಿದೆ.

ದೈವತ್ವಕ್ಕೆ ಸಂಬಂಧಿಸಿದಂತೆ ಹಿಂದಿನಿಂದಲೂ ನಡೆದುಕೊಂಡು ಬಂದಿರುವ ಆಚರಣೆಗಳು ಚರ್ಚೆಗೆ ಅರ್ಥಕಳೆದುಕೊಳ್ಳುತ್ತಿವೆ. ಅಂದರೆ ಅವುಗಳಿಗೆ ಸಂಬಧಿಸಿದ ವಿಚಾರಗಳನ್ನು ಪ್ರಶ್ನಿಸುವ ಪರಿಪಾಠ ಇತ್ತೀಚೆಗೆ ಹೆಚ್ಚಾಗಿರುವುದು ತಿಳಿದುಬರುತ್ತದೆ. ಯಾವುದಕ್ಕಾಗಿ ಆಚರಿಸಬೇಕು? ಮೂಲ ಉದ್ದೇಶ ಹಾಗೂ ವರ್ತಮಾನ ತಲ್ಲಣಗಳಿಗೆ ಸ್ಪಂದಿಸುತ್ತಿದೆಯೇ? ಪ್ರತಿ ಆಚರಣೆಗಳು ಕೇವಲ ಧಾರ್ಮಿಕತೆಯ ಸಾರವನ್ನು ಪ್ರಧಾನವಾಗಿರಿಸಿಕೊಂಡಿದ್ದಾವೆಯೇ ಅಥವಾ ಆ ಮೂಲಕ ಜನರ ಸಮಾನ ಮನೋಭೂಮಿಕೆಯನ್ನು ನಿಯಂತ್ರಿಸುತ್ತಿವೆಯೇ, ನಿಯಂತ್ರಣ ಪೂರಕವಾಗಿವೆಯೇ? ಇಲ್ಲವೇ ಮಾರಕವಾಗಿಯೇ ಎಂಬಂತಹ ಹಲವಾರು ಸೈದ್ಧಾಂತಿಕ ನಿಲುವುಗಳೊಳಗೆ ಚರ್ಚಿಸುವ ಪ್ರಯತ್ನ ಮಾಡಲಾಗಿದೆ. ಪ್ರಸ್ತುತ ಸಂದರ್ಭದಲ್ಲಿ ಅಂತಹ ಹಲವಾರು ಆಚರಣೆ ಬಹುಮಟ್ಟಿಗೆ ಗ್ರಾಮೀಣ ಪ್ರದೇಶಗಳಲ್ಲಿ ಕಂಡುಬರುತ್ತಿದ್ದು ಅವುಗಳ ಉಳಿವಿನಿಂದ ಸಾಮಾನ್ಯ ಜನರ ಆಶೋತ್ತರಗಳಿಗೆ ಸಬಲತೆ ಉಂಟಾಗುತ್ತದೆಯೇ? ಹಾಗೆ ಆದಲ್ಲಿ ಅವುಗಳ ಸ್ಥಿತ್ಯಂತರಗೊಂಡ ರೂಪವೆಂದು ಹೇಳುತ್ತಾ ಮೂಢನಂಬಿಕೆಯ ಪರಿಧಿಯೊಳಗೆ ತಳ್ಳುವ ಮೃದುಧೋರಣೆ ಕೇವಲ ನಾಟಕೀಯ ಸನ್ನಿವೇಶ ಪಡೆಯುತ್ತಿದೆಯೇ ಎಂಬುದನ್ನು ಚರ್ಚಿಸಲಾಗಿದೆ. ಆಚರಣೆಗಳು ಅಂಧಕಾರದ ಕೂಪದಿಂದ ಬಿಡಿಸಿಕೊಂಡು ಬಹುನಿರೀಕ್ಷೆಗಳಿಗೆ ಸಾಕಾರಗೊಳ್ಳುವ ಕ್ರಮ ಮತ್ತು ನಂಬಿಕೆ ಆಚರಣೆಗಳ ಒಟ್ಟು ಮೌಲ್ಯಿಕತೆಯನ್ನು ಪ್ರಶ್ನಿಸಿ ಉತ್ತರ ಕಂಡುಕೊಳ್ಳುವ ನೈಜ ಸ್ವರೂಪವನ್ನು ಪ್ರಸ್ತುತಭಾಗದಲ್ಲಿ ವಿವರಿಸಲಾಗಿದೆ.

ಸಂಸ್ಕೃತಿ ಪ್ರತಿ ಸಂಸ್ಕೃತಿಗಳೆರಡರಲ್ಲೂ ಅನೇಕ ವೈವಿಧ್ಯತೆಯನ್ನು ನಾವು ಕಾಣಬಹುದು. ನಿರ್ಲಿಪ್ತ ಮನೋವೃತ್ತಿಯಿಂದ ಬಹುಬೇಗನೆ ಬಿಡಿಸಿಕೊಳ್ಳುವುದು ಕಷ್ಟವಾದರೂ ಕೆಸರಿನಲ್ಲಿ ಕಮಲವಿದ್ದರೂ ಅದಕ್ಕೆ

ಕೆಸರಿನ, ಕೊಳಕಿನ ಯಾವ ಜಿಡ್ಡು ತಗಲುದಂತೆ ತನ್ನಷ್ಟಕ್ಕೆ ತಾನು ಉನ್ನತಿಕೆಯ ಹಂದರವನ್ನು ಬಯಸುವುದು ಕಂಡುಬರುತ್ತದೆ. ಅದೇ ರೀತಿ ನೀತಿ ನಿಯಮಗಳ ಜಂಜಾಟದಿಂದ ಪಾರಾಗಲು ಇಂದಿನ ಸಮಾಜದಲ್ಲಿ ಮನುಷ್ಯನು ಹೆಣೆದುಕೊಳ್ಳಬೇಕಾದ ತತ್ವಗಳನ್ನು ಎರ್ರಿತಾತನ ಕೆಲವು ಆಚರಣೆಗಳ ಮೂಲಕ ಗ್ರಹಿಸುವುದು ಪ್ರಸ್ತುತವೆನಿಸಿದೆ.

ಚೇಳಗುರಿಕೆ ಎರ್ರಿತಾತನ ಕುರಿತ ಸಾಂಸ್ಕೃತಿಕ ಅಧ್ಯಯನದಿಂದ ಹಲವಾರು ವಿಶೇಷತೆಗಳನ್ನು ಕಂಡುಕೊಳ್ಳಲು ಹಾಗೂ ಜನಪದರ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಅರಿಯಲು ಈ ಸಂಶೋಧನಾತ್ಮಕ ಪ್ರಬಂಧವು ಸಹಾಯಕವಾಗಿದೆ. ಅಂಥಹ ದೇವರು ದೈವಗಳ ಆಚರಣೆಯ ವಿಷಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿರುವುದು ಭಯದ ಮೂಲಕವೋ? ಭಕ್ತಿಯ ಸೆಳೆತದಿಂದಲೋ? ಇಲ್ಲವೇ ಯಾವುದೋ ಒಂದು ವರ್ಗದವರು ಒತ್ತಡಪೂರ್ವಕವಾದ ಹೇರಿದ ನೀತಿ ನಿಯಮಗಳೋ ಎನ್ನುವ ತಾತ್ವಿಕ ಚಿಂತನೆಯನ್ನು ಒಂದು ಚೌಕಟ್ಟಿನೊಳಗೆ ಪರಿಭಾವಿಸಿರುವುದು ಈ ಸಂಪ್ರಬಂಧದ ಬಹುಮುಖ್ಯ ಕಾಳಜಿ ಹಾಗೂ ಕರ್ತವ್ಯವೆಂಬಂತೆ ಮಂಡಿಸಲಾಗಿದೆ.

ಅಂತಹ ಆಚರಣೆಗಳು ಮೌಖಿಕ ಪರಂಪರೆಯ ಪಳೆಯುಳಿಕೆಗಳಿಗೆ ಹೇಗೆ ಸಾಕ್ಷಿಯಾಗಿವೆ. ಗ್ರಾಮದ ಜನರ ಸಾಮಾಜಿಕ ಬದುಕು, ಆರ್ಥಿಕ ಬದುಕುಗಳಿಗೆ ಧಾರ್ಮಿಕ ಆಚರಣೆಗಳು ಕೇಂದ್ರತ್ವ ಪಡೆದುಕೊಳ್ಳುವ ಬಗೆಯನ್ನು ಈ ಭಾಗದಲ್ಲಿ ಚಿತ್ರಿಸಲಾಗಿದ್ದು, ಜಾತಿ ಸಮುದಾಯಗಳ ಪರಸ್ಪರ ಸಮಾನತೆ ಭಾವನೆಯನ್ನು ಅರ್ಥೈಸಿಕೊಂಡ ರೀತಿಯಲ್ಲಿ ಬದುಕುತ್ತಿರುವುದೂ ಸಹ ತಿಳುವಳಿಕೆಯ ಸಂಗತಿಯಾಗಿದೆ.

ಆಚರಣೆಗಳನ್ನು ಜೀವನಾವರ್ತನ ಹಾಗೂ ವಾರ್ಷಿಕಾವರ್ತನ ಎಂದು ಅಧ್ಯಯನದ ಅನುಕೂಲಕ್ಕಾಗಿ ಮಾಡಲಾಗಿದೆಯೇ ಹೊರತು ಅವುಗಳನ್ನು ಬಿಡಿಸುವ ಕ್ರಮಕ್ಕಾಗಲೀ ಪ್ರತ್ಯೇಕಿಸುವ ಗೋಜಿಗೆ ಹೋಗುವುದು ಸಮಂಜಸವಲ್ಲ. ಏಕೆಂದರೆ ಬದುಕು ಎಂಬುವುದು ಅನೇಕ ವಿಷಯಗಳ ಸಂಕ್ರಮಣ ಸ್ಥಿತಿ ಆಗಿರುವಾಗ ಒಂದರೊಳಗೊಂದು ಬೆರತುಕೊಂಡಿರುವುದು ಆಶ್ಚರ್ಯವೂ ಅಲ್ಲ ಅಸಮಾನವೂ ಅಲ್ಲ. ಇಲ್ಲಿ ಜಾತ್ರೆಯ ಸಂದರ್ಭದಲ್ಲಿ ಸಾಮಾಜಿಕ ಸ್ಥಿತಿಗಿಂತ ಆರ್ಥಿಕ ಸ್ಥಿತಿಯೇ ಮುಖ್ಯವಾಗುತ್ತದೆ. "ಉಳ್ಳವರು ಶಿವಾಲಯ ಮಾಡುವರಯ್ಯ ನಾನೇನು ಮಾಡಲಿ ಬಡವನಯ್ಯ" ಎನ್ನುವ ಬಸವಣ್ಣನ ವಚನ ನಿಜಕ್ಕೂ ಉಳ್ಳವರ ಮತ್ತು ಇಲ್ಲದವರ ನಡುವಿನ ಭಿನ್ನಣವನ್ನು ಎತ್ತಿತೋರಿಸುತ್ತದೆ. ಹಾಗೆಂದು ಜಾತ್ರೆಯ ಕುರಿತು ಆಚರಣೆಗಳನ್ನು ತಿರಸ್ಕರಿಸುವುದು ಸಹ ಪ್ರಸ್ತುತವಲ್ಲ. ಅವುಗಳು ನಿರಂತರವಾಗಿ ದುಡಿದು ಬಳಲಿದ ಜೀವಗಳಿಗೆ ವಿಶ್ರಾಂತಿ ಪಡೆದು ಉಸಿರಾಡಲು ಸಹಾಯಕವಾಗುವುದನ್ನು ನಾವು ಅಲ್ಲಗಳೆಯಲಾಗದು. ಆದುದರಿಂದಲೇ ಹಬ್ಬ ಹರಿದಿನಗಳಲ್ಲಿ "ಸಾಲ ಮಾಡಿಯಾದರೂ ತುಪ್ಪ ತಿನ್ನು" ಎನ್ನುವ ವಿಷಯವನ್ನು ಸಾರುವುದರ ಜೊತೆಗೆ ಬಡತನದ ಬಯಕೆಗಳನ್ನು ಈಡೇರಿಸಿಕೊಳ್ಳಲು ನಾಂದಿಯಾಡುತ್ತವೆ ಮತ್ತು ತನ್ನನ್ನು ತಾನು ಸಹಚೇತನ ಪಡಿಸಿಕೊಳ್ಳಲು ಪ್ರೇರೇಪಿಸುತ್ತವೆ.

ಒಟ್ಟು ಆಚರಣೆಗಳ ಪರಿಕಲ್ಪನೆಯಿಂದಾಗಿ ಬಂಧನವೇರ್ಪಡಿಸುವುದಕ್ಕಿಂತ ಬಿಡುಗಡೆಯ ಕಡೆಗೆ ಒಲವು ತೋರಿಸಿದಂತಾದರೆ ಒಳಿತು. ಇಲ್ಲವಾದರೆ ಆಚರಣೆಗಳು ಕಗ್ಗಂಟಾಗಿ, ಕಗ್ಗಲ್ಲಾಗಿ ಕೊನೆಗೆ ಕಾರ್ಮೋಡ

ಆವರಿಸಿದಂತಾಗುತ್ತವೆ. ಅದಕ್ಕಾಗಿಯೇ ಇಂದು ಸಮುದಾಯಗಳು ನಿರ್ಲಿಪ್ತಭಾವನೆಯ ಎದುರು ತೊಡರುಗಳನ್ನು ಪರೋಕ್ಷವಾಗಿ ಕೆಲವೊಮ್ಮೆ ಪ್ರತ್ಯಕ್ಷವಾಗಿ ಎದುರಿಸುವ ಮನೋಸ್ಥಿತಿಯನ್ನು ವೈಜ್ಞಾನಿಕವಾಗಿ ಬೆಳೆಸಿಕೊಂಡಿರುವುದು ಗೋಚರಿಸುತ್ತದೆ.

ಆಧ್ಯಾತ್ಮದ ಜೀವಿಗಳಲ್ಲಿ ಎರಡು ಮನೋವೃತ್ತಿಯವರು ಕಂಡುಬರುವುದು ಸಾಮಾನ್ಯ. ಒಂದು ಸಮಾಜದ ನಿಲುವುಗಳನ್ನು ಒಪ್ಪದೇ ನೇರವಾಗಿ ಎದುರಿಸಿದವರು ಮತ್ತು ಕಣ್ಣೆದುರಿಗಿನ ಪರಿಸ್ಥಿತಿಯನ್ನು, ಎಡರು ತೊಡರುಗಳನ್ನು ಮೌನವಾಗಿ ಮೆಟ್ಟಿ ನಿಂತವರು. ಇಂಥಹವರನ್ನು ಕುರಿತ ಸಾಹಿತ್ಯ ಕೃತಿಗಳಾಗಲೀ, ಆಕರ ದಾಖಲೆಗಳಾಗಲಿ ಸಿಗುವುದು ತುಂಬ ಕಷ್ಟ. ಅಲ್ಪಸ್ವಲ್ಪ ಮಾಹಿತಿಯನ್ನು ಆಧಾರವಾಗಿಟ್ಟುಕೊಂಡು ಸ್ಥೂಲವಾದ ಚರ್ಚೆಯನ್ನು ಪ್ರಸ್ಥುತ ಭಾಗದಲ್ಲಿ ಮಂಡಿಸಲಾಗಿದೆ. ಪ್ರಬಂಧಕ್ಕೆ ಮೌಖಿಕ, ಲಿಖಿತ ಆಧಾರಗಳೇ ಮೂಲವಾದರೂ ಅದನ್ನು ಪ್ರಸ್ತುತ ಸನ್ನಿವೇಶಕ್ಕೆ ಹೊಂದಾಣಿಕೆ ಮಾಡವಾಗ ಅನೇಕ ವೈರುಧ್ಯಗಳು ಎದುರಾಗುವುದು ಹೊಸದೇನಲ್ಲ.

ಎರ್ರಿತಾತನ ಕುರಿತ ಉಲ್ಲೇಖಿತ ಕೃತಿಗಳಾದ ಪಂಡಿತನಾಗೇಶ ಶಾಸ್ತ್ರಿಯವರ ಲೀಲಾಮೃತ ಪುರಾಣ ಭಾಮಿನಿ ಷಟ್ಪದಿಯಲ್ಲಿದೆ. ಚನ್ನಬಸವೇಶ್ವರ ರಚಿಸಿದ ಶ್ರೀ ಎರ್ರಿಸ್ವಾಮಿಗಳ ಲೀಲಾ ವಿಲಾಸ, ಗಮಕ ಕಲಾನಿಧಿ ಜೋಳದರಾಶಿ ದೊಡ್ಡನಗೌಡರು ಚೇಳಗುರಿಕೆ ಎರ್ರಿಸ್ವಾಮಿಗಳ ಶಿವಮಯ ಜೀವನ ಚರಿತ್ರೆ, ಎರ್ರಿತಾತನ ಗೀತಾಂಜಲಿ, ಚೇಳಗುರಿಕೆ ಎರ್ರಿಸ್ವಾಮಿಗಳು ಎಂಬ ಕೃತಿಗಳನ್ನು ಎರ್ರಿತಾತನ ಕುರಿತ ಸಾಹಿತ್ಯ ಎನ್ನುವ ಭಾಗದಲ್ಲಿ ಚರ್ಚಿಸಲಾಗಿದೆ. ವಕ್ತೃಗಳಿಂದ ಸಂಗ್ರಹಿಸಿದ ಎರ್ರಿತಾತನ ಕುರಿತ ಹಾಡುಗಳು ಆಧುನಿಕ ವಿಡಿಯೋ ಆಡಿಯೋಗಳಲ್ಲಿ ಬಿಂಬಿತವಾಗಿರುವ ಭಕ್ತಿಗೀತೆಗಳನ್ನು ಅಧ್ಯಯನದ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಇಂತಹ ಭಕ್ತಿಗೀತೆಗಳು ಜನಪದರ ಬದುಕಿನೊಳಗೆ ಹೇಗೆ ಹಾಸುಹೊಕ್ಕಾಗಿವೆ ಮತ್ತು ಅವುಗಳು ನೆಮ್ಮದಿ ಹಾಗೂ ಭಕ್ತಿಯ ಪರಾಕಾಷ್ಠೆತೆಯನ್ನು ಮೆರೆಯಲು ಹೇಗೆ ಸಹಕಾರಿಯಾಗಿವೆ ಎಂಬುದನ್ನೂ ಸಹ ತಾತ್ವಿಕತೆಗೆ ಒಳಪಡಿಸಲಾಗಿದೆ.

ಚೇಳಗುರಿಕೆ ಎರ್ರಿತಾತ ಮತ್ತು ಇತರೆ ಸಂತ ಪರಂಪರೆ ಎಂಬ ಭಾಗದಲ್ಲಿ ಎರ್ರಿತಾತನ ಶಿಷ್ಯ ಸಂಕುಲ, ಸಮಕಾಲೀನ ಅನುಭವಗಳು ಸುತ್ತಮುತ್ತಲಿನ ಪರಿಸರದಲ್ಲಿರುವ ಗುಳೇದಗಾದಿಲಿಂಗಪ್ಪ ತಾತ, ಆದವಾನಿ ಲಕ್ಷ್ಮಮ್ಮ ಮುಂತಾದ ಅನುಭಾವಿಗಳನ್ನು ಕೇಂದ್ರೀಕರಿಸಲಾಗಿದೆ. ಮುಂದುವರೆದು ಮಂಟೇಸ್ವಾಮಿ, ಮಲೆ ಮಾದೇಶ್ವರ ಮುಂತಾದ ತಳಸಮುದಾಯಗಳ ಸಾಂಸ್ಕೃತಿಕ ವೀರರನ್ನೇ ಚರ್ಚೆಯ ಕೇಂದ್ರವಾಗಿರಿಸಿಕೊಂಡು ತೌಲನಿಕವಾಗಿ ತಾತ್ವಿಕತೆಯ ಹಂದರದೊಳಗೆ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

ಪವಾಡಗಳು ಜನಪದರ ಧಾರ್ಮಿಕ ಭಾವನೆಗಳಿಗಷ್ಟೆ ಅಲ್ಲ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗೆ ಹೇಗೆ ಸಹಕರಿಸಿವೆ ಎಂಬುದು ಸಹ ಮುಖ್ಯವಾಗುತ್ತದೆ. ಅವುಗಳು ಇಂದಿನ ವೈಜ್ಞಾನಿಕ ಯುಗಕ್ಕೆ ಸವಾಲಾಗಿ ಕಂಡುಬರುತ್ತವೆ ನಿಜ. ಆದರೆ ಅವುಗಳನ್ನು ನಂಬುವುದು ಒಂದು ರೀತಿಯ ಮೂಢನಂಬಿಕೆಯಂತಾದರೂ ಭಕ್ತ ಜನತೆ ಮಾತ್ರ ಧಾರ್ಮಿಕ ನಿಷ್ಠೆಯಿಂದ ತಮ್ಮ ಮನಸ್ಸಿನ ಬಯಕೆಗಳನ್ನು ಈಡೇರಿಸಿಕೊಂಡು

ಆಹ್ಲಾದಿಸುವುದು ಸಾಮಾನ್ಯ. ಪವಾಡಗಳ ಹಿಂದಿನ ಸಿದ್ಧಾಂತವೇನೇ ಯಿರಲಿ ನಂಬಲಿ ನಂಬದಿರಲಿ ಭಕ್ತರಿಗೆ ಪೂರಕವಾಗಿರುವುದಂತೂ ಸಂತೋಷದ ಸಂಗತಿ. ಹಾಗೆಂದು ಪವಾಡಗಳು ಸತ್ಯವೋ ಅಸತ್ಯವೋ ಎಂಬ ವಾದವು ಪ್ರಸ್ತುತ ಅಧ್ಯಯನದ ಕೇಂದ್ರವಲ್ಲ.

ಗರ್ಭ ಫಲ ನೀಡುವುದು, ಸತ್ತ ಎಮ್ಮೆ ಕರುವನ್ನು ಬದುಕಿಸುವುದು, ಬರಗಾಲದಲ್ಲಿ ಮಳೆ ಬರಿಸುವುದು, ಕೊರತೆ ನೀಗಿಸುವುದು, ಬಡತನ ಹೋಗಲಾಡಿಸುವುದು ಇವು ಎಲ್ಲಾ ಸಿದ್ಧಾಂತ, ತತ್ವ, ಧರ್ಮಶಾಸ್ತ್ರಗಳನ್ನು ಮೀರಿದ್ದು ಸಾಮಾಜಿಕ ಸಮುದಾಯದಗಳಿಗೆ ಉಪಯುಕ್ತವಾಗಿವೆ? ಅವು ನಿರಂತರ ಮೌಲಿಕತೆಗಿಂತ ಮನುಷ್ಯತ್ವಕ್ಕೆ ಹೇಗೆ ಸಮಾಜ ಮುಖಿಯಾದ ಧೋರಣೆಯನ್ನು ಹೊಂದಿವೆ ಎನ್ನುವ ಹಲವಾರು ಸೈದ್ಧಾಂತಿಕ ಗುದ್ದಾಟಗಳನ್ನು ವಿದ್ವಾಂಸರ ಗ್ರಹಿಕೆಗಳನ್ನು ಆಧರಿಸಿ ಚರ್ಚಿಸಲಾಗಿದೆ.

ಎರ್ರಿತಾತ ಮಠದಿಂದ ಗ್ರಾಮಕ್ಕೆ ಸುತ್ತ ಮುತ್ತಲಿನ ಅನೇಕ ಪ್ರದೇಶದ ಮಕ್ಕಳಿಗೆ ಉಚಿತ ಶಾಲಾ ವ್ಯವಸ್ಥೆ, ಪ್ರತಿದಿನ ದಾಸೋಹದ ಪದ್ಧತಿ, ಆರೋಗ್ಯ, ಸೇವಾ ಸೌಲಭ್ಯಗಳಿಗೆ ಮಠದ ಹಣದ ವ್ಯವಹಾರ ಹೇಗೆ ಸಹಕಾರಿಯಾಗಿದೆ. ವಿಶ್ರಾಂತಿ ಗೃಹಗಳು, ಗ್ರಾಮೀಣ ಭಾಗದ ಜನರ ಶುಭಕಾರ್ಯಗಳಿಗೆ ಅನುಕೂಲವಾಗುವ ಕಲ್ಯಾಣ ಮಂಟಪ, ಆರೋಗ್ಯದ ಬಗೆಗಿನ ಕಾಳಜಿಗಳನ್ನು ಕುರಿತು ಚರ್ಚಿಸಲಾಗಿದೆ. ಕೊನೆಯ ಭಾಗದಲ್ಲಿ ವಕ್ತೃಗಳ ವಿವರ ನೀಡುವುದರ ಜೊತೆಗೆ ಎರ್ರಿತಾತನ ಪವಾಡಗಳ ಚಿತ್ರಗಳನ್ನು ಮತ್ತು ಮಠದ ಕೆಲವು ಚಿತ್ರಗಳನ್ನು ಅಧ್ಯಯನಕ್ಕೆ ಪೂರಕವಾಗಿ ಚಿತ್ರಿಸಲಾಗಿದೆ. ಪ್ರಸ್ತುತ ಸಂಶೋಧನಾ ಪ್ರಬಂಧವನ್ನು ದೊರೆತ ಮಾಹಿತಿಯನ್ನೇ ಸೈದ್ಧಾಂತಿಕ ನಿಲುವುಗಳೊಂದಿಗೆ, ತಾತ್ವಿಕ ಚೌಕಟ್ಟು ಏರ್ಪಡಿಸಿಕೊಂಡು ಕಟ್ಟಿಕೊಡಲಾಗಿದೆ.

# ವಕ್ತೃ ವಿವರ

| ಕ್ರ.ಸಂ. | ಹೆಸರು | ವಯಸ್ಸು | ಜಾತಿ | ಊರು | ತಾಲ್ಲೂಕು | ಜಿಲ್ಲೆ | ವೃತ್ತಿ |
|---|---|---|---|---|---|---|---|
| ೦೧. | ಬಾಳೇಗೌಡ | ೫೮ | ವೀರಶೈವ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ಮಠಾಧ್ಯಕ್ಷರು |
| ೦೨. | ಪೊಂಪನಗೌಡ | ೬೦ | ವೀರಶೈವ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ಮಠದ ಸದಸ್ಯರು |
| ೦೩. | ಮಲ್ಲಿಕಾರ್ಜುನಗೌಡ | ೬೮ | ವೀರಶೈವ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ಮಠದ ಸದಸ್ಯರು |
| ೦೪. | ಎರ್ರಿಸ್ವಾಮಿ | ೫೫ | ವೀರಶೈವ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ಮಠದ ಸದಸ್ಯರು |
| ೦೫. | ಎರ್ರಪ್ಪ | ೮೦ | ಮಾದಿಗ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೦೬. | ಹನುಮಕ್ಕ | ೭೦ | ಮಾದಿಗ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೦೭. | ಹನುಮೇಶಪ್ಪ | ೫೫ | ಛಲವಾದಿ | ರಾಮನಗರ | ಬಳ್ಳಾರಿ | ಬಳ್ಳಾರಿ | ಬುದ್ಧಿಜೀವಿಗಳು |
| ೦೮. | ನರಸಪ್ಪ | ೪೫ | ಛಲವಾದಿ | ರಾಮನಗರ | ಬಳ್ಳಾರಿ | ಬಳ್ಳಾರಿ | ಸಮಾಜ ಸೇವಕರು |
| ೦೯. | ಸುರೇಶ್‌ಕುಮಾರ್ | ೩೨ | ಮಾದಿಗ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ವಕೀಲರು |
| ೧೦. | ಅನಿಲ್‌ಕುಮಾರ್ | ೩೦ | ಮಾದಿಗ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ಸಮಾಜ ಸೇವಕರು |
| ೧೧. | ರಂಜಿತ್ ಕುಮಾರ್ | ೨೭ | ಮಾದಿಗ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ಬಿ.ಕಾಂ |

| | | | | | | | |
|---|---|---|---|---|---|---|---|
| ೧೨. | ಕುಬೇರ | ೩೫ | ನಾಯಕ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ಸಮಾಜ ಸೇವಕರು |
| ೧೩. | ಮಲ್ಲೇಶ್ | ೩೦ | ಮಾದಿಗ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ಕೆ.ಎಸ್.ಆರ್.ಟಿ.ಸಿ |
| ೧೪. | ರಂಗನಾಥ್ | ೨೮ | ಛಲವಾದಿ | ದೇವಸಮುದ್ರ | ಮೊಳಕಾಲ್ಮೂರು | ಚಿತ್ರದುರ್ಗ | ಬಿ.ಎ., ಬಿ.ಇಡಿ |
| ೧೫. | ವಿರೂಪಾಕ್ಷಿ | ೨೮ | ಮಾದಿಗ | ಕೊಳಗಲ್ | ಬಳ್ಳಾರಿ | ಬಳ್ಳಾರಿ | ಎಲ್.ಎಲ್.ಬಿ. |
| ೧೬. | ಶ್ರೀಶೈಲ ಬಿ. | ೨೭ | ನಾಯಕ | ದರುರ್ | ಶಿರುಗುಪ್ಪ | ಬಳ್ಳಾರಿ | ಉಪನ್ಯಾಸಕರು |
| ೧೭. | ರಾಮಯ್ಯ | ೨೭ | ಮಾದಿಗ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ಬಿ.ಎ., ಬಿ.ಇಡಿ. |
| ೧೮. | ಹನುಮಂತಪ್ಪ | ೩೦ | ಮಾದಿಗ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ಕೆ.ಎಸ್.ಆರ್.ಟಿ.ಸಿ |
| ೧೯. | ಎರ್ರಿಸ್ವಾಮಿ | ೩೩ | ಮಾದಿಗ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ಬಿ.ಎ., ಬಿ.ಇಡಿ. |
| ೨೦. | ದೇವೇಂದ್ರ | ೩೨ | ಮಾದಿಗ | ನಾಗೇನಹಳ್ಳಿ | ಬಳ್ಳಾರಿ | ಬಳ್ಳಾರಿ | ಉಪನ್ಯಾಸಕರು |
| ೨೧. | ವಾಗೇಶ್ | ೨೮ | ಮಾದಿಗ | ನಾಗೇನಹಳ್ಳಿ | ಬಳ್ಳಾರಿ | ಬಳ್ಳಾರಿ | ವಕೀಲರು |
| ೨೨. | ಕುಮಾರ್ | ೨೮ | ಮಾದಿಗ | ದೇವಿನಗರ | ಬಳ್ಳಾರಿ | ಬಳ್ಳಾರಿ | ವಕೀಲರು |
| ೨೩. | ಶಿವರಾಂ | ೨೯ | ಮಾದಿಗ | ಶ್ರೀಧರಗಡ್ಡೆ | ಬಳ್ಳಾರಿ | ಬಳ್ಳಾರಿ | ವಕೀಲರು |
| ೨೪. | ಜಡೆಪ್ಪ | ೭೦ | ಜಂಗಮರು | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ವ್ಯಾಪಾರಸ್ಥರು |
| ೨೫. | ನಾಗಣ್ಣ | ೬೫ | ಕುಂಬಾರ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ವ್ಯಾಪಾರ |

| | | | | | | | |
|---|---|---|---|---|---|---|---|
| ೨೬. | ಅಂಜಿನಪ್ಪ | ೫೫ | ನಾಯಕ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ಸಮಾಜ ಸೇವಕ |
| ೨೭. | ವೆಂಕಟೇಶ್ | ೫೦ | ನಾಯಕ | ಶಿವಪುರ | ಬಳ್ಳಾರಿ | ಬಳ್ಳಾರಿ | ಸಮಾಜ ಸೇವಕ |
| ೨೮. | ಚಿತ್ರಯ್ಯ | ೪೦ | ನಾಯಕ | ಕೊಳಗಲ್ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೨೯. | ದುರುಗಣ್ಣ | ೬೦ | ನೇಕಾರ | ಕೊಳಗಲ್ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೩೦. | ಶಿವಪ್ಪ | ೫೦ | ಛಲವಾದಿ | ಕೊಳಗಲ್ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೩೧. | ಗೋವಿಂದಪ್ಪ | ೭೮ | ಬಡಿಗೇರ್ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೩೨. | ಸಿದ್ದಣ್ಣ | ೮೦ | ಬಡಿಗೇರ್ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೩೩. | ಮುತ್ತಣ್ಣ | ೪೫ | ಮಾದಿಗ | ಮೋಕ | ಬಳ್ಳಾರಿ | ಬಳ್ಳಾರಿ | ಸಮಾಜ ಸೇವೆ |
| ೩೪. | ಅಂಬಣ್ಣನಾಯಕ | ೩೦ | ನಾಯಕ | ದರುರ್ | ಶಿರುಗುಪ್ಪ | ಬಳ್ಳಾರಿ | ಚಿತ್ರಕಲೆ ಶಿಕ್ಷಕರು |
| ೩೫. | ಬಸವರಾಜ್‌ನಾಯಕ | ೨೮ | ನಾಯಕ | ದರುರ್ | ಶಿರುಗುಪ್ಪ | ಬಳ್ಳಾರಿ | ಬಿ.ಎ., ಬಿ.ಇಡಿ. |
| ೩೬. | ರಾಜೇಶ್ | ೨೫ | ನಾಯಕ | ಎಮ್ಮಿಗನೂರ್ | ಬಳ್ಳಾರಿ | ಬಳ್ಳಾರಿ | ಎಂ.ಎ |
| ೩೭. | ಸುಂಕಣ್ಣ | ೮೦ | ಮಾದಿಗ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೩೮. | ಓಂಕಾರಿ | ೩೦ | ಕುರುಬ | ಶಿರವಾರ | ಬಳ್ಳಾರಿ | ಬಳ್ಳಾರಿ | ಎಂ.ಎ.,ಬಿ.ಇಡಿ. |
| ೩೯. | ನಾಗರಾಜ | ೬೫ | ಕುರುಬ | ಶಿರವಾರ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |

| | | | | | | | |
|---|---|---|---|---|---|---|---|
| ೪೦. | ಹುಲುಗಣ್ಣ | ೬೦ | ಕುರುಬ | ಶಿರವಾರ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೪೧. | ಶಂಭುಲಿಂಗ | ೨೦ | ಕುರುಬ | ಶಿರವಾರ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೪೨. | ಕೃಷ್ಣಪ್ಪ | ೭೦ | ಛಲವಾದಿ | ಬೊಮ್ಮನಹಾಳ್ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೪೩. | ಮಹಾದೇವಪ್ಪ | ೫೮ | ಛಲವಾದಿ | ಬೊಮ್ಮನಹಾಳ್ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೪೪. | ಪುಟ್ಟಸ್ವಾಮಿ | ೬೩ | ಛಲವಾದಿ | ಬೊಮ್ಮನಹಾಳ್ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೪೫. | ವೀರೇಂದ್ರಸ್ವಾಮಿ | ೬೦ | ವೀರಶೈವ | ಬೊಮ್ಮನಹಾಳ್ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೪೬. | ನಾಗೇಶ್ | ೫೦ | ವೀರಶೈವ | ಬೊಮ್ಮನಹಾಳ್ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೪೭. | ರಾಜೇಂದ್ರಪ್ಪ | ೪೫ | ವೀರಶೈವ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೪೮. | ಪಂಪಾಪತಿ | ೩೮ | ವೀರಶೈವ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯಾಪಾರ |
| ೪೯. | ಖಾನಾಸಾಬ್ | ೬೦ | ಮುಸ್ಲಿಂ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯಾಪಾರ |
| ೫೦. | ತಾತಯ್ಯ | ೩೦ | ಮಾದಿಗ | ಮೋಕ | ಬಳ್ಳಾರಿ | ಬಳ್ಳಾರಿ | ಜವಾನ |
| ೫೧. | ಶಿವರಾಮ್ | ೩೦ | ಮಾದಿಗ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯಾಪಾರ |
| ೫೨. | ಗಾದಿಲಿಂಗ | ೫೮ | ಛಲವಾದಿ | ಸಿಡಗಿನಮಳೆ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೫೩. | ಗಂಗಪ್ಪ | ೪೫ | ನೇಕಾರ | ಮೀನಳ್ಳಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |

| | | | | | | | |
|---|---|---|---|---|---|---|---|
| ೫೪. | ಹನುಮಪ್ಪ | ೪೦ | ಮಾದಿಗ | ಜೋಳದರಾಶಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೫೫. | ಮಾದೇವಿ | ೫೫ | ಮಾದಿಗ | ಜೋಳದರಾಶಿ | ಬಳ್ಳಾರಿ | ಬಳ್ಳಾರಿ | ಶಿಕ್ಷಕಿ |
| ೫೬. | ಮುಕ್ಕಣ್ಣ | ೬೫ | ಮಾದಿಗ | ಜೋಳದರಾಶಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೫೭. | ಮಾರೆಮ್ಮ | ೭೦ | ಮಾದಿಗ | ಜೋಳದರಾಶಿ | ಬಳ್ಳಾರಿ | ಬಳ್ಳಾರಿ | ವ್ಯಾಪಾರ |
| ೫೮. | ದೇವಣ್ಣ | ೨೫ | ಮಾದಿಗ | ಜೋಳದರಾಶಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೫೯. | ಕೊಂಕಿ ರಂಗಣ್ಣ | ೬೫ | ಮಾದಿಗ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೬೦. | ಚೌಡಿಕೆ ಉಮಾಪತಿ | ೭೦ | ಮಾದಿಗ | ಜೋಳದರಾಶಿ | ಬಳ್ಳಾರಿ | ಬಳ್ಳಾರಿ | ಚೌಡಿಕೆ ವೃತ್ತಿ |
| ೬೧. | ಕೊಲ್ಲಣ್ಣ | ೮೦ | ಸುಡುಗಾಡು ಸಿದ್ಧರು | ಬ್ಯಾಲಚೆಂಚಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೬೨. | ಮಹೇಶ್ | ೫೫ | ಮಾದಿಗ | ಬ್ಯಾಲಚೆಂಚಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೬೩. | ರೇವಣ್ಣ ಸಿದ್ದಪ್ಪ | ೬೦ | ಕೊರಚ | ಬ್ಯಾಲಚೆಂಚಿ | ಬಳ್ಳಾರಿ | ಬಳ್ಳಾರಿ | ಪುಟ್ಟಿ ನೇಯುವುದು |
| ೬೪. | ವೇಣುಗೋಪಾಲ | ೫೦ | ಜಂಗಮ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೬೫. | ಕಾಮಪ್ಪ | ೪೮ | ನಾಯಕ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೬೬. | ಮುದುಕಪ್ಪ | ೬೦ | ಛಲವಾದಿ | ಗೋಟೂರು | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೬೭. | ಮಹಾಂತಗೌಡ | ೭೦ | ವೀರಶೈವ | ಗೋಟೂರು | ಬಳ್ಳಾರಿ | ಬಳ್ಳಾರಿ | ವ್ಯವಸಾಯ |

| | | | | | | | |
|---|---|---|---|---|---|---|---|
| ೬೮. | ಪರಮೇಶ್ವರಪ್ಪ | ೬೫ | ವೀರಶೈವ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯಾಪಾರ |
| ೬೯. | ರಾಘವೇಂದ್ರ | ೫೦ | ಮಾದಿಗ | ಬೇಡಿಹಳ್ಳಿ | ಬಳ್ಳಾರಿ | ಬಳ್ಳಾರಿ | ವ್ಯಾಪಾರ |
| ೭೦. | ಈರಣ್ಣ | ೭೦ | ಮಾದಿಗ | ಬೇಡಿಹಳ್ಳಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೭೧. | ಸುಮಂಗಲಮ್ಮ | ೬೦ | ವೀರಶೈವ | ಮೋಕ | ಬಳ್ಳಾರಿ | ಬಳ್ಳಾರಿ | ಮನೆಕೆಲಸ |
| ೭೨. | ಅಕ್ಕಮ್ಮ | ೫೦ | ವೀರಶೈವ | ಮೋಕ | ಬಳ್ಳಾರಿ | ಬಳ್ಳಾರಿ | ಮನೆಕೆಲಸ |
| ೭೩. | ಗೌರಮ್ಮ | ೪೮ | ಮಾದಿಗ | ಬಿಡಿಹಳ್ಳಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೭೪. | ಬಾಲಜ್ಜ | ೫೩ | ಛಲವಾದಿ | ಗೋಟೂರು | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೭೫. | ಕಾಮಪ್ಪ | ೬೦ | ನೇಕಾರ | ಬ್ಯಾಲಚೆಂಚಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೭೬. | ಮಾರಣ್ಣ | ೭೦ | ನಾಯಕ | ಕೆ.ಕೆ.ಹಾಳ್ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೭೭. | ಹೊನ್ನೂರ್‌ಸಾಬ್ | ೩೩ | ಮುಸ್ಲಿಂ | ರಾವಿಹಾಳ್ | ಶಿರುಗುಪ್ಪ | ಬಳ್ಳಾರಿ | ಎಂ.ಎ, ಎಂ.ಫಿಲ್ |
| ೭೮. | ಉಮಾಕಾಂತಣ್ಣ | ೭೦ | ದಾಸರ್ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೭೯. | ಏಕಾಂತಗೌಡ | ೬೫ | ವೀರಶೈವ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯಾಪಾರ |
| ೮೦. | ಮಲ್ಲಪ್ಪ ಬ್ಯಾಗಾರ್ | ೬೦ | ಛಲವಾದಿ | ಮೋಕ | ಬಳ್ಳಾರಿ | ಬಳ್ಳಾರಿ | ಸಮಾಜ ಸೇವೆ |
| ೮೧. | ಗೌರಮ್ಮ | ೬೦ | ದಾಸರು | ಬ್ಯಾಲಚೆಂಚಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |

| | | | | | | | |
|---|---|---|---|---|---|---|---|
| ೮೨. | ನಾರಾಯಣ | ೬೫ | ನಾಯಕ | ಗೋಟೂರು | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೮೩. | ಚಂದ್ರಶೇಖರ | ೫೦ | ಕುಂಬಾರ | ಮೋಕ | ಬಳ್ಳಾರಿ | ಬಳ್ಳಾರಿ | ಕುಂಬಾರಿಕೆ |
| ೮೪. | ತಿಮ್ಮಪ್ಪ | ೫೮ | ನೇಕಾರ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ವ್ಯಾಪಾರ |
| ೮೫. | ರಾಮಣ್ಣ | ೩೮ | ಸುಡುಗಾಡು ಸಿದ್ದ | ಕೂಡ್ಲಿಗಿ | ಕೂಡ್ಲಿಗಿ | ಬಳ್ಳಾರಿ | ವ್ಯವಸಾಯ |
| ೮೬. | ಬಸವರಾಜ್ | ೭೭ | ವೀರಶೈವ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯಾಪಾರ |
| ೮೭. | ಹೊನ್ನೂರಪ್ಪ | ೮೦ | ಪಿಂಜಾರ | ಗೋಟೂರು | ಬಳ್ಳಾರಿ | ಬಳ್ಳಾರಿ | ವ್ಯಾಪಾರ |
| ೮೮. | ಶಿವರಂಜನಿ | ೪೦ | ನಾಯಕ | ಬಂಡ್ರಿ | ಕೂಡ್ಲಿಗಿ | ಬಳ್ಳಾರಿ | ಗೃಹಿಣಿ |
| ೮೯. | ಲಕ್ಷ್ಮೀದೇವಿ | ೫೦ | ಲಂಬಾಣಿ | ಬಂಡ್ರಿ | ಕೂಡ್ಲಿಗಿ | ಬಳ್ಳಾರಿ | ಗೃಹಿಣಿ |
| ೯೦. | ಗುಂಡಮ್ಮ | ೬೦ | ಜಂಗಮ | ಮೋಕ | ಬಳ್ಳಾರಿ | ಬಳ್ಳಾರಿ | ಗೃಹಿಣಿ |
| ೯೧. | ಗಂಗಾಧರ | ೭೦ | ಬಾರಿಕೇರು | ಗೊಟೂರು | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೯೨. | ತಿಮ್ಮಕ್ಕ | ೬೮ | ಬಾರಿಕೇರು | ಜೋಳದರಾಶಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೯೩. | ಮೇಘನಾಥ | ೪೦ | ಬಾರಿಕೇರು | ಜೋಳದರಾಶಿ | ಬಳ್ಳಾರಿ | ಬಳ್ಳಾರಿ | ಶಿಕ್ಷಕ |
| ೯೪. | ಮಲ್ಲಿಕಾರ್ಜುನಪ್ಪ | ೩೮ | ನೇಕಾರ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೯೫. | ಉಮೇಶ | ೪೫ | ನಾಯಕ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |

| | | | | | | | |
|---|---|---|---|---|---|---|---|
| ೯೬. | ಬಾಲಣ್ಣ | ೫೦ | ದಾಸರು | ಮೋಕ | ಬಳ್ಳಾರಿ | ಬಳ್ಳಾರಿ | ವ್ಯಾಪಾರ |
| ೯೭. | ಉರುಕುಂದಪ್ಪ | ೬೦ | ಕುಂಬಾರ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೯೮. | ಹುಲುಗಮ್ಮ | ೫೮ | ಕೊರಚ | ಬ್ಯಾಲಚಿಂತ | ಬಳ್ಳಾರಿ | ಬಳ್ಳಾರಿ | ಗೃಹಿಣಿ |
| ೯೯. | ಮೋನಪ್ಪ | ೫೦ | ಅಗಸ | ಬ್ಯಾಲಚಿಂತ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೧೦೦. | ಹುಲುಗಣ್ಣ | ೫೫ | ಅಗಸ | ಬ್ಯಾಲಚಿಂತ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೧೦೧. | ಎರ್ರಿಸ್ವಾಮಿ | ೬೦ | ಮಾದಿಗ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೧೦೨. | ರಾಜಶೇಖರ | ೫೦ | ಮಾದಿಗ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೧೦೩. | ಕರ್ರೆಪ್ಪ | ೨೦ | ಮಾದಿಗ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ಬಿ.ಎ. |
| ೧೦೪. | ಸುಂಕಣ್ಣ | ೪೮ | ಛಲವಾದಿ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೧೦೫. | ಭೀಮಕ್ಕ | ೫೦ | ಮಾದಿಗ | ಮೀನಳ್ಳಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೧೦೬. | ಅನಂತಲಕ್ಷ್ಮಿ | ೫೦ | ಅಗಸ | ಮೋಕ | ಬಳ್ಳಾರಿ | ಬಳ್ಳಾರಿ | ಶಿಕ್ಷಕಿ |
| ೧೦೭. | ಭೂದೇವಿ | ೪೪ | ಮಾದಿಗ | ನಾಗೇನಹಳ್ಳಿ | ಬಳ್ಳಾರಿ | ಬಳ್ಳಾರಿ | ಗೃಹಿಣಿ |
| ೧೦೮. | ಈಶ್ವರಮ್ಮ | ೫೦ | ಮಾದಿಗ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೧೦೯. | ಮೀನಾಕ್ಷಮ್ಮ | ೬೦ | ಛಲವಾದಿ | ನಾಗೇನಹಳ್ಳಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |

| | | | | | | | |
|---|---|---|---|---|---|---|---|
| ೧೧೦. | ರಾಮಲಿಂಗಮ್ಮ | ೪೫ | ಮಾದಿಗ | ಬೀಡಿಹಳ್ಳಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೧೧೧. | ಬಸಯ್ಯ | ೬೦ | ಮಾದಿಗ | ತಿಮ್ಮನಹಳ್ಳಿ | ಕೂಡ್ಲಿಗಿ | ಬಳ್ಳಾರಿ | ವ್ಯವಸಾಯ |
| ೧೧೨. | ಲಿಂಗಪ್ಪ | ೭೦ | ನಾಯಕ | ತಿಮ್ಮನಹಳ್ಳಿ | ಕೂಡ್ಲಿಗಿ | ಬಳ್ಳಾರಿ | ವ್ಯವಸಾಯ |
| ೧೧೩. | ಬೊಮ್ಮಯ್ಯ | ೬೦ | ನಾಯಕ | ರಾಮಸಾಗರಹಟ್ಟಿ | ಕೂಡ್ಲಿಗಿ | ಬಳ್ಳಾರಿ | ವ್ಯವಸಾಯ |
| ೧೧೪. | ಕೆಂಚಪ್ಪ | ೭೦ | ದಾಸರು | ತಿಮ್ಮನಹಳ್ಳಿ | ಕೂಡ್ಲಿಗಿ | ಬಳ್ಳಾರಿ | ವ್ಯವಸಾಯ |
| ೧೧೫. | ತಿಂದಪ್ಪ | ೬೦ | ದಾಸರು | ಮೋಕ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೧೧೬. | ಅನ್ವರುಲ್ಲಾ | ೫೦ | ಮುಸ್ಲಿಂ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯಾಪಾರ |
| ೧೧೭. | ಜಬ್ಬೀರ್‌ಖಾನ್ | ೬೦ | ಮುಸ್ಲಿಂ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯಾಪಾರ |
| ೧೧೮. | ತಿಮ್ಮರೆಡ್ಡಿ | ೬೦ | ವೀರಶೈವ | ಗೋಟೂರು | ಬಳ್ಳಾರಿ | ಬಳ್ಳಾರಿ | ವ್ಯಾಪಾರ |
| ೧೧೯. | ತಿಪ್ಪಮ್ಮ | ೬೦ | ಮಾದಿಗ | ಬಿಡಿಹಳ್ಳಿ | ಬಳ್ಳಾರಿ | ಬಳ್ಳಾರಿ | ಗೃಹಿಣಿ |
| ೧೨೦. | ಕೆಂಗಪ್ಪ | ೫೦ | ಛಲವಾದಿ | ಗೋಟೂರು | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೧೨೧. | ಹುಚ್ಚರಾಯ | ೬೦ | ವೀರಶೈವ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯಾಪಾರ |
| ೧೨೨. | ಅನ್ನಪೂರ್ಣ | ೪೦ | ಭೋವಿ | ಮೋಕ | ಬಳ್ಳಾರಿ | ಬಳ್ಳಾರಿ | ಶಿಕ್ಷಕಿ |
| ೧೨೩. | ರುದ್ರಮ್ಮ | ೩೫ | ಮಾದಿಗ | ಬೀಡಿಹಳ್ಳಿ | ಬಳ್ಳಾರಿ | ಬಳ್ಳಾರಿ | ವಕೀಲರು |

| | | | | | | | |
|---|---|---|---|---|---|---|---|
| ೧೨೪. | ನಂದಮ್ಮ | ೬೦ | ಛಲವಾದಿ | ಗೋಟೂರು | ಬಳ್ಳಾರಿ | ಬಳ್ಳಾರಿ | ಗೃಹಿಣಿ |
| ೧೨೫. | ಆಂಜನೇಯ | ೬೫ | ಕಾಡುಗೊಲ್ಲ | ನಾಗೇನಹಳ್ಳಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೧೨೬. | ನುಂಕಪ್ಪ | ೭೦ | ಕಾಡುಗೊಲ್ಲ | ನಾಗೇನಹಳ್ಳಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೧೨೭. | ಮರಿಸ್ವಾಮಿ | ೬೦ | ಮಾದಿಗ | ಮೋಕ | ಬಳ್ಳಾರಿ | ಬಳ್ಳಾರಿ | ಜಿಲ್ಲಾ ಪಂಚಾಯತ್ |
| ೧೨೮. | ಗಂಗಪ್ಪ | ೭೮ | ಮಾದಿಗ | ಬೀಡಿಹಳ್ಳಿ | ಬಳ್ಳಾರಿ | ಬಳ್ಳಾರಿ | ಗೃಹಿಣಿ |
| ೧೨೯. | ತುಪ್ಪದಮ್ಮ | ೬೦ | ಛಲವಾದಿ | ಮೋಕ | ಬಳ್ಳಾರಿ | ಬಳ್ಳಾರಿ | ಗ್ರಾಮಪಂಚಾಯತಿ ಸದಸ್ಯರು |
| ೧೩೦. | ಕಾಡಪ್ಪ | ೫೮ | ಮಾದಿಗ | ಬೀಡಿಹಳ್ಳಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೧೩೧. | ಗಿಡ್ಡಣ್ಣ | ೫೦ | ಛಲವಾದಿ | ಮೋಕ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೧೩೨. | ಭೀಮಪ್ಪ | ೬೦ | ಮಾದಿಗ | ಗೋಟೂರು | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೧೩೩. | ಬುಡ್ಡಣ್ಣ | ೫೦ | ಮಾದಿಗ | ಮೋಕ | ಬಳ್ಳಾರಿ | ಬಳ್ಳಾರಿ | ಸಮಾಜ ಸೇವಕ |
| ೧೩೪. | ಮರಲಿಂಗಪ್ಪ | ೫೦ | ವೀರಶೈವ | ಚೇಳಗುರಿಕೆ | ಬಳ್ಳಾರಿ | ಬಳ್ಳಾರಿ | ವ್ಯಾಪಾರ |
| ೧೩೫. | ಮಾದೇಶ | ೬೫ | ಬಡಿಗೇರ್ | ಮೋಕ | ಬಳ್ಳಾರಿ | ಬಳ್ಳಾರಿ | ಬಡಿಗತನ |
| ೧೩೬. | ನಿರಂಜನಸ್ವಾಮಿ | ೭೦ | ಜಂಗಮ | ಮೋಕ | ಬಳ್ಳಾರಿ | ಬಳ್ಳಾರಿ | ಪಂಚಾಂಗ |

| | | | | | | | |
|---|---|---|---|---|---|---|---|
| ೧೩೭. | ಕುರುಕುಂದಪ್ಪ | ೭೮ | ದಾಸರು | ಬೀಡಿಹಳ್ಳಿ | ಬಳ್ಳಾರಿ | ಬಳ್ಳಾರಿ | ವ್ಯಸಾಯ |
| ೧೩೮. | ವೀರಣ್ಣ | ೫೫ | ಉಪ್ಪಾರ | ಮೀನಳ್ಳಿ | ಬಳ್ಳಾರಿ | ಬಳ್ಳಾರಿ | ಸಮಾಜಸೇವೆ |
| ೧೩೯. | ಕೊಲ್ಲಾರಪ್ಪ | ೬೫ | ಮಾದಿಗ | ಜೋಳದರಾಶಿ | ಬಳ್ಳಾರಿ | ಬಳ್ಳಾರಿ | ವ್ಯವಸಾಯ |
| ೧೪೦. | ಗುರ್ರಪ್ಪ | ೪೪ | ನಾಯಕ | ಹಗರಿ | ಬಳ್ಳಾರಿ | ಬಳ್ಳಾರಿ | ವಕೀಲ |

## ಆಧಾರ ಗ್ರಂಥಗಳು


೧. ಅಮರೇಶ ನುಗಡೋಣಿ, ೨೦೦೨, (ಸಂ). ಶೂನ್ಯ ಸಂಪಾದನೆಗಳು, ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಅಮರೇಶ ನುಗಡೋಣಿ, ೨೦೦೩, ಹೈದರಾಬಾದ್ ಕರ್ನಾಟಕದ ಹಾಡು-ಪಾಡು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಎನ್‌ಸೈಕ್ಲೋಪಿಡಿಯಾ, ಬ್ರಿಟನಿಕಾ ವ್ಯಾಲೂಮ್, ೧೬.

೪. ಕಲಬುರ್ಗಿ ಎಂ.ಎಂ, ೧೯೯೮, ಮಾರ್ಗ-೩, ಕರ್ನಾಟಕ ಬುಕ್ ಏಜೆನ್ಸಿ ಇಲಾಖೆ, ಬೆಂಗಳೂರು.

೫. ಕಲಬುರ್ಗಿ ಎಂ.ಎಂ, ೧೯೯೩, (ಸಂ), ಬಸವಣ್ಣನವರ ವಚನ ಸಂಪುಟ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೬. ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೭. ಕರಿಯಪ್ಪ ಜೆ, ಬಳ್ಳಾರಿ ಜಿಲ್ಲೆಯ ಆವಧೂತರು, ಪಿಎಚ್.ಡಿ. ಅಪ್ರಕಟಿತ ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ಕಾಳೇಗೌಡ ನಾಗವಾರ (ಸಂ), ೨೦೦೦, ಜೀಶಂಪ ಅವರ ಜಾನಪದ ಬರಹಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೯. ಚನ್ನಬಸವೇಶ್ವರ ಸಿ.ವ, ೧೯೩೨, ಚೇಳಗುರಿಕೆ ಎರ್ರಿಸ್ವಾಮಿಗಳ ಲೀಲಾವಿಲಾಸ, ಶ್ರೀ ಎರ್ರಿಸ್ವಾಮಿ ಜೀವಸಮಾಧಿ ಟ್ರಸ್ಟ್ ಕಮಿಟಿ, ಚೇಳಗುರಿಕೆ.

೯. ಚಂದ್ರಶೇಖರ ಕಂಬಾರ, ೨೦೦೪, ದೇಶೀಯ ಚಿಂತನೆ, ಅಂಕಿತ ಪ್ರಕಾಶನ, ಬೆಂಗಳೂರು.

೧೦. ಚಿದಾನಂದಮೂರ್ತಿ ಎಂ, ೨೦೦೨, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಸ್ವಪ್ನ ಬುಕ್ ಹೌಸ್, ಬೆಂಗಳೂರು.

೧೧. ಚಿದಾನಂದಮೂರ್ತಿ ಎಂ, ೧೯೯೭, ಸಂಶೋಧನೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೨. ಜವರೇಗೌಡ, ೧೯೭೮, ಜಾನಪದ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೩. ಜಾರ್ಜ್ ಕುರಿಯನ್, ಬಿ.ಎಸ್.ಫಾರುಖ್ (ಮೂಲ) ಶ್ರೀ ಪ್ರಸಾದ್ (ಅನು) ೧೯೯೨, ಪ್ರಾಕೃತಿಕ ಭೂಗೋಳ ಶಾಸ್ತ್ರ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೧೪. ತ.ಸು.ಶಾಮರಾಯ, ೨೦೦೬, ಕನ್ನಡ ಸಾಹಿತ್ಯ ಚರಿತ್ರೆ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಸೂಚಿ, ಮೈಸೂರು.

೧೫. ತಿಪ್ಪೇರುದ್ರಸ್ವಾಮಿ ಹೆಚ್, ೧೯೯೮, ಶರಣರ ಅನುಭಾವ ಸಾಹಿತ್ಯ ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು.

೧೬. ದೇಜಗೌ, ೨೦೦೪, ಕುವೆಂಪು ಮತ್ತು ವಿಭೂತಿ ಪುರುಷರು, ತಳಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.

೧೭. ದೊಡ್ಡನಗೌಡರು ಜೋಳದರಾಶಿ, ೧೯೮೩, ಶ್ರೀ ಎರ್ರಿಸ್ವಾಮಿಗಳ ಶಿವಮಯ ಜೀವನ ಚರಿತ್ರೆ ಮತ್ತು ಚಿಕ್ಕಯ್ಯ ವಿರಚಿತ ಭಕ್ತಿ ಗೀತೆಗಳು, ಶ್ರೀ ಎರ್ರಿಸ್ವಾಮಿಗಳ ಜೀವಸಮಾಧಿ ಟ್ರಸ್ಟ್, ಚೇಳಗುರಿಕೆ.

೧೮. ದೊಡ್ಡನ ಗೌಡರು ಜೋಳದರಾಶಿ, ೧೯೮೧, ಚೇಳಗುರಿಕೆ ಎರ್ರಿತಾತ, ಐಬಿಹೆಚ್, ಪ್ರಕಾಶನ, ಬೆಂಗಳೂರು.

೧೯. ದೊಡ್ಡನಗೌಡರು ಜೋಳದರಾಶಿ, ೧೯೯೮, ಜೋಳದರಾಶಿ ಕಾವ್ಯ ಎಂ.ಬಿ.ಹೆಚ್.ಪ್ರಕಾಶನ, ಬೆಂಗಳೂರು.

೨೦. ನಾಗರಾಜ್ ಡಿ.ಆರ್, ೨೦೦೧, ಅಲ್ಲಮಪ್ರಭು ಮತ್ತು ಶೈವ ಪ್ರತಿಭೆ, ಅಕ್ಷರ ಪ್ರಕಾಶನ, ಸಾಗರ.

೨೧. ನಾಗೇಗೌಡ ಎಚ್.ಎಲ್, ೧೯೯೮, (ಸಂ), ಕನ್ನಡ ಜಾನಪದ ಕೋಶ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೨೨. ನಾಯಕ ಹಾ.ಮಾ, ೧೯೭೧, ಜಾನಪದ ಸ್ವರೂಪ, ತಳಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು.

೨೩. ನಾಗೇಶಶಾಸ್ತ್ರಿ ಶ್ರೀ ವೈ, ೧೯೬೬, ಲೀಲಾಮೃತ ಪುರಾಣ, ಎರ್ರಿಸ್ವಾಮಿಗಳ ಜೀವಸಮಾಧಿ ಮಠ, ಚೇಳಗುರಿಕೆ.

೨೪. ಪೂಜಾರ ವ್ಹಿ.ಜಿ, ೧೯೯೧, ವೀರಶೈವ ಸಾಹಿತ್ಯದಲ್ಲಿ ಪವಾಡ ಕಥೆಗಳು, ಪುಸ್ತಕ ಅಕಾಡೆಮಿ, ಕಲಬುರ್ಗಿ.

೨೫. ಪ್ರಭಾಕರ ಎ.ಎಸ್, ೧೯೯೯, ಮ್ಯಾಸಬೇಡರ ಕಥನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ಪ್ರೇಮಾನಂದ, ೧೯೯೭, ವಿಜ್ಞಾನ ಮತ್ತು ಪವಾಡಗಳು (ಅನು) ಪಾಂಡುರಂಗಶಾಸ್ತ್ರಿ, ಸೀತಾರಾಮಾ, ನವ ಕರ್ನಾಟಕ ಪ್ರಕಾಶನ, ಬೆಂಗಳೂರು.

೨೭. ಬಸವರಾಜ ಬಿ.ಸಿ, ೧೯೯೯, ಚೇಳಗುರಿಕೆ ಶ್ರೀ ಎರ್ರಿಸ್ವಾಮಿಗಳು, ತ್ರಿವೇಣಿ ಪಬ್ಲಿಕೇಷನ್ಸ್, ಚಾಮರಾಜನಗರ, ಮೈಸೂರು.

೨೮. ಬಸವರಾಜ ಸಬರದ, ೨೦೦೦, (ಸಂ) ಹೈದರಾಬಾದ್ ಕರ್ನಾಟಕದ ತತ್ವಪದಕಾರರು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೯. ಬಸವರಾಜ ಸಬರದ, ೧೯೯೫, ಗುಲಬರ್ಗಾ ಜಿಲ್ಲೆಯ ಅನುಭಾವಿ ಕವಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೦. ಭಕ್ತಿಗೀತೆಗಳು ಮತ್ತು ನಾಟಕ, ೨೦೦೯, ಶ್ರೀಎರ್ರಿತಾತ ಜೀವಸಮಾಧಿ ಸಮಿತಿ, ಚೇಳಗುರಿಕೆ

೩೧. ಮಲ್ಲೇಪುರಂ ಜಿ.ವೆಂಕಟೇಶ, ೨೦೦೪, ಅರಿವಿನ ಕಥನ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು.

೩೨. ಮುನಿಶ್ರೀ ತರುಣ ಸಾಗರ, ೨೦೦೮, ಕಹಿಮಾತ್ರೆಗಳು, ಭಾಗ-೪, ಅಹಿಂಸಾ ಮಹಾಕುಂಭ ಪ್ರಕಾಶನ, ಹರಿಯಾಣ.

೩೪. ಮೋಹನ್ ಎಸ್, ೨೦೦೮, ಮರಾಟಿ ನಾಯ್ಕರು, ಅಂಶು ಪ್ರಕಾಶನ, ಹೊಸಪೇಟೆ.

೩೫. ಮಂಜುನಾಥ ಬೇವಿನಕಟ್ಟಿ, ೨೦೦೪, ದೇಸೀ ಚಹರೆ, ರೂಪ ಪ್ರಕಾಶನ, ಮೈಸೂರು.

೩೬. ಮಂಜುನಾಥ ಬೇವಿನಕಟ್ಟಿ, ೨೦೦೭, ಜಾನಪದ ಉತ್ಪನನ, ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಕೇಷನ್ಸ್, ಬೆಂಗಳೂರು.

೩೭. ಮಂಜುನಾಥ ಬೇವಿನಕಟ್ಟಿ, ೧೯೯೭, ಜನಪದ ನಂಬಿಕೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೮. ಮಂಜುನಾಥ ಬೇವಿನಕಟ್ಟಿ, ೨೦೦೭, ಆದಿವಾಸಿ, ಸಾಹಿತ್ಯ ನಂದನ ಪ್ರಕಾಶನ, ಬೆಂಗಳೂರು.

೩೯. ಮಲ್ಲೇಪುರಂ ಜಿ.ವೆಂಕಟೇಶ್, ೧೯೯೬, ಮಹಲಿಂಗರಂಗ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೦. ರಹಮತ್ ತರೀಕೆರೆ, ೨೦೦೬, ಕರ್ನಾಟಕದ ನಾಥಪಂಥ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೧. ರಹಮತ್ ತರೀಕೆರೆ, ೨೦೦೧, ಕರ್ನಾಟಕದ ಸೂಫಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೨. ರಹಮತ್ ತರೀಕೆರೆ, ೨೦೦೦, (ಸಂ) ಧರ್ಮಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೩. ರಾಮಕೃಷ್ಣ ಮರಾಠ, ೨೦೦೭, (ಸಂ) ದಾಸೋಹ, ಪರಮಪೂಜ್ಯ ಲಿಂ ಶಿವಬಸವ ಸ್ವಾಮಿಗಳು, ಬೆಂಗಳೂರು.

೪೪. ವಿದ್ಯಾಶಂಕರ್ ಎಸ್, ೧೯೮೭, ವೀರಶೈವ ಪುರಾಣಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೫. ವಿಡಿಯೋ ಚಿತ್ರಗಳು, ೨೦೦೯, ಶಿವಯೋಗಿ ಈತ ಶ್ರೀ ಎರ್ರಿತಾತ ಜೀವ ಸಮಾಧಿ ಸಮಿತಿ, ಚೇಳಗುರಿಕೆ.

೪೬. ವೆಂಕಟೇಶ್ ಇಂದ್ವಾಡಿ, ೧೯೯೯, ಮಂಟೇಸ್ವಾಮಿ ಪರಂಪರೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೭. ವೆಂಕಟೇಶ್ ಇಂದ್ವಾಡಿ, ೨೦೦೪, (ಸಂ), ಮಂಟೇಸ್ವಾಮಿ ಕಾವ್ಯ: ಸಾಂಸ್ಕೃತಿಕ ಮುಖಾಮುಖಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೮. ವೇಮಲ್ ಗಟ್ಟಪ್ಪ ಶ್ರೇಷ್ಠಿ, ೨೦೦೧, (ಸಂ) ದಮ್ಮೂರು ಶ್ರೀ ಸದ್ಗುರು ವೆಂಕಾವದೂತರ ಚರಿತ್ರೆ, ಪ್ರಕಾಶಕರು: ವೇಮಲ ಟ್ರೇಡರ್ಸ್, ಹೊಸಪೇಟೆ.

೪೯. ಶಿರೂರ ಬಿ.ವಿ, ೧೯೯೨, ಸಂಶೋಧನಾ ಸ್ವರೂಪ, ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ.

೫೦. ಶಿವಾನಂದ ವಿರಕ್ತಮಠ, ೧೯೭೮, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೧. ಶೇಷ ನವರತ್ನ, ೧೯೯೮, ಜಾಗತಿಕ ಧರ್ಮಗಳು, ಸಮಾಜ ಪುಸ್ತಕಾಲಯ, ಧಾರವಾಡ

೫೨. ಸತ್ಯವೇದ, ೧೯೮೦, ಬೈಬಲ್ ಸೊಸೈಟಿ ಆಫ್ ಇಂಡಿಯಾ, ಬೆಂಗಳೂರು.

೫೩. ಸಿದ್ಧಲಿಂಗಯ್ಯ, ೨೦೦೭, ಜನಸಂಸ್ಕೃತಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೫೪. ಸುಬ್ಬಣ್ಣ ಎಂ.ಎಸ್, ಚಾಕುಬಂಡಿ, ೨೦೦೩, ಶ್ರೀ ಶಿವರಾಮ ಆವಧೂತರ ಜೀವನ ಚರಿತ್ರೆ, ಪ್ರಕಾಶಕರು: ಶ್ರೀವಿದ್ಯಾನಂದ ಭಾರತಿ ಸ್ವಾಮಿಗಳು, ಶ್ರೀ ಶಿವರಾಮಾವಧೂತರ ಆಶ್ರಮ, ಹಂಪಿ.

೫೫. ಸೂರ್ಯನಾಥ ಯು ಕಾಮತ್ (ಸಂ), ೧೯೮೪, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ-೧, ಕರ್ನಾಟಕ ಸರ್ಕಾರ ಪಬ್ಲಿಕೇಷನ್ಸ್.

೫೬. ಹಳ್ಳಿಕೇರಿ ಎಫ್.ಟಿ., ೨೦೦೬, (ಸಂ) ಚಿದಾನಂದಾವಧೂತ ಚಾರಿತ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೭. ಹಿರೇಮಠ ಆರ್.ಸಿ, ೧೯೭೨, ಷಟ್‌ಸ್ಥಳ ಪ್ರಭೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೮. ಹಿರೇಮಠ ಆರ್.ಸಿ, ೧೯೯೦, ಗುಬ್ಬಿ ಮಲ್ಲಣಾರ್ಯ ವಿರಚಿತ ವೀರಶೈವಾಮೃತ ಕರಾಣ, ಭಾಗ-೧. ಎನ್.ಎಸ್.ಎಸ್. ಕಲ್ಯಾಣಕೇಂದ್ರ ಪ್ರಕಾಶಕರು, ಬೆಂಗಳೂರು.

೫೯. Writtegen stein tranctacus logico philosophicus. Trans: DF Pears and BF MC Gunness, Routlerge and Icegan Paul, London, 1961. .



ಶ್ರೀ ಎರ್ರಿತಾತನವರು ಚೆಳ್ಳಗುರ್ಕಿಗೆ ಬರುವ ಮುಂಚೆ ಮಲ್ಲಪ್ಪನ ಬೆಟ್ಟದ ಮೇಲೆ ತಪೋವನದಲ್ಲಿರುವ ದೃಶ್ಯ



ಶ್ರೀ ಎರ್ರಿತಾತನವರನ್ನು ಮಂಗಳವಾದ್ಯ ಹಾಗೂ ಪಾದ ಪೂಜೆಯೊಂದಿಗೆ ಸ್ವಾಗತಿಸುತ್ತಿರುವುದು



ಶ್ರೀ ಎರ್ರಿತಾತನವರು ಶಿವದೇವಸ್ಥಾನದಲ್ಲಿ ಕಲ್ಲು ಬಸವನನ್ನು ಕರೆದಾಗ ಅವರೆಡೆಗೆ ಬರುತ್ತಿರುವ–ಪವಾಡ



ಶ್ರೀ ಎರ್ರಿತಾತನವರು ಹುತ್ತದ ಮೇಲೆ ಕುಳಿತು ಕುರುಬನಿಗೆ ಹಾವನ್ನು ಆಶೀರ್ವದಿಸಿದಾಗ ಬಂಗಾರವಾದದ್ದು–ಪವಾಡ



ಶ್ರೀ ಎರ್ರಿತಾತನವರು ಭಕ್ತನ ಮನೆಯಲ್ಲಿ ಸತ್ತ ಎಮ್ಮೆ ಕರುವನ್ನು ಬದುಕಿಸಿದ–ಪವಾಡ



ಶ್ರೀ ಎರ್ರಿತಾತನವರನ್ನು ಕಳ್ಳರು ತಮ್ಮ ವೃತ್ತಿಗೆ ಯಶಸ್ಸು ನೀಡುವಂತೆ ಆಶೀರ್ವದಿಸು ಎಂದು ಕೋರಿಕೊಂಡಾಗ ತಾತನವರು ಮೌನವಿದ್ದುದನ್ನು ಕಂಡು ಕೋಪಿಷ್ಠರಾದ ಕಳ್ಳರು ತಾತನ ತಲೆಗೆ ತೆಂಗಿನಕಾಯಿ ಒಡೆದಾಗ ಕಳ್ಳರಿಗೆ ರಕ್ತಪಾತವಾದ–ಪವಾಡ



ಎರ್ರಿತಾತನ ಮಠದ ಗೋಪುರ



ಚಳ್ಳಗುರಿಕಿ ಗ್ರಾಮದ ಪ್ರವೇಶದ್ವಾರ



ಧ್ಯಾನ ಮಂದಿರ



ಎರ್ರಿತಾತನ ಜೀವ ಸಮಾಧಿ



ರಥದ ಮನೆ



ಮಠದ ದಾಸೋಹ ಮಂದಿರ



ಎಡ್ರಿತಾತನ ತೂಗುವ ತೊಟ್ಟಿಲು



ಮಠದ ಕಲ್ಯಾಣ ಮಂಟಪ



ಮಠದ ವಸತಿ ಗೃಹಗಳು



ಮಠದ ವಿದ್ಯಾರ್ಥಿಗಳ ವಸತಿ ನಿಲಯ



ಎಡ್ರಿತಾತನವರ ಸರಕಾರಿ ಪ್ರೌಢಶಾಲೆ



ಮಠದ ಒಳಾಂಗಣ



ಎರ್ರಿತಾತನ ತೂಗುವ ತೊಟ್ಟಿಲು



ಎರ್ರಿತಾತನ ಉಚ್ಚಯ್ಯ



ಎರ್ರಿತಾತನ ರಥೋತ್ಸವ



ಜಾತ್ರೆಯ ನಂದಿಕೋಲು



ಮಲ್ಲಪ್ಪನ ಮಟ್ಟಿಯ ಹೆಬ್ಬಾಗಿಲು



ಎರ್ರಿತಾತನು ಮೊದಲು ಬಂದು ನೆಲೆಸಿದ ಮಲ್ಲಪ್ಪನ ಮಟ್ಟಿ

